# ಕರ್ತಾರ

ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ
ಸಂಪ್ರೀತಿ ಅರ್ಪಿಸಿದ ಸಂಭಾವನಾ ಗ್ರಂಥ



ಸಂಚಾಲಕರು :

ಡಾ. ಎಸ್. ಎಸ್. ನರಸಣಗಿ, *M.S. (Bom)*

ಸಂಪಾದಕರು :

ಬಿ. ಮಹಾದೇವಪ್ಪ, *M. A.*



1975



ಪ್ರಕಾಶಕರು :

ಬಿ. ಡಿ. ಜತ್ತಿ ಸನ್ಮಾನ ಸಮಿತಿ
'ಹಿಂದಿ ಪ್ರಚಾರ ಸಭಾ' ಕಲಬುರ್ಗಿ

KARTAR

A collection of Articles and Poems written, felicitating His Excellency Sri B. D. Jatti, Vice President of India.

Total Pages: 10+XLIV+208.

ಕರ್ತಾರ

ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ ಅರ್ಪಿಸಲಾದ ಲೇಖನ ಮತ್ತು ಕವನ ಸಂಗ್ರಹಗಳ ಸಂಭಾವನಾ ಗ್ರಂಥ.

ಒಟ್ಟು ಪುಟಗಳು: 10+XLIV+208





ಮೊದಲ ಮುದ್ರಣ

4-10-1975

ಬೆಲೆ:

ಸಾದಾ ಪ್ರತಿ : ಹನ್ನೆರಡು ರೂಪಾಯಿಗಳು.

ಉತ್ತಮ ಪ್ರತಿ : ಹದಿನೈದು ರೂಪಾಯಿಗಳು.

ಮುದ್ರಕರು :

"ವಿಶ್ವಕಲ್ಯಾಣ" ಮುದ್ರಣಾಲಯ

ಮಾರ್ಕೆಟ್ ರಸ್ತೆ, ಯಾದಗಿರಿ.



" ಶರಣರನೊಸಲಿಗೆ ವಿಭೂತಿಯೇ ಶೃಂಗಾರ " ಸದಾ ಮುಗುಳು ನಗೆಯ
ಶ್ರೀ ಬಿ. ಡಿ. ಜತ್ತಿ ಅವರು



ಧರ್ಮ ಪರಾಯಣೆ ಶ್ರೀಮತಿ ಸಂಗವ್ವ ಜತ್ತಿ ಉಪರಾಷ್ಟ್ರಪತಿ ಭವನದಲ್ಲಿ.



ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿ ಅವರಿಗೆ ಹುಟ್ಟು ಹಬ್ಬದ ಶುಭಾಶಯಗಳನ್ನು ಶ್ರೀ ಬಿ. ಡಿ. ಜತ್ತಿ ಅವರು ಕೋರುತ್ತಿದ್ದಾರೆ (೧೯-೧೧-೧೯೭೪)



ಬಸವ ಸಮಿತಿ ಮುಕ್ತಾಯದಲ್ಲಿ ಅನುಭವ ಮಂಟಪ ನಿರ್ಮಾಣಕ್ಕೆ ಮರಿದೇವರ ಗುಡ್ಡದ ಮೇಲೆ ಗುದ್ದಲಿಪೂಜೆ ನೆರವೇರಿಸುತ್ತಿರುವುದು

# ಪ್ರಸ್ತಾವನೆ

೧೯೭೫ ರ ಆರಂಭದಲ್ಲಿ ಉಪರಾಷ್ಟ್ರಪತಿಗಳಾದಂಥ ಮಾನ್ಯ ಶ್ರೀ ಜತ್ತಿಯವರು ಬರುವ ಕಾರ್ಯಕ್ರಮವನ್ನು ಕೇಳಿಕೊಂಡು, ಅವರನ್ನು ಸಂದರ್ಶಿಸಲು ಮತ್ತು ಹೈದರಾಬಾದ ಕರ್ನಾಟಕದಲ್ಲಿ ಅವರ ಕಾರ್ಯಕ್ರಮವನ್ನು ಏರ್ಪಡಿಸುವುದಕ್ಕೆ ಅನುಮತಿ ಪಡೆಯಲು, ನಾನು ಬೆಂಗಳೂರಿಗೆ ಹೋಗಿದ್ದೆ. ಕಲ್ಬುರ್ಗಿಯ ಸುಪ್ರಸಿದ್ಧ ಸರ್ಜನ್‌ರೂ, ನನ್ನ ಆತ್ಮೀಯರೂ ಆದಂಥ ಡಾ. ನರಸಣಗಿಯವರು ಮಾನ್ಯ ಉಪರಾಷ್ಟ್ರಪತಿಗಳನ್ನು ಕಾಣಲು ಮತ್ತು ಅಕ್ಟೋಬರ್ ೫ ರಂದು ಕಲ್ಬುರ್ಗಿಯಲ್ಲಿ ಸೇರಲಿರುವ ಅಂತರರಾಷ್ಟ್ರೀಯ ಸರ್ಜನರ ಕಾನ್ಫರೆನ್ಸ ಉದ್ಘಾಟನೆಗೆ ಶ್ರೀ ಜತ್ತಿಯವರನ್ನು ಒಪ್ಪಿಸಲು ಬಂದಿದ್ದರು. “ ಇನ್ನೂ ಸಮಾರಂಭ ಬಹಳ ದೂರ ಇದೆ. ಒಂದೆರಡು ತಿಂಗಳು ಇದ್ದಾಗ ಇದನ್ನು ತಿಳಿಸಿ. ಆಗ ನಿಶ್ಚಿತವಾಗಿ ಬರುವ ಬಗ್ಗೆ ಹೇಳುವೆನು ” ಎಂದು ಶ್ರೀ ಜತ್ತಿಯವರು ಹೇಳಿದರು. “ ಬಸವ ಜಯಂತಿಯ ದಿನದಂದು ಅಸ್ಪೃಶ್ಯತಾ ನಿವಾರಣಾ ಚಳುವಳಿಯನ್ನು ಕಲ್ಬುರ್ಗಿ ಅಥವಾ ಯಾದಗಿರಿಯಲ್ಲಿ ಪ್ರಾರಂಭಿಸಬೇಕೆಂದು ಮಾಡಿದ್ದೇವೆ. ಅದಕ್ಕಾಗಿ ತಾವು ಅದನ್ನು ಉದ್ಘಾಟಿಸಲು ಬರಬೇಕು ” ಎಂದು ಮಾನ್ಯ ಉಪರಾಷ್ಟ್ರಪತಿಗಳಿಗೆ ನಾನು ನಿವೇದಿಸಿಕೊಂಡೆ. ಜೊತೆಗೆ ಅದೇ ಸಮಯದಲ್ಲಿ ನಮ್ಮೆಲ್ಲರ ಸಂತೋಷದ ದ್ಯೋತಕವಾಗಿ ಒಂದು ಸತ್ಕಾರ ಸಮಾರಂಭವನ್ನು ಆಯೋಜಿಸಬೇಕೆಂಬ ಆಲೋಚನೆಯೂ ಇದೆಯೆಂದು ಸೂಚಿಸಿದೆ. ಶ್ರೀ ಜತ್ತಿಯವರು “ ಆಗ ಎಂದರೆ ಮೇನಲ್ಲಿ ರಾಜಸಭೆಯ ಅಧಿವೇಶನ ನಡೆಯುವವು. ಅದಕ್ಕಾಗಿ ಮುಂದೆ ಸೂಕ್ತ ದಿನಗಳನ್ನು ಆಯೋಜಿಸಿ, ಕಾರ್ಯಕ್ರಮವನ್ನು ಏರ್ಪಡಿಸಿರಿ. ನಾನು ಬರುವೆ. ಆದರೆ ಸನ್ಮಾನ ಸಮಾರಂಭಗಳನ್ನು ಮಾತ್ರ ಮಾಡಬೇಡಿ ”—ಎಂದು ಹೇಳಿದರು. ಡಾ. ನರಸಣಗಿಯವರು ಆಗ ಅಲ್ಲಿಯೇ ಇದ್ದರು, ಅವರೂ ಕೂಡ ತಮ್ಮ ಬಗ್ಗೆ ಒಂದು ಪುಸ್ತಕವನ್ನು ಪ್ರಕಟಿಸಬೇಕೆಂದು ಮಾಡಿದ್ದೇವೆ. ಅಪ್ಪಣೆ ಕೊಡಬೇಕೆಂದು ಕೇಳಿಕೊಂಡರು. ಅದಕ್ಕೂ ಶ್ರೀ ಜತ್ತಿಯವರು ನಮ್ರವಾಗಿ ನಿರಾಕರಿಸಿದರು. “ ಸನ್ಮಾನ ಸಮಾರಂಭವನ್ನು ಏರ್ಪಡಿಸುವುದಾಗಲೀ ಅಥವಾ ತಮ್ಮ ಬಗ್ಗೆ ಗ್ರಂಥವನ್ನು ಪ್ರಕಟಿಸುವುದಾಗಲೀ, ತಾವು ಒಪ್ಪಿಕೊಳ್ಳುವ ಅಥವಾ ಒಪ್ಪಿಕೊ

ಳ್ಳದಿರುವ ಮಾತಲ್ಲ. ಇದು ನಮ್ಮೆಲ್ಲರ ಮನದಲ್ಲಿ ಹುದುಗಿದ, ತಮ್ಮ ಬಗ್ಗೆ ಇದ್ದ ಗೌರವ, ಆದರ, ಸಂತೋಷ ಮೊದಲಾದವುಗಳನ್ನು ಪ್ರಕಟಿಸುವ ಮಾರ್ಗವಾದುದಕ್ಕಾಗಿ ನಾವು ತಡೆಯುವಂತಿಲ್ಲ"-ಎಂದು ನಾನು ತಿಳಿಸಿದೆ.

ಆ ನಂತರ ಪುನಃ ಅಕ್ಟೋಬರ್ ತಿಂಗಳಲ್ಲಿ ಸರ್ಜನರ ಕಾನ್ಫರೆನ್ಸ ಮತ್ತು ನಮ್ಮ ಕಾರ್ಯಕ್ರಮಗಳ ಬಗ್ಗೆ ಆಮಂತ್ರಣ ಕೊಡಲು ದಿನಾಂಕ ಏಪ್ರಿಲ್ ೧೨, ೧೯೭೫ ಕ್ಕೆ ಹೈದರಾಬಾದಿಗೆ ನಾನು, ಬಿ. ಮಹಾದೇವಪ್ಪನವರು ವಿದ್ಯಾಧರ ಗುರೂಜಿಯವರು ಮತ್ತು ಶ್ರೀ ಪ್ರಭುರಾವಜಿ ಕಂಬಳಿವಾಲೆ — ಮೊದಲಾದವರೂ ಹೋಗಿದ್ದೆವು. ಆಗ ಕಲ್ಬುರ್ಗಿಯಿಂದ ಡಾ. ನರಸಣಗಿಯ ವರಿಗೂ ಬರಲು ಹೇಳಿದ್ದೆವು. ಹೈದರಾಬಾದದಲ್ಲಿ ನಮ್ಮ ಎಲ್ಲ ಕಾರ್ಯಕ್ರಮಗಳ ವಿವರಗಳನ್ನು ಮತ್ತು ಗ್ರಂಥ ಪ್ರಕಾಶನದ ಬಗ್ಗೆ ನಮ್ಮ ನಿಶ್ಚಿತವಾದ ಧೋರ ಣೆಯನ್ನು ಮಾನ್ಯ ಶ್ರೀ ಜತ್ತಿಯವರಿಗೆ ತಿಳಿಸಿದೆವು. ಅವರು ಕಾರ್ಯಕ್ರಮಗಳ ಬಗ್ಗೆ ನಿಶ್ಚಿತವಾಗಿ ಮುಂದೆ ತಿಳಿಸುವೆವು; ಆದರೆ ಗ್ರಂಥ ಮೊದಲಾದವುಗಳು ಬೇಡ ಎಂಬ ಮಾತನ್ನು ಪುನಃ ಸೂಚಿಸಿದರು, "ಇದು ನಮ್ಮ ಕರ್ತವ್ಯ; ನಾವು ಮಾಡುತ್ತಿದ್ದೇವೆ. ತಾವು ಇದಕ್ಕೆ ತಡೆಯಬಾರದು" ಎಂದು ನಾವು ಆಗ್ರಹ ಪೂರ್ವಕವಾಗಿ ಅರಿಕೆ ಮಾಡಿಕೊಂಡೆವು.

ಆ ನಂತರ ಡಾ. ನರಸಣಗಿಯವರೂ, ನಾನು ಕೂಡಿ ಸಮಾಲೋಚಿಸಿದೆವು. ಡಾ. ನರಸಣಗಿಯವರು ಒಂದು ಗ್ರಂಥ ಶ್ರೀ ಜತ್ತಿಯವರ ಬಗ್ಗೆ ಪ್ರಕಟಿಸಬೇಕು. ಆದರೆ ಅದು ಹೇಗೆ, ಏನು ಎಂಬ ವಿವರಗಳನ್ನು ಇನ್ನೂ ಆಲೋಚಿಸಿರಲಿಲ್ಲ. ಆಗ ನಾನು ಅವರಿಗೆ "ಹೈದರಾಬಾದ ಕರ್ನಾಟಕ ಮಟ್ಟದ ಒಂದು ಸನ್ಮಾನ ಸಮಾರಂಭವನ್ನು ಶ್ರೀ ಜತ್ತಿಯವರಿಗೆ ಏರ್ಪಡಿಸಿದಾಗ ಆ ಸಮಾರಂಭದಲ್ಲಿ ಈ ಗ್ರಂಥವನ್ನು ಅವರಿಗೆ ಅರ್ಪಿಸೋಣ" — ಎಂದು ಸೂಚಿಸಿದೆ. ಮತ್ತು ಈ ಗ್ರಂಥ ಇಡೀ ಹೈದರಾಬಾದ ಕರ್ನಾಟಕದ ಜನತೆಯ ಪರವಾಗಿ ಇರಬೇಕೆಂಬ ಭಾವ ನೆಯನ್ನು ವ್ಯಕ್ತಪಡಿಸಿದೆ. ಅದಕ್ಕೆ ಅವರು ಸಂತೋಷದಿಂದ ಒಪ್ಪಿಕೊಂಡರು.

ಈ ಬಗ್ಗೆ ಒಂದು ಸನ್ಮಾನ ಸಮಿತಿಯ ರಚನೆಯಾಗುವವರೆಗೆ ತಾವು ಗ್ರಂಥ ಸಂಚಾಲಕರಾಗಿ ಮತ್ತು ಶ್ರೀ ಬಿ. ಮಹಾದೇವಪ್ಪನವರು ಸಂಪಾದಕ ರಾಗಿ ಕಾರ್ಯಪ್ರವೃತ್ತರಾಗಬೇಕೆಂದು ತಿಳಿಸಿದೆ. ಅದರಂತೆ ಅವರು ಸಂಚಾ ಲಕರಾಗಿ ಮತ್ತು ಶ್ರೀ ಬಿ. ಮಹಾದೇವಪ್ಪನವರು ಸಂಪಾದಕರಾಗಿ ಗ್ರಂಥದ ಬಗ್ಗೆ ಆಯೋಜನೆ ಮಾಡಹತ್ತಿದರು. ಶ್ರೀ ಬಿ. ಮಹಾದೇವಪ್ಪನವರು ಸಂಪಾದಕರು, ಬಹಳ ಜನ ಸಾಹಿತಿಗಳಿಗೆ, ಪ್ರಮುಖರಿಗೆ, ಪತ್ರ ಬರೆದು ಲೇಖನಗಳನ್ನು ಸಂಗ್ರಹಿಸತೊಡಗಿದರು.

ಮುಂದೆ ಮಾನ್ಯ ಜತ್ತಿಯವರು ಬೆಂಗಳೂರಿಗೆ ಬಸವ ಸಮಿತಿಯ ಸರ್ವ ಸದಸ್ಯರ ಸಭೆಗೆ ಬಂದಾಗ ದಿನಾಂಕ ೧೩–೭–೧೯೭೪ ಕ್ಕೆ ನಮ್ಮ ಎಲ್ಲ ಯೋಜನೆಗಳ ಬಗ್ಗೆ ತಿಳಿಸಿ, ಅಕ್ಟೋಬರದಲ್ಲಿ 'ಮರಣವೇ ಮಹಾನವಮಿ'ಯ ಸಂದರ್ಭಕ್ಕನುಗುಣವಾಗಿ ಅಸ್ಪೃಶ್ಯತಾ ನಿವಾರಣ ಕಾರ್ಯವನ್ನು ಕೈಕೊಳ್ಳುವದು ಸೂಕ್ತ ದಿನವಾಗುತ್ತದೆ ಮತ್ತು ಡಾ॥ ನರಸಣಗಿಯವರು ಆಯೋಜಿಸುತ್ತಿದ್ದ ಅಂತರರಾಷ್ಟ್ರೀಯ ಸರ್ಜನ್ಸ ಕಾನ್ಫರೆನ್ಸನ್ನು ಉದ್ಘಾಟಿಸಬೇಕಾದ ಅಕ್ಟೋಬರ ೫, ಈ ಕಾರ್ಯಕ್ರಮಕ್ಕೆ ಅನುಕೂಲಮಾಡಿಕೊಳ್ಳುತ್ತೇವೆ – ಎಂದು ಹೇಳಿದಾಗ ಶ್ರೀ ಜತ್ತಿಯವರು ಸಮ್ಮತಿ ಸೂಚಿಸಿ, ವಿವರಗಳನ್ನು ಬರೆದು ಕಳಿಸಿರಿ. ನಾನು ಉತ್ತರ ಬರೆಸಿ ಕಳಿಸುವೆನು ಎಂದು ಹೇಳಿದರು- ಇನ್ನೇನು ಕಾರ್ಯಕ್ರಮ ಸಮೀಪವೇ ಬಂತಲ್ಲ ಎಂದು ಶ್ರೀ ಬಿ. ಮಹಾದೇವಪ್ಪನವರು ಲೇಖನ ಸಂಗ್ರಹಗಳ ಕಾರ್ಯವನ್ನು ಬಹಳ ಜೋರಾಗಿ ಪ್ರಾರಂಭಿಸಿದರು. ಮುಂದೆ ನಮ್ಮ ಕಾರ್ಯಕ್ರಮಗಳ ಬಗ್ಗೆ ಶ್ರೀ ಜತ್ತಿ ಅವರಿಂದ ಒಪ್ಪಿಗೆ ಬಂದಕೂಡಲೇ ೨೭ ನೇ ಆಗಸ್ಟ ೧೯೭೪ ರಂದು ಕಲ್ಬುರ್ಗಿಯ ಸೇಡಂ ರಸ್ತೆಯ 'ಹಿಂದಿ ಪ್ರಚಾರ ಸಭೆಯಲ್ಲಿ ಹೈದರಾಬಾದ ಕರ್ನಾಟಕದ ಮೂರು ಜಿಲ್ಲೆಗಳ ಪ್ರಮುಖರು ಸೇರಿ ಒಂದು ಸನ್ಮಾನ ಸಮಿತಿಯನ್ನು ರಚಿಸಿ, ನನ್ನನ್ನು ಅಧ್ಯಕ್ಷರನ್ನಾಗಿ ಮಾಡಿದರು. ಈ ಕೆಳಕಂಡಂತೆ ಸಂಪೂರ್ಣ ಅಧಿಕಾರವುಳ್ಳ ಕಾರ್ಯಕಾರಿ ಸಮಿತಿಯನ್ನು ಅಂದು ಆರಿಸಿದರು-

| | | |
|---|---|---|
| ಅಧ್ಯಕ್ಷರು | : | ಶ್ರೀ ವಿಶ್ವನಾಥರಡ್ಡಿ ಮುದ್ನಾಳ ಎಂ. ಎಲ್. ಎ. |
| ಉಪಾಧ್ಯಕ್ಷರು | : | ಶ್ರೀ ಸೋಮರಾಮನಗೌಡ ರಾಯಚೂರು |
| ,, | | ಶ್ರೀ ಹೋಮಿ – ಎಂ. ಇರಾನಿ ಕಲ್ಬುರ್ಗಿ. |
| ,, | | ಶ್ರೀ ರಾಮಚಂದ್ರ ವೀರಪ್ಪ ಹುಮನಾಬಾದ |
| ಪ್ರಧಾನ ಕಾರ್ಯದರ್ಶಿ | : | ಶ್ರೀ ವಿದ್ಯಾಧರ ಗುರೂಜಿ |
| ಕಾರ್ಯದರ್ಶಿ | : | ಶ್ರೀ ಧರ್ಮಸಿಂಗ, ಎಂ. ಎಲ್. ಎ. |
| ,, | | ಶ್ರೀ ಸುಭಾಷ ಪಾಟೀಲ ,, |
| ,, | | ಶ್ರೀ ಜಿ. ಪಿ. ಒಡೆಯರಾಜ ಎಂ. ಎಲ್. ಸಿ. |
| ಕೋಶಾಧ್ಯಕ್ಷ | : | ಶ್ರೀ ಶ್ರೀನಿವಾಸ ರಘೋಜಿ- |

ಈ ಸಭೆಯಲ್ಲಿ ಸಂಭಾವನ ಗ್ರಂಥವನ್ನು ಅರ್ಪಿಸುವ ಬಗ್ಗೆ ಇದ್ದ ಡಾ॥ ನರಸಣಗಿಯವರಿಂದ ಪ್ರೇರಿತವಾದ ನನ್ನ ವಿಚಾರವನ್ನು ಇಟ್ಟಾಗ ಎಲ್ಲ ಸದಸ್ಯರು ಹೃತ್ಪೂರ್ವಕವಾಗಿ ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಆ ದಿನಾಂಕದೊಳಗಾಗಿಯೇ ಶ್ರೀ ಬಿ. ಮಹಾದೇವಪ್ಪನವರು ಬಹುತೇಕ ಎಲ್ಲ

ಲೇಖನಗಳನ್ನು ಸಂಗ್ರಹಿಸಿದ್ದರು. ಅದಕ್ಕಾಗಿ ನನ್ನ ಸೂಚನೆಯ ಮೇರೆಗೆ ಅಂದಿನ ಆ ಸಭೆಯಲ್ಲಿ ಮತ್ತು ೭ ನೇ ಸಪ್ಟೆಂಬರದ ಕಾರ್ಯಕಾರಿ ಸಮಿತಿ ಮತ್ತು ಸರ್ವ ಸದಸ್ಯರ ಸಭೆಯಲ್ಲಿ' ಸನ್ಮಾನ ಸಮಾರಂಭದ ಅಂಗವಾಗಿ ಈ ಸಂಭಾವನಾ ಗ್ರಂಥವನ್ನು ಸಿದ್ಧಪಡಿಸಲು ಡಾ॥ ನರಸಣಗಿಯವರನ್ನು ಸಂಚಾಲಕರನ್ನಾಗಿ ಬಿ. ಮಹಾದೇವಪ್ಪನವರನ್ನು ಸಂಪಾದಕರನ್ನಾಗಿ ಅಧಿಕೃತವಾಗಿ ಘೋಷಿಸಿ ಪುಸ್ತಕದ ಪ್ರಕಟನೆಯ ಕಾರ್ಯವನ್ನು ಮುಂದುವರಿಸಲು ಆದೇಶ ನೀಡಲಾಯಿತು. ಶ್ರೀ ಬಿ. ಮಹಾದೇವಪ್ಪನವರು ಲೇಖನ ಸಂಗ್ರಹದ ಸಂಪೂರ್ಣ ಕಾರ್ಯ ಮಾಡಿದಾಗ್ಯೂ ಗ್ರಂಥದ ಬಗ್ಗೆ ಪೂರ್ಣ ಯೋಜನೆ ಅವರೇ ರೂಪಿಸಿ, ತಯ್ಯಾರಿಟ್ಟಾಗ್ಯೂ ಈ ಗ್ರಂಥಕ್ಕೆ ಒಂದು ಪ್ರಾತಿನಿಧಿಕ ಸ್ವರೂಪ ಬರಬೇಕೆಂಬ ದೃಷ್ಟಿಯಿಂದ ಹೈದರಾಬಾದ ಕರ್ನಾಟಕದ ಮೂರು ಜಿಲ್ಲೆಗಳ ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಅಧ್ಯಕ್ಷರುಗಳಾದಂಥ ಶ್ರೀ ಭೀಮಸೇನರಾವ ತವಗ (ಕಲ್ಬುರ್ಗಿ), ಡಾ॥ ರಾಮಕೃಷ್ಣ (ರಾಯಚೂರ) ಮತ್ತು ಶ್ರೀ ಹಣಮಂತಪ್ಪ ಪಾಟೀಲ (ಬೀದರ) ಇವರನ್ನು ಸಲಹೆಗಾರರನ್ನಾಗಿ ಈ ಗ್ರಂಥ ರಚನೆಯ ಕಾರ್ಯಕ್ಕೆ ಆರಿಸಿಕೊಳ್ಳಲಾಯಿತು. ಈ ಒಂದು ಪ್ರಯತ್ನದ ಫಲವಾಗಿ ಈ ಸಂಭಾವನಾ ಗ್ರಂಥವನ್ನು ನಮ್ಮ ನೆಚ್ಚಿನ ನಾಯಕರೂ, ದಕ್ಷ ಆಡಳಿತಗಾರರೂ, ಸೂಕ್ಷ್ಮ ರಾಜಕಾರಣಿಗಳೂ, ಮೆಚ್ಚಿನ ಸಾಮಾಜಿಕ ಧುರೀಣರೂ, ನೈತಿಕದ ನೆಲೆಯೂ ಆಧ್ಯಾತ್ಮಿಕ ಸಾಧಕರೂ, ಶ್ರೇಷ್ಠ ಅನುಭಾವಿಗಳೂ, ಬಸವ ಸಮಿತಿಯ ಅಧ್ಯಕ್ಷರಾಗಿ ಬಸವ ತತ್ವ ಪ್ರಚಾರದ ಹೊಣೆಯನ್ನು ತಲೆಯ ಮೇಲೆ ಹೊತ್ತುಕೊಂಡು ಜಗದಾದ್ಯಂತ ಅದರ ಪ್ರಚಾರ ಮಾಡುವ, ಗುರಿಯನ್ನು ಇಟ್ಟುಕೊಂಡು ತಮ್ಮ ವೈಯಕ್ತಿಕ ಸಾಧನೆಗಳ ಮೂಲಕ ನಮ್ಮ ರಾಷ್ಟ್ರದ ಎರಡನೇ ಉನ್ನತ ಸ್ಥಾನವಾದಂಥ ಉಪರಾಷ್ಟ್ರಪತಿಯ ಅಧಿಕಾರದಲ್ಲಿರುವ ಮಾನ್ಯ ಶ್ರೀ ಬಿ. ಡಿ. ಜತ್ತಿಯವರಿಗೆ ಇಡೀ ಹೈದರಾಬಾದ ಕರ್ನಾಟಕದ ಜನತೆಯ ಹೃದಯದಲ್ಲಿ ಹುದುಗಿದ್ದ ಸಂತೋಷ, ಗೌರವ, ಪ್ರೀತಿ ಆದರ ಭಾವನೆಗಳ ಪ್ರತೀಕವಾಗಿ ಈ ಸಂಭಾವನಾ ಗ್ರಂಥವನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದೇವೆ. ಈ ಪುಸ್ತಕವನ್ನು ಎಲ್ಲರೂ ಹೃತ್ಪೂರ್ವಕ ಸ್ವಾಗತಿಸುವಿರಾಗಿ ನಂಬಿದ್ದೇನೆ.

ವಿಶ್ವನಾಥರಡ್ಡಿ ಮುದ್ನಾಳ  
ಅಧ್ಯಕ್ಷರು  
ಶ್ರೀ ಬಿ. ಡಿ. ಜತ್ತಿ ಸನ್ಮಾನ ಸಮಿತಿ  
ಹಿಂದಿ ಪ್ರಚಾರ ಸಭಾ, ಕಲಬುರ್ಗಿ.



ರಾಷ್ಟ್ರಪತಿ ಶ್ರೀ ಫಕ್ರುದ್ದೀನ ಅಲಿ ಅಹಮದ್ ಹಾಗೂ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರ ಆತ್ಮೀಯ ಸಮಾಗಮ.



ಕಲ್ಬುರ್ಗಿಯ ಶ್ರೀ ಬಸವಣ್ಣನವರ ಅಷ್ಟಶತಮಾನೋತ್ಸವದ ಉದ್ಘಾಟನೆ ಬಳಿಕ ಧಾರವಾಡದ ಜಗನ್ಮಾತಾ ಅಕ್ಕಮಹಾದೇವಿ ಆಶ್ರಯದ ಮಾತೆ ಮಹಾದೇವಿಯವರೊಂದಿಗೆ ಧರ್ಮಚರ್ಚೆ ಪಕ್ಕದಲ್ಲಿದ್ದವರು ಶ್ರೀ ವಿಶ್ವನಾಥರಡ್ಡಿ ಮುದ್ನಾಳ ಅವರು

# ಸಂಪಾದಕೀಯ

ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು
ನಾನಾವಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ
ನೀಕೊಡುವೆಯೆಂಬುದ ನಾ ಬಲ್ಲೆನು
ನೀಕೊಟ್ಟದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ ಕೂಡಲಸಂಗಮದೇವಾ

ಇದು ವೀರಶೈವದ ಕರ್ತೃ ಕರ್ತವ್ಯವನ್ನು ವಿಶದೀಕರಿಸುವುದೆಂದು ಭಾವಿಸುತ್ತೇವೆ. ಎಲ್ಲವನ್ನೂ ನಾವು ಮಾಡುತ್ತೇವೆ ಆ ಕರ್ಮ ಫಲ ಶಿವ ಕೊಡುತ್ತಾನೆ ಎಂಬದು ನಮ್ಮ ನಂಬಿಕೆ 'ನಾಹಂ ಕರ್ತಾಹರಿಃ' ಎಂಬಂತೆ ಮಾಡುವವನೂ ನಾನಲ್ಲ; ಮಾಡಿಸಿಕೊಳ್ಳುವವನೂ ನಾನಲ್ಲ ಎಂಬ ನಿರಾಶಾವಾದನಮ್ಮಲ್ಲಿಲ್ಲ. ಇದೇ ದೃಷ್ಟಿಯಿಂದಲೇ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ ಅರ್ಪಿಸಲಿರುವ ಸಂಭಾವನಾ ಗ್ರಂಥದ ಹೆಸರನ್ನು 'ಕರ್ತಾರ' ಎಂದು ಆಯ್ಕೆ ಮಾಡಲಾಯಿತು ಶ್ರೀ ಜತ್ತಿ ಅವರ ವಿನಯಶೀಲತೆ, ಸರ್ವಸಮರ್ಪಣಭಾವ, ನಿರಹಂಕಾರ ಮೊದಲಾದವುಗಳನ್ನು ಗಮನಕ್ಕೆ ತೆಗೆದುಕೊಂಡ ಹಲವು ಮಹನೀಯರು 'ಕರ್ತಾರ' ಎಂಬ ಹೆಸರು ಅಸಂಗತವಾಯಿತೇನೋ ಎಂಬ ಶಂಕೆಯನ್ನು ವ್ಯಕ್ತಪಡಿಸಿದರು. "ದಾಸೋಹಂ" ಎಂಬುದು ಅನುಗುಣವಾಗುವುದೇನೋ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. "ದಾಸೋಹ" ಎಂಬ ಪುಸ್ತಕ ಈಗಾಗಲೇ ಕನ್ನಡಸಾಹಿತ್ಯದಲ್ಲಿ ಪ್ರಕಟವಾದುದರಿಂದ "ಕರ್ತಾರ" ಎಂಬುದನ್ನೇ ಉಳಿಸಿಕೊಳ್ಳಲಾಯಿತು. "ಕರ್ತಾರ" ಎಂಬ ಪದ ಅಸಂಗತವಾದುದೆಂದೂ ನಮಗೆ ಮನವರಿಕೆಯಾಗಲಿಲ್ಲ.

ಶ್ರೀ ಬಿ. ಡಿ. ಜತ್ತಿ ಅವರು ವಿನಯಶೀಲರು ಅಹುದು; ನಿರಹಂಕಾರಿಗಳು ಅಹುದ. ಆದರೆ ಅವರ ವಿನಯ ಆತ್ಮವಿಶ್ವಾಸದಿಂದಕೂಡಿದ್ದು; ಆಕಳ ಅಮೃತಧಾರೆಯನ್ನು ಪಡೆಯಲು ಅದರ ಕಾಲಕೆಳಗೆ ಕೂಡುವಂಥದ್ದು; ಮೇಲಾದ ಫಲವನ್ನು ನೀಡಲು ಬಾಳೆಯಂತೆ ಬಾಗಿನಿಂತದ್ದು. ಅಲ್ಲದೆ ಮೇಲಿನ ವಚನದಲ್ಲಿ ಅಣ್ಣ ಬಸವಣ್ಣ

ನವರು ಹೇಳಿದಂತೆ ಸಮಾಜದ ಕಲ್ಯಾಣ ದೃಷ್ಟಿಯಿಟ್ಟುಕೊಂಡು ರಾಷ್ಟ್ರದ ಸೇವೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಉನ್ನತೋನ್ನತ ಸ್ಥಾನಗಳನ್ನು ಅಲಂಕರಿಸಿದವರು. "ನನಗೇಕೆ ನಾನೊಬ್ಬ ಸಾಮಾನ್ಯ ವ್ಯಕ್ತಿ" ಎಂದು ಯಾವ ಸದವಕಾಶದಿಂದಲೂ ದೂರ ಹೋದವರಲ್ಲ. ಮೇಲೆ ಮೇಲೆ ಏರಲು ಪ್ರಾಮಾಣಿಕ ರೀತಿಯಲ್ಲಿ ಪ್ರಯತ್ನಿಸಿದವರು. ಬಂದಾಗ ಹಿಗ್ಗದೆ ಬರದಿದ್ದಾಗ ಕುಗ್ಗದೆ ಮಾನಸಿಕ ಸ್ತಿಮಿತ ಉಳಿಸಿಕೊಂಡರು ಎಂಬ ಕಾರಣದಿಂದಲೇ ನಾವು ಅವರನ್ನು 'ಕರ್ತಾರ' ರೆಂದು ಕರೆಯುವಲ್ಲಿ ಹಿಂಜರಿಯಬೇಕಾದುದಿಲ್ಲ. ಇದು ನಮ್ಮ ತಿಳುವಳಿಕೆ.

ಶ್ರೀ ಬಿ. ಡಿ. ಜತ್ತಿ ಅವರು ಕರ್ಣಾಟಕದ ಈ ಶತಮಾನದ ಅಸಾಮಾನ್ಯ ವ್ಯಕ್ತಿಗಳು. ಭಾರತದ ಉಪರಾಷ್ಟ್ರಪತಿಗಳಾಗಿದ್ದಾರೆಂದು ಈ ಅಸಾಮಾನ್ಯತೆ ಬರಲಿಲ್ಲ; ಕರ್ಣಾಟಕದ ಜನತೆ ಅವರು ಮುಖ್ಯ ಮಂತ್ರಿಗಳಾಗಿದ್ದಾಗಲೇ, ಅಲ್ಲಿಂದ ಕೆಳಗಿಳಿದು ಆಹಾರ ಮಂತ್ರಿಗಳಾಗಿದ್ದಾಗ ಕೂಡ, ಅಷ್ಟೇ ಏಕೆ ಅವರ ವ್ಯಕ್ತಿತ್ವಕ್ಕೆ ಒಪ್ಪದಿದ್ದ ಪಾಂಡಿಚೇರಿಯ ಉಪರಾಜ್ಯಪಾಲರಾಗಿದ್ದಾಗ ಕೂಡ ಅವರ ಅಸಾಮಾನ್ಯತೆಯನ್ನು ಗುರುತಿಸಿದ್ದಿತು. ನಮ್ಮ ಈ ಸನ್ಮಾನ ಸಮಿತಿಯ ಅಧ್ಯಕ್ಷರಾದ ಶ್ರೀ ವಿಶ್ವನಾಥರಡ್ಡಿ ಮುದ್ನಾಳರವರಾಗಲಿ ಗ್ರಂಥ ಪ್ರಕಟನಾ ಸಮಿತಿಯ ಸಂಚಾಲಕರಾದ ಡಾ. ಎಸ್. ಎಸ್. ನರಸಣಗಿ ಅವರಾಗಲಿ ಶ್ರೀ ಬಿ. ಡಿ. ಜತ್ತಿ ಅವರು ಉಪರಾಷ್ಟ್ರಪತಿಗಳಾಗಿದ್ದಾರೆಂದು ಸಂಭಾವನಾ ಗ್ರಂಥವನು ಅರ್ಪಿಸಲು ಮುಂದೆ ಬಂದರೆಂದು ನನಗನಿಸುವದಿಲ್ಲ. ಒಂದು ವೇಳೆ ಯಾವುದೇ ಕೇಂದ್ರ ಪ್ರದೇಶದ ಉಪರಾಜ್ಯಪಾಲರಾಗಿ ಉಳಿದಾಗಲೂ, ಅಷ್ಟೇ ಏಕೆ ಶ್ರೀ ಜತ್ತಿ ಅವರು ರಾಜಕೀಯದಿಂದ ನಿವೃತ್ತರಾಗಿ ಕೇವಲ ಬಸವ ಸಮಿತಿ ಅಧ್ಯಕ್ಷರಾಗಿ ಮುಂದುವರಿದಿದ್ದಾಗಲೂ ಈ ಮಹನೀಯರು ಸಂಭಾವನಾ ಗ್ರಂಥವನ್ನು ಸಿದ್ಧಪಡಿಸಲು ತಯಾರಾಗುತ್ತಿದ್ದರು ಎಂದು ನಾನು ತಿಳಿದಿದ್ದೇನೆ ಏಕೆಂದರೆ ಶ್ರೀ ಜತ್ತಿ ಅವರ ಅಸಾಮಾನ್ಯತೆ ಅವರ ಉಪರಾಷ್ಟ್ರಪತಿ ಪದವಿಯಲ್ಲಿಲ್ಲ; ಅವರ ವ್ಯಕ್ತಿತ್ವದಲ್ಲಿದೆ ಧರ್ಮನಿಷ್ಠೆಯಲ್ಲಿದೆ; ಬಸವಾಭಿಮಾನದಲ್ಲಿದೆ; ಶರಣತತ್ವಾಚರಣೆಯಲ್ಲಿದೆ. ಅವರ ಗುಣಗಾನಮಾಡಿ ಸಂಭಾವನಾಗ್ರಂಥ ಅರ್ಪಿಸುವುದರಲ್ಲಿ ಅವರ ಶ್ರೇಯಸ್ಸಿಗಿಂತ ಈ ನಾಡಿನ ಸೌಹಾರ್ದತೆಯಿದೆ; ಸಂಸ್ಕೃತಿಯಿದೆ; ಗುಣಗ್ರಾಹಿತ್ವವಿದೆ ಎಂದು ಸಂಭಾವನಾ ಗ್ರಂಥ ಅರ್ಪಣೆಗೆ ಅಣಿಮಾಡಿಕೊಳ್ಳಲಾಯಿತು.

ಸಂಭಾವನಾ ಗ್ರಂಥದ ಸಂಪಾದಕನಾಗಿ, ಶ್ರೀ ಬಿ. ಡಿ. ಜತ್ತಿಯವರ ಗುಣವಿಶೇಷಗಳನ್ನು ಎತ್ತಿ ಹೇಳಲು ನನಗೆ ಅವಕಾಶವಿದೆಯೆಂದು ನಾನು ಭಾವಿಸುವುದಿಲ್ಲ. ಏನಾದರೂ ಇಲ್ಲಿ ಹೇಳಿದರೆ ಒಳಗಿನ ಲೇಖಕರಿಂದ ಕದ್ದು ಹೇಳಿದಂತೆ ಆಗುತ್ತದೆ; ಸಂಗ್ರಹಿಸಿ ಹೇಳಿದಂತಾಗುತ್ತದೆ. ಏಕೆಂದರೆ ಪೂಜ್ಯ

ಸ್ವಾಮಿಗಳು ಮತ್ತು ಸನ್ಮಾನ್ಯ ಸಾಹಿತಿಗಳು ಶ್ರೀ ಬಿ. ಡಿ. ಜತ್ತಿ ಅವರ ವಿವಿಧ ಮುಖಗಳನ್ನು ಕುರಿತು ವಿವಿಧ ರೀತಿಯಲ್ಲಿ ಹೇಳಿದ್ದಾರೆ; ಸ್ವಾರಸ್ಯಕರವಾಗಿ ಹೇಳಿದ್ದಾರೆ; ಸುಂದರವಾಗಿ ಹೇಳಿದ್ದಾರೆ. ಲೇಖಕರು ಬಣ್ಣಿಸಿದ ಗುಣಗಳನ್ನೇ ಸಂಪಾದಿಸಿ ಒಂದೆಡೆ ಹೇಳುವುದೇ ಸಂಪಾದಕನ ಕರ್ತವ್ಯವಲ್ಲವೆಂದು, ನಾನು ಮೌನವಾಗಿ ಉಳಿದುಕೊಳ್ಳುತ್ತೇನೆ.

'ಕರ್ತಾರ' ಸಂಭಾವನಾ ಗ್ರಂಥ ರಚನೆ ಕುರಿತು ಎರಡು ಮಾತುಗಳು ಹೇಳಬೇಕಾಗಿವೆ. ಏಕೆಂದರೆ ಇತರ ಸಂಭಾವನಾ ಗ್ರಂಥಗಳಿಗಿಂತ ತುಸು ಭಿನ್ನ ಮಾರ್ಗ ಕ್ರಮಿಸಲಾಗಿದೆ. ಎಷ್ಟೋ ಜನ ಸ್ನೇಹಿತರು ಸಂಭಾವನಾ ಗ್ರಂಥದಲ್ಲಿ ಶ್ರೀ ಜತ್ತಿ ಅವರನ್ನು ಕುರಿತ ಲೇಖನಗಳಲ್ಲದೆ ಇತರಸಾಹಿತ್ಯಿಕ – ಸಂಶೋಧನಾತ್ಮಕ ಬರಹಗಳೂ ಇರಲಿ ಎಂದು ಸಲಹೆ ನೀಡಿದರು. ಕೇವಲ ಶ್ರೀ ಜತ್ತಿ ಅವರನ್ನು ಕುರಿತ ಲೇಖನಗಳಿದ್ದರೆ, ಚರ್ವಿತ ಚರ್ವಣವಾಗಿ ಬೇಸರಕ್ಕೆಡೆಯಿತ್ತು ಪುಸ್ತಕ ಯಾರೂ ಓದದಂತಾಗುವುದೆಂಬ ಎಚ್ಚರಿಕೆಯನ್ನೂ ನೀಡಿದರು. ಆದರೂ ನಾವು, ಸಂಭಾವನೆ ಗ್ರಂಥವೆಂದರೆ ಸಂಭಾವಿತ ಲೇಖನಗಳೇ ಇರಬೇಕೆಂಬ ನೀತಿಯಿಂದ ಮುಂದುವರಿದಿದ್ದೇವೆ. ಇತರ ಸಾಹಿತ್ಯಿಕ ವಿಷಯಗಳನ್ನು ಪ್ರಕಟಿಸುವುದು ನಮ್ಮ ಉದ್ದೇಶವಾಗಿದ್ದರೆ, ಈ ಭಾಗದ ಲೇಖಕರನ್ನು ಪ್ರೋತ್ಸಾಹಿಸುವುದು ನಮ್ಮ ಹೇತುವಾಗಿದ್ದರೆ ಅಂಥ ಗ್ರಂಥ ಪ್ರಕಟನೆಗೆ ಕ್ಷೇತ್ರ ವಿಶಾಲವಾಗಿಯೇ ಇದೆ. ಸಂಭಾವನಾ ಗ್ರಂಥಗಳ ಉದ್ದೇಶ ಇದಾಗಬೇಕಿಲ್ಲವಲ್ಲ? ಸಂಭಾವನಾ ಗ್ರಂಥದ ಮುಖ್ಯ ಉದ್ದೇಶ ಆ ಗ್ರಂಥದ ನಾಯಕನ ವ್ಯಕ್ತಿತ್ವದ ವಿವಿಧ ಮುಖಗಳನ್ನು ಬಿಂಬಿಸುವಂತಿರಬೇಕು ಮತ್ತು ಆ ನಾಯಕನ ಬಗ್ಗೆ ತನಗಿರುವ ಗೌರವಾದರಗಳನ್ನು ಬಿಂಬಿಸಲು ಜನ ಸಮೂಹಕ್ಕೆ ಅವಕಾಶವಿರಬೇಕು. ಏನೋ ಹೇಳಹೋಗಿ, ಹೇಗೋ ಅವಕಾಶ ಪಡೆದು, ನಾಯಕನ ಬಗೆಗಿರುವ ಭಾವನೆಗಳನ್ನು ಹರಿಬಿಡಲು ಪ್ರಯತ್ನಿಸುವಂತಾಗಬಾರದೆಂಬ ಉದ್ದೇಶದಿಂದ ಕೇವಲ ಶ್ರೀ ಜತ್ತಿ ಅವರನ್ನು ಕುರಿತು ಮತ್ತು ಅವರು ನಿರ್ಮಿಸಿದ ಬಸವ ಸಮಿತಿಯನ್ನು ಕುರಿತು ಲೇಖನ ಕಳಿಸಬೇಕೆಂದು ಬಿನ್ನವಿಸಿಕೊಂಡಿದ್ದೆವು. ಶ್ರೀ ಜತ್ತಿ ಅವರ ಗುಣವಿಶೇಷಗಳನ್ನು ಹೇಳದೆ ಬಸವ ಸಮಿತಿಯ ಬಗ್ಗೆ ಹೇಳಲಿಕ್ಕಾಗುವದಿಲ್ಲವೆಂಬ ವಿಶ್ವಾಸ ಅಲ್ಲಿತ್ತು.

ಶ್ರೀ ಬಿ. ಡಿ. ಜತ್ತಿ ಅವರು ಎಲ್ಲ ಭಾಗಗಳ ಜನರಿಗೂ ಅಚ್ಚುಮೆಚ್ಚಿನ ವ್ಯಕ್ತಿಯಾದುದರಿಂದ, ಎಲ್ಲ ಭಾಗಗಳ ಜನರ ಮೇಲೂ ತಮ್ಮ ವ್ಯಕ್ತಿತ್ವದ ಪ್ರಭಾವವನ್ನು ಬೀರಿದವರಾದುದರಿಂದ ನಮ್ಮ ಉದ್ದೇಶ ಯಶಸ್ವಿಯಾಗಿಯೇ

ಈಡೇರುವದೆಂಬ ವಿಶ್ವಾಸವೂ ನಾವು ಈ ನೀತಿಯನ್ನು ಅನುಸರಿಸಲು ಕಾರಣವಾಯಿತು. "ಹೇಳಿದ್ದೇ ಹೇಳುವರು, ಕೇಳಿದ್ದೆ ಕೇಳುವರು; ಹೇಳಿದ್ದೆ ಹೇಳಿ ಸುಖಿಸುವರು ಕವಿಗಳಾ ಹೇಳಿಕೆಯೇ ಬೇರೆ" ಎಂಬ ಸರ್ವಜ್ಞ ಕವಿಯ ಉಕ್ತಿಯಂತೆ ಲೇಖಕರು ಶ್ರೀ ಜತ್ತಿ ಅವರ ಜೀವನ ಚರಿತ್ರೆಯ ಒಂದೇ ಘಟನೆಯ ಬಗ್ಗೆ ಹೇಳಿದರೂ ಅವರವರ ಶೈಲಿ–ಸ್ವಾರಸ್ಯ ಭಿನ್ನವಾಗಿರುತ್ತದೆಂಬ ತಿಳುವಳಿಕೆಯಿಂದಲೂ ಈ ಮಾರ್ಗ ತುಳಿದೆವು. ಈ ಸಂಭಾವನಾ ಗ್ರಂಥದ ಗುಣಾವಗುಣಗಳ ಬಗ್ಗೆ ನಾವು ಹೇಳಬೇಕಾಗಿಲ್ಲ. ವಿಮರ್ಶಕರು ನಿರ್ಧರಿಸಬೇಕು.

ನಾವು ಶ್ರೀ ಜತ್ತಿ ಅವರ ಬಗ್ಗೆ ಮಾತ್ರ ಲೇಖನ–ಕವಿತೆಗಳನ್ನು ಕೇಳಿದರೂ ಸಾಕಷ್ಟು ಸಂಖ್ಯೆಯಲ್ಲಿ ಬಂದಿವೆ. ಆದರೆ ಎಲ್ಲವುಗಳನ್ನೂ ಪ್ರಕಟಿಸಲು ಹೇಗೆ ಸಾಧ್ಯವಾಗಬಹುದು ? ಸಮುದ್ರವೇನೋ ಹರವಾಗಿವೆ ಆದರೆ ನಮ್ಮ ಬೊಗಸೆ ಅಷ್ಟು ದೊಡ್ಡದಿರಬೇಕಲ್ಲಾ ! ಧನಾನುಕೂಲವೂ ಬೇಕು; ಸಮಯಾನುಕೂಲವೂ ಬೇಕು. ಸಮಯಾಭಾವದ ಕಾರಣ ಕೆಲವು ಲೇಖನಗಳನ್ನು ಪ್ರಕಟಿಸದೆ ಇದ್ದುದಕ್ಕಾಗಿ ಬಹಳ ವಿಷಾದವಾಗುತ್ತಿದೆ. ಲೇಖಕರು–ಕವಿಗಳು ದಯವಿಟ್ಟು ಕ್ಷಮಿಸಬೇಕು.

ಶ್ರೀ ಬಿ. ಡಿ. ಜತ್ತಿ ಸನ್ಮಾನ ಸಮಿತಿಯು ನಮ್ಮ ಮೇಲೆ ವಿಶ್ವಾಸವಿಟ್ಟು, ಸಂಭಾವನಾ ಗ್ರಂಥ ಸಂಪಾದನಾ ಹೊಣೆಯನ್ನು ಹೊರಿಸಿದುದಕ್ಕೆ ಕೃತಜ್ಞತೆಗಳನ್ನು ಅರ್ಪಿಸುತ್ತಾ ಶ್ರೀ ಬಿ. ಡಿ. ಜತ್ತಿ ಅವರಿಗೆ ಸಪ್ರೇಮ ಈ ಸಂಭಾವನಾ ಗ್ರಂಥವನ್ನು ಸಮರ್ಪಿಸಿ ವಿರಮಿಸುತ್ತೇವೆ.

— ಸಂಪಾದಕ



# ಪರಿವಿಡಿ



ಗ್ರಂಥ ಸಲಹಾ ಸಮಿತಿ—

**ಶ್ರೀ ಭೀಮಸೇನರಾವ ತವಗ**
ಅಧ್ಯಕ್ಷರು, ಜಿಲ್ಲಾ ಸಾಹಿತ್ಯ ಸಮಿತಿ, ಕಲಬುರ್ಗಿ.

**ಡಾ. ರಾಮಕೃಷ್ಣ**
ಅಧ್ಯಕ್ಷರು, ಜಿಲ್ಲಾ ಸಾಹಿತ್ಯ ಸಮಿತಿ, ರಾಯಚೂರು.

**ಶ್ರೀ ಹಣಮಂತಪ್ಪ ಪಾಟೀಲ**
ಅಧ್ಯಕ್ಷರು, ಜಿಲ್ಲಾ ಸಾಹಿತ್ಯ ಸಮಿತಿ, ಬೀದರ.



" ನವ ವಧೂವರರು " ಶ್ರೀ ಮತ್ತು ಶ್ರೀಮತಿ ಬಿ. ಡಿ. ಜತ್ತಿ ಅವರು



ಯಾದಗಿರಿಯ ಶ್ರೀ ಬಸವೇಶ್ವರರ ಅಷ್ಟಶತಮಾನೋತ್ಸವದಲ್ಲಿ (೧೯೭೧) ಉದ್ಘಾಟಕರಾಗಿದ್ದ ಆಗಿನ ರಾಜ್ಯಪಾಲ ಶ್ರೀ ಧರ್ಮವೀರರೊಂದಿಗೆ ಅಧ್ಯಕ್ಷರಾಗಿದ್ದ ಶ್ರೀ ಬಿ. ಡಿ. ಜತ್ತಿ ಅವರು.



ಮುಖ್ಯಮಂತ್ರಿಗಳಾಗಿದ್ದಾಗ (೧೯೫೮-೬೨) ಆಗಿನ ರಾಷ್ಟ್ರಾಧ್ಯಕ್ಷರಾದ ಡಾ|| ಬಾಬು ರಾಜೇಂದ್ರ ಪ್ರಸಾದರೊಂದಿಗೆ ರಾಜ್ಯದ ಆಗುಹೋಗುಗಳ ನಿವೇದನೆ.



ಬಸವ ಸಮಿತಿ ಪಾದಯಾತ್ರೆಯಲ್ಲಿ ಪಾದಯಾತ್ರಿಕ ಶ್ರೀ ಬಿ. ಡಿ. ಜತ್ತಿ ಅವರು (ಕಮಲಾಪುರ)

॥ ಶ್ರೀ ಜ. ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀ ಮದ್ವೇದವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ
ಸಕಲಶಾಸ್ತ್ರ ಸುಪ್ರಸಿದ್ಧಾಷ್ಟಾವರಣ ಪಂಚಾಚಾರ
ಷಟಸ್ಥಲಾದಿ ಸರ್ವಾಂಗ ಸಂಪೂರ್ಣ ಶ್ರೀ ಮದ್ವೀ
ರಶೈವ ಮಹಾಮತಸ್ಥಾಪನಾಚಾರ್ಯ
ವರ್ಯ।

ಶ್ರೀ ಜಗದ್ಗುರು ರೇಣುಕ
ಭಗವತ್ಪಾದ ಮ ಹಾ ಚಾ ರ್ಯ
ಪರಂಪರಾಗತ ಭದ್ರತರ ಭದ್ರಾತೀತ
ಭಾಸಮಾನ ಮಲಯಾಚಲ ಮಧ್ಯ ವಿದ್ಯೋ
ತಮಾನ ಸಾಕ್ಷಾದ್ಭೂಕೈಲಾಸ ಶ್ರೀ ಮದ್ರಂಭಾಪುರೀ
ವೀರಸಿಂಹಾಸನಾಧೀಶ್ವರ.

**ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಮಹಾರಾಜ ಶಿವಯೋಗಿ ದೇಶಿಕೇಂದ್ರ ಭಗವತ್ಪಾದ ಶಿವಾಚಾರ್ಯ**

ಮಹಾಸ್ವಾಮಿನಾಂ ದಿವ್ಯಕೃಪಾಸನ್ನಿಧಾನೇನ:—

ಭಾರತದ ಉಪರಾಷ್ಟ್ರಪತಿ ಶ್ರೀ ಮಾನ್ ಬಿ. ಡಿ. ಜತ್ತಿಯವರಿಗೆ ಸನ್ಮಾನ ಗ್ರಂಥವನ್ನು ಒಪ್ಪಿಸುತ್ತಿರುವುದು ಅಭಿನಂದನೀಯವಾಗಿದೆ. ಅವರು ಸಾರ್ವತ್ರಿಕವಾಗಿ ಅಭಿನಂದನೀಯರಾಗಿರುವರು. ಅವರು ಉನ್ನತ ಪದವಿಗೇರಿರುವುದು ಕನ್ನಡಿಗರೆಲ್ಲರಿಗೂ ಮುಖ್ಯವಾಗಿ ವೀ ರ ಶೈ ವ ಸಮಾಜದವರಿಗೆ ಬಹು ಹೆಮ್ಮೆಯ ವಿಷಯವಾಗಿದೆ.

॥ ಸಮಸ್ತ ಸನ್ಮಂಗಳಾನಿ ಭವಂತು. ॥

ಶ್ರೀ ಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ

## ಶ್ರೀ ೧೦೦೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳವರು

ಶ್ರೀ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನ ಮಠ

● ಮ ಹಾ ಸ ನ್ನಿ ಧಾ ನ ದಿಂ ದ ●

ಇಂದು ಶ್ರೀಮಾನ್ ಬಿ. ಡಿ. ಜತ್ತಿಯವರನ್ನು ಅಖಂಡ ಭರತ ಖಂಡ ದಲ್ಲಿ ಅರಿಯದವರೇ ಇಲ್ಲ. ಹನ್ನೆರಡನೇ ಶತಮಾನದ ಬಸವಣ್ಣನವರು ಗುರುಲಿಂಗ ಜಂಗಮರ ಸೇವೆಗಾಗಿ ತಮ್ಮ ತನು, ಮನ, ಧನಗಳನ್ನು ಸೂರೆಮಾಡಿದ್ದರೆ, ಇಂದು ಆ ಭಕ್ತಿಯನ್ನು ಶ್ರೀಮಾನ್ ಬಿ. ಡಿ. ಜತ್ತಿಯವರಲ್ಲಿ ನಾವು ಕಾಣುತ್ತೇವೆ. ಭಕ್ತಿ ಭಾಂಡಾರಿ ಬಸವಣ್ಣನವರು ನಿಷ್ಪಕ್ಷಪಾತವಾಗಿ ಗುರುಲಿಂಗ ಜಂಗಮರನ್ನು ಕಂಡರೆ ಶ್ರೀಮಾನ್ ಜತ್ತಿಯವರು ಅದೇ ನಿಷ್ಪಕ್ಷಪಾತ ಸ್ವಭಾವದಿಂದ ಬಸವಣ್ಣ ನವರಿಗಿಂತಲೂ ಮುಂದುವರಿದಿದ್ದಾರೆ. ಬಸವಣ್ಣನವರು ದೀನದಲಿತರ ಉದ್ಧಾರ ಕ್ಕಾಗಿ ಪಣ ತೊಟ್ಟರೆ ಶ್ರೀಮಾನ್ ಜತ್ತಿಯವರು ಅಖಂಡ ಭರತ ಖಂಡದ ದೀನ ದರಿದ್ರರ ಉದ್ಧಾರದ ಜೊತೆಗೆ ಸಮಾಜ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮಹಾನು ಭಾವಿ ಬಸವಣ್ಣನವರು ಅಂದು ಸಾಧಿಸಿದ ಸಮಾಜವಾದ ಅರ್ಧಾಂಕಿತವಾಗಿದ್ದರೆ ಅದನ್ನು ಪೂರ್ತಿಗೊಳಿಸಿದವರು ಶ್ರೀಮಾನ್ ಜತ್ತಿಯವರು.

ಮಹಾನುಭಾವಿ ಬಸವಣ್ಣನವರು ನಿಂತರೆ, ಕೂತರೆ, ಮಂತ್ರಿ ಪದವಿಯ ಲ್ಲಿದ್ದರೆ, ಸುಖಶಯ್ಯೆಯಲ್ಲಿದ್ದರೇನು ಹೆಜ್ಜೆ ಹೆಜ್ಜೆಗೂ ಕೂಡಲ ಸಂಗಮದೇವರನ್ನು ಪೂರ್ಣವಾಗಿ ನಂಬಿ ನೆನೆಯುತ್ತಿದ್ದಂತೆ ಶ್ರೀಮಾನ್ ಜತ್ತಿಯವರು ತಮ್ಮ ಮನೆ ದೇವರಾದ ಶ್ರೀ ಶೈಲಮಲ್ಲಿಕಾರ್ಜುನನನ್ನು ನೆನೆಯುತ್ತಾರೆ.

ಅಂದು ಶತಮಾನ ಹನ್ನೆರಡರಲ್ಲಿ ನಂದೀಶ್ವರನ ಅವತಾರ ಬಸವಣ್ಣನಾಗಿ ಬಂದರೆ ಇಂದು ೨೦ನೇ ಶತಮಾನದಲ್ಲಿ ಪುನಃ ಅವರೇ ಬಸವನಾಮುವನ್ನು ಧರಿಸಿ ಬಂದಿದ್ದಾರೆ ನಮ್ಮ ಜತ್ತಿಯವರು. ಇದಕ್ಕೆ ಸಾಕ್ಷಿಯಾಗಿ ಶ್ರೀಯುತರು ಹುಟ್ಟಿಸಿದ ಬಸವಣ್ಣನವರ ಎಂಟನೇ ಶತಮಾನೋತ್ಸವ, ಅಖಿಲಭಾರತ ಬಸವಸಮಿತಿ,

ಬೆಂಗಳೂರಿನ ಆರು ಅಂತಸ್ತಿನ ಬಸವ ಭವನ, ಇವೆಲ್ಲವೂ ಇವರು ಬಸವಣ್ಣನವರ ಅವತಾರಿ ಎಂಬುವುದಕ್ಕೆ ಸ್ಪಷ್ಟವಾದ ಹೇಳಿಕೆಯನ್ನು ನೀಡುತ್ತವೆ.

ಶ್ರೀಮಾನ್ ಬಿ. ಡಿ. ಜತ್ತಿಯವರಿಗೆ ಅಷ್ಟಾವರಣಗಳೆಂದರೆ ಪಂಚಪ್ರಾಣ. ಇವರ ಶಿವಲಿಂಗಧಾರಣ, ಶಿವಲಿಂಗಪೂಜೆ, ಹಣೆಗೆ ಯಾವಾಗಲೂ ಆರದ ವಿಭೂತಿ ಇವು ಸಣ್ಣ ಹುದ್ದೆಯಿಂದ ಮೇಲ್ಮಟ್ಟದ ಉಪರಾಷ್ಟ್ರಪತಿ ಹುದ್ದೆಯವರೆಗೂ ಒಂದೇ ವಿಧವಾಗಿ ಕಂಗೊಳಿಸುತ್ತವೆ. ಜೊತೆಗೆ ಅಪಾರವಾದ ತತ್ವಜ್ಞಾನ, ಯಾರನ್ನೂ ನೋಯಿಸಬಾರದೆಂಬ ಮನೋನಿರ್ಣಯ–ಇವು ಎಂತಹ ಸತ್ಪುರುಷರನ್ನೂ ದಂಗುಗೊಳಿಸುತ್ತವೆ.

ಮಹಾತ್ಮರಾದ ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿಕೊಂಡಂತೆ ಅವರ ಮೊದಲಿನ ಅವತಾರ ಶ್ರೀಶೈಲದ ಶಿಲಾದ ಋಷಿಯ ಪುತ್ರ ನಂದೀಶ್ವರನಾಗಿದ್ದರೆ ಅದೇ ಅವತಾರವೇ ೧೨ ನೇ ಶತಮಾನದಲ್ಲಿ ಕಲ್ಯಾಣದ ಬಸವಣ್ಣನಾಗಿ ಅವರ ಅರ್ಧಾಂಕಿತವಾಗಿದ್ದ ಕಲ್ಯಾಣದ ಕ್ರಾಂತಿಯ ಪೂರ್ತಿಗಾಗಿಯೇ ಅನ್ನುವಂತೆ ನಮ್ಮ ಜತ್ತಿಯವರು ಈ ೨೦ ನೇ ಶತಮಾನದಲ್ಲಿ ಬಸಪ್ಪನವರಾಗಿ ಅವತಾರವೆತ್ತಿದ್ದಾರೆಂಬುದನ್ನು ನಾವು ಜಾತಕ ಮುಖಾಂತರವಾಗಿಯೂ ಒಪ್ಪುವಂತಿದೆ.

## ಧೀರತೆ

ಅಂದು ಬಸವಣ್ಣನವರ ಮೇಲೆ ಧಾರ್ಮಿಕ ರಂಗದಲ್ಲಿ ಹಾಗೂ ರಾಜಕೀಯ ರಂಗದಲ್ಲಿ, ಅನೇಕ ಅಡ್ಡಿ ಆತಂಕಗಳು ಬಂದಿದ್ದರೆ ಅವು ನಮ್ಮ ಶ್ರೀಮಾನ್ ಜತ್ತಿಯವರನ್ನೇನೂ ಬಿಟ್ಟಂತೆ ಕಾಣಲಿಲ್ಲ. ಇವರ ಧೀರತೆಯ ಸಲುವಾಗಿ ಒಂದು ನೀತಿ ಪಾಠವು ನಮ್ಮ ಮುಂದೆ ಬಂದು ನಿಲ್ಲುತ್ತದೆ.

ನಿಂದಂತು, ನೀತಿ ನಿಪುಣಾ, ಯದಿ ವಾಸ್ತುವಂತು।
ಲಕ್ಷ್ಮೀರ್ವಸತು, ಗಚ್ಛತುವಾಯಥೇಷ್ಟಮ್।
ಅದ್ಯೈವ ವಾ ಮರಣವಸ್ತುಯುಗಾಂತರೇವಾ।
ನ್ಯಾಯಾತ್ಪಥಾತ್, ನವಿಚಲಂತಿ, ಪದಂ ನಧೀರಾಃ।

ಎಂದರೆ ನೀತಿ ನಿಪುಣರು ನಿಂದಿಸಲಿ, ಅಥವಾ ಹೊಗಳಲಿ। ಸಿರಿಯು ಹೆಚ್ಚಾಗಲಿ ಅಥವಾ ಹಾಳಾಗಲಿ। ಈಗಲೇ ಮರಣ ಬರಲಿ ಅಥವಾ ವರ್ಷಗಳ ಮೇಲೆ ಬರಲಿ

ಧೀರರಾದ ಸಜ್ಜನರು ನ್ಯಾಯಮಾರ್ಗವನ್ನು ಬಿಟ್ಟು ಒಂದು ಹೆಜ್ಜೆಯೂ ಸರಿಯಲಾರರು। ಎಂಬಂತೆ ಶ್ರೀಮಾನ್ ಜತ್ತಿಯವರ ಸತ್ಯ, ಧರ್ಮ ಮಾರ್ಗಗಳು ಅಲ್ಲಾಡದಂತೆ ಮುಂದು ಸಾಗಿವೆ. ಅದು ಕಾರಣವೇ ''ಧರ್ಮ ಏವ ಹತೋ ಹಂತಿ| ಧರ್ಮೋ ರಕ್ಷತಿ ರಕ್ಷಿತಃ||" ಎಂಬ ಗೀತಾ ವಚನವು ಸತ್ಯಾಂಶವನ್ನು ಸಾರುತ್ತದೆ. ಧರ್ಮದ ತಳಹದಿಯ ಮೇಲೆ ಸುಜ್ಞಾನದ ಮಂದಿರವನ್ನು ಕಟ್ಟಿ ಬಾಳುತ್ತಿರುವ ಶ್ರೀಮಾನ್ ಜತ್ತಿಯವರನ್ನು ಧರ್ಮವು ಹಜ್ಜೆ ಹೆಜ್ಜೆಗೂ ಉನ್ನತ ಮಟ್ಟಕ್ಕೇರಿಸಿ ಕಾಪಾಡುತ್ತದೆ.

ಮೈಸೂರು ಸರಕಾರದ ಮುಖ್ಯಮಂತ್ರಿಗಳಾದಾಗ ಶ್ರೀಮಾನ್ ಜತ್ತೀ ಸಾಹೇಬರನ್ನು ಒಂದು ಸಾರೆ ದಾವಣಗೆರೆಗೆ ಆದರದಿಂದ ಕರೆಯಿಸಿಕೊಂಡು ಸನ್ನಿಧಿಯು ಆಶೀರ್ವಾದ ಮಾಡಿದ ಒಂದು ಪ್ರಸಂಗ

## ಮಲ್ಲಿಕಾರ್ಜುನನ ಒಕ್ಕಲು

"ಜತ್ತೀಸಾಹೇಬರೇ! ತಾವು ಒಮ್ಮೆ ನಮ್ಮ ಬಡ ಪೀಠಕ್ಕೂ ಶ್ರೀಶೈಲ ಕ್ಷೇತ್ರಕ್ಕೂ ಬರುವಂತೆ ಆಗಲಿ." ಅದಕ್ಕೆ ಜತ್ತೀ ಸಾಹೇಬರ ಉತ್ತರ— "ನಮ್ಮದು ಮಲ್ಲಿಕಾರ್ಜುನನ ಒಕ್ಕಲು. ಆದರೆ ನಮ್ಮ ಮನೆಯವರು ಅಂಜಿಕೊಂಡು ಇತ್ತಲಾಗಿ ಹೋಗುವುದು ಬಿಟ್ಟಿದ್ದಾರೆ." ಸನ್ನಿಧಿಯು ಆ ಕ್ಷಣವೇ ಕೊಟ್ಟ ಉತ್ತರ :— "ಇನ್ನು ಮುಂದೆ ತಮಗೆ ಅಪಾಯವಾಗುವುದಿಲ್ಲವೆಂದು ನಾವು ಭರವಸೆ ಕೊಡುತ್ತೇವೆ.'' ಅದಕ್ಕೆ ಶ್ರೀಮಾನ್ ಜತ್ತಿಯವರ ಉತ್ತರ — "ತಮ್ಮಂಥ ದೊಡ್ಡವರು ಭರವಸೆ ಕೊಟ್ಟರೆ ನಾನು ಖಂಡಿತವಾಗಿಯೂ ಶ್ರೀಶೈಲಕ್ಕೆ ಬರುತ್ತೇನೆ. ತಮ್ಮ ಮಠವನ್ನೂ ನೋಡುತ್ತೇನೆ" ಎಂದರು.

ನಿಗರ್ವಿಗಳಾದ ಮಾನ್ಯ ಜತ್ತೀಸಾಹೇಬರು ತಮ್ಮ ಸಮಯವನ್ನು ಕಾದು ಸನ್ನಿಧಿಯು ಮಠದಲ್ಲಿ ಮುಕಾಂ ಇಲ್ಲದಾಗ, ಅಲ್ಲದೆ ಮಠವನ್ನೆಲ್ಲ ಕೆಡವಿ ಜೀರ್ಣೋದ್ಧಾರವಾಗುತ್ತಿರುವಾಗ ಯಾವ ಸೂಚನೆಯನ್ನೂ ಕೊಡದೇ ಶ್ರೀಮಾನ್ ಜತ್ತಿಯವರು ಬಂದೇ ಬಿಟ್ಟಿದ್ದಾರೆ ಗುಂತಕಲ್ಲಿಗೆ. ಕಾರು ಮಠದ ಮುಂದೆ ಬಂದಾಗ ಮಠದ ವ್ಯವಸ್ಥಾಪಕರು ಹೊರಗೆ ಹೋಗಿ ನೋಡಿದಾಗಲೇ ಅವರು ಬಂದ ಸಮಾಚಾರ ತಿಳಿಯಬೇಕಾಯಿತು. ಅವಸರದಿಂದ ವ್ಯವಸ್ಥಾಪಕರು ಅವರಿಗೆ ಏನೇನೋ ಉಪಚಾರ ಮಾಡಲು ಪ್ರಯತ್ನಿಸಿದರೂ ಯಾವುದೂ ಬೇಡ ಕರ್ತೃ ಗದ್ದುಗೆಯ ದರ್ಶನ ಮುಖ್ಯ. ಸಾಕು, ಒಂದು ಕಪ್ಪು ಹಾಲೇ ನಮಗೆ ಅಮೃತ ಸನ್ನಿಧಿಯವರಿಗೆ ನಾನು ಬಂದ ಸಮಾಚಾರವನ್ನು ತಿಳಿಸಿರಿ ಎಂದರು. ಹೀಗೆ ಅಲ್ಪ

ಗೌರವವನ್ನೇ ಮಹತ್ತಾಗಿ ಕಾಣುವುದು ಶ್ರೀಮಾನ್ ಜತ್ತಿಯವರ ಸ್ವಭಾವ.

ಶ್ರೀ ಜತ್ತಿಯವರು ಮತ್ತೊಮ್ಮೆ ಮೈಸೂರು ಸರಕಾರದ ಆಹಾರ ಮಂತ್ರಿಗಳಾಗಿದ್ದಾಗ ಬೆಂಗಳೂರಿನಲ್ಲಿ ಶ್ರೀಶೈಲಪೀಠದ ಮಹೋನ್ನತವಾದ ಉತ್ಸವ, ಧರ್ಮಪ್ರಚಾರ, ಭಾಷಣ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಭಾಗ್ಯ ಅವರಿಗೆ ಬಂದಿತ್ತು. ಮಹಾಸನ್ನಿಧಿಯು ಜತ್ತೀ ಸಾಹೇಬರ ಜೊತೆಗೆ ಸಂಭಾಷಣೆ ಮಾಡುತ್ತಿದ್ದಂತೆ ಏನೋ ಹೊಳೆಯಿತು.! ಸನ್ನಿಧಿಯು ಆ ಕ್ಷಣವೇ "ಸಾಹೇಬರೇ! ತಮ್ಮ ಸರಕಾರದವರು ಪುರಂದರದಾಸರಿಗೆ ಗೌರವವಿತ್ತು ಅವರ ಸ್ಮಾರಕ, ಉತ್ಸವವಾದಿಗಳಿಗೆ ಅಪಾರವಾಗಿ ದ್ರವ್ಯದಾನವನ್ನು ಮಾಡಿದ್ದಾರೆ! ಬಸವಣ್ಣನವರು ಮಾಡಿದ ಅನ್ಯಾಯವೇನು? ಅವರ ಎಂಟನೇ ಶತಮಾನೋತ್ಸವಕ್ಕೆ ಯಾರಾದರೂ ರೂಪುರೇಖೆ ಹಾಕಿದರೆ ನಿಮ್ಮ ಸರಕಾರ ಏನಾದರೂ ದಾನ ಕೊಡಬಹುದೋ?" ಆ ಕ್ಷಣವೇ ಶ್ರೀಮಾನ್ ಜತ್ತಿಸಾಹೇಬರು "ಆಗಬಹುದು, ತಮ್ಮ ಸಂಕಲ್ಪ ಬಹಳ ಒಳ್ಳೆಯದು. ಅವಶ್ಯವಾಗಿ ಪ್ರಯತ್ನಿಸುತ್ತೇನೆ." ಎಂದು ವಚನಕೊಟ್ಟರು. ಆ ಮಹಾಕಾರ್ಯವನ್ನು ಸಾಧಿಸಿಯೇ ಬಿಟ್ಟರು.

**" ರಾಜ್ಯಾಧಿಪತಿರ್ಬಭೂವ "**

ಮಹಾಸನ್ನಿಧಿಯು ದೇಶಾದ್ಯಂತ ನಡೆದ ಬಸವಣ್ಣನವರ ಎಂಟನೇ ಶತಮಾನೋತ್ಸವವನ್ನು ಶ್ರೀಶೈಲದಲ್ಲಿಯೂ ಆಚರಿಸಲು ನಿರ್ಧರಿಸಿ ಶ್ರೀಮಾನ್ ಜತ್ತಿಯವರಿಗೆ ಮತ್ತು ಶ್ರೀ ಕೆ. ಹನುಮಂತಯ್ಯನವರಿಗೆ, ಆಂಧ್ರ ನಾಯಕ ಶ್ರೀಮಾನ್ ಚೆನ್ನಾರೆಡ್ಡಿಯವರಿಗೆ ಆಮಂತ್ರಣ ಕೊಡಿಸಿತು. ಮಾನ್ಯ ಮಂತ್ರಿಗಳು ಮೂವರೂ ಶ್ರೀಶೈಲ ಕ್ಷೇತ್ರಕ್ಕೆ ಆಗಮಿಸಿ ಬಸವಣ್ಣನವರ ಎಂಟನೇ ಶತಮಾನೋತ್ಸವವನ್ನು ಭವ್ಯವಾಗಿ ನಡೆಸಿಕೊಟ್ಟರು. ಆ ಸಂದರ್ಭದಲ್ಲಿ ನಡೆದ ಘಟನೆ ಸನ್ನಿಧಿಗೆ ಮರೆಯದ ಹಾಗೆ ಇದೆ. ಶ್ರೀಮಾನ್ ಜತ್ತಿಸಾಹೇಬರೊಡನೆ ಅವರ ಧರ್ಮಪತ್ನಿಯವರಾದ ಶ್ರೀಮತಿ ಸಂಗಮ್ಮನವರೂ ಆಶೀರ್ವಾದಕ್ಕೆ ಬಂದರು- ಅಪಾರ ಗುರುಭಕ್ತಿ ಸಂಪನ್ನರಾದ ಶ್ರೀಮತಿ ಸಂಗಮ್ಮನವರು ಆಶೀರ್ವಾದ ಪಡೆಯುತ್ತಿದ್ದಂತೆಯೇ "ಗುರುವೇ! ನಮ್ಮಸಾಹೇಬರಿಗೆ ಮುಂದೆ ಮಲ್ಲಯ್ಯನ ಆಶೀರ್ವಾದ ಏನಾಗುವುದು? ಅಪ್ಪಣೆಯಾಗಲಿ" ಎಂದರು. ಸನ್ನಿಧಿಯು "ದೇವರೇ ನುಡಿಸಿದ ಹಾಗೆ ಇನ್ನೇನಮ್ಮಾ ನಿಮ್ಮ ಸಾಹೇಬರು " ರಾಜ್ಯಾಧಿಪತಿರ್ಬಭೂವ " ರಾಜ್ಯಾಧಿಪತಿಗಳಾಗಿದ್ದಾರೆ. ಎಂದು ಅಪ್ಪಣೆ ಮಾಡುತ್ತಲೇ ಇಬ್ಬರೂ ಹರ್ಷಚಿತ್ತರಾಗಿ ಗಟ್ಟಿಯಾಗಿ ನಕ್ಕುಬಿಟ್ಟರು. ಕೆಲವೇ ದಿವಸಗಳಲ್ಲಿ ಶ್ರೀಮಾನ್ ಜತ್ತಿಸಾಹೇಬರು 'ಗವರ್ನರ್' ಪದ

ವಿಯ:ನ್ನು ಸ್ವೀಕರಿಸಿದ ವಾರ್ತೆ ಮಲ್ಲಯ್ಯನ ವರಪ್ರಸಾದದ ಸತ್ಯತೆಯನ್ನು ಜಗತ್ತಿಗೆ ಸಾರಿತು.

ಶ್ರೀಮಾನ್ ಜತ್ತಿಸಾಹೇಬರು ಅಂದು ಸೂರ್ಯ ಸಿಂಹಾಸನ ಪೀಠದ ಆಮಂತ್ರಣದಂತೆ ಶ್ರೀಶೈಲಕ್ಕೆ ಆಗಮಿಸಿ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ನಿತ್ಯಾನ್ನದಾನ ಮಂದಿರದ ಶಂಕು ಸ್ಥಾಪನೆಯನ್ನು ನಡೆಸಿಕೊಟ್ಟ ಫಲವಾಗಿ ಆ ಬಿಲ್ಡಿಂಗಿನ ಉದ್ಘಾಟನೆಯನ್ನು ಅಂದಿನ ಮೈಸೂರು ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀಮಾನ್ ವೀರೇಂದ್ರ ಪಾಟೀಲರವರು ನೆರವೇರಿಸಿದರು. ಇಂದು ಆ ಅನ್ನದಾನ ಸಂಸ್ಥೆಯು ಶ್ರೀ ಶೈಲಕ್ಕೆ ಬರುವ ಸಮಸ್ತ ಯಾತ್ರಿಕರಿಗೆ ಅನ್ನದಾನ ಮಾಡುವಷ್ಟು ಶಕ್ತವಾಗಿರುವುದಕ್ಕಾಗಿ ಸನ್ನಿಧಿಗೆ ಸಂತೋಷವೂ ಒಂದು ವಿಧವಾದ ಹೆಮ್ಮೆಯೂ ಉಂಟಾಗಿದೆ.

## ಗುರುದೇವತಾಭಕ್ತಿ

ಸದ್ಗುಣ ಭೂಷಿತರಾದ ಶ್ರೀಮಾನ್ ಜತ್ತಿಸಾಹೇಬರವರ ಸತ್ಯನಿಷ್ಠೆಯು ಉಪರಾಷ್ಟ್ರಪತಿ ಪದವಿಯನ್ನು ಇತ್ತು ಗೌರವಿಸಿತು. ಆದರೆ ಶ್ರೀಮಾನ್ ಜತ್ತಿ ಸಾಹೇಬರಿಗೆ ದೊಡ್ಡ ಅಧಿಕಾರ ಬಂದಿತೆಂಬ ಹೆಮ್ಮೆ ಇಲ್ಲ, ಅಹಂಕಾರವಿಲ್ಲ. ಮತ್ತೆಯೂ ನಾನೊಬ್ಬ ಸಮಾಜ ಸೇವಕನೆಂಬ ಮನೋಭಾವ ಅವರದು. ಈ ಅಧಿಕಾರದ ಆತುರತೆಯಲ್ಲಿ ಯಾರಾದರೂ ದೇವರನ್ನು ಮರೆಯಬಹುದು, ಗುರುವನ್ನು ಮರೆಯಬಹುದು, ಆದರೆ ಶ್ರೀಮಾನ್ ಜತ್ತಿಸಾಹೇಬರಿಗೆ ಉಪರಾಷ್ಟ್ರಪತಿ ಪದವಿಗಿಂತಲೂ ಗುರುದೇವತಾ ಭಕ್ತಿಗಳು, ದೊಡ್ಡವು. ಅಂತೆಯೇ ಅವರು ಉಪರಾಷ್ಟ್ರಪತಿ ಪದವಿಯನ್ನು ಸ್ವೀಕರಿಸುವದಕ್ಕಿಂತ ಮುಂಚೆಯೇ ತಮ್ಮ ಮನೆ ದೇವರಾದ ಶ್ರೀಶೈಲ ಮಲ್ಲಿಕಾರ್ಜುನನ್ನೂ ತಮ್ಮ ಗುರುಪೀಠವಾದ ಜಗದ್ಗುರು ಪಂಡಿತಾರಾಧ್ಯರ ಸೂರ್ಯ ಸಿಂಹಾಸನವನ್ನೂ ಸಂದರ್ಶನ ಮಾಡಿಕೊಂಡೇ ದಿಲ್ಲಿಗೆ ಹೋಗಿ ಪದವಿಯನ್ನು ಸ್ವೀಕಾರ ಮಾಡಿದುದು ಜಗತ್ತಿನ ಜನರಿಗೆ ಮಾರ್ಗ ದರ್ಶನ ಮಾಡಬಹುದೆಂದು ನಾವು ನಂಬುತ್ತೇವೆ. ಭಾರತ ಸರಕಾರದ ಉಪರಾಷ್ಟ್ರ ಪತಿಗಳಾದ ಶ್ರೀಮಾನ್ ಬಿ. ಡಿ. ಜತ್ತಿಯವರಿಗೂ ಅವರ ಧರ್ಮಪತ್ನಿಯವರಿಗೂ ಅವರ ಮಕ್ಕಳಿಗೂ, ಪರಿವಾರಕ್ಕೂ ಶ್ರೀ ಶೈಲ ಮಲ್ಲಿಕಾರ್ಜುನ — ಭ್ರಮರಾಂಬೆಯರೂ ತುಂಬಿದ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಿ ಕಾಪಾಡಲೆಂದು ಹರಸುತ್ತೇವೆ.

ಶುಭಂಭವತು.

ಶ್ರೀ ಮದ್ವೇದಾಗಮೋಪನಿಷತ್ಪ್ರತಿಪಾದಿತ
ವೀರಶೈವ ಮಹಾಮತ ಸ್ಥಾಪನಾಚಾರ್ಯ
ಶ್ರೀ ವಟವೃಕ್ಷ ಸಿದ್ಧೇಶ್ವರ ಲಿಂಗಗರ್ಭಾವಿರ್ಭೂತ
ಶ್ರೀ ಜಗದ್ಗುರುದಾರುಕಾಚಾರ್ಯ ಪರಂಪರಾಗತ

**ಶ್ರೀ ಮದುಜ್ಜಯನೀ ಸದ್ಧರ್ಮ ಸಿಂಹಾಸನಾಧೀಶ್ವರ**
**ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರರಾಜ ದೇಸಿಕೇಂದ್ರ ಶಿವಾಚಾರ್ಯ**

ಮಹಾಸ್ವಾಮಿನಾಂ ಸನ್ನಿಧಾನೇನ

ಭಾರತದ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಬಿ. ಎ. ಬಿ. ಎಲ್. ಇವರಿಗೆ ನೀವು ಅಭಿನಂದನ ಗ್ರಂಥವನ್ನರ್ಪಿಸುವದು ಬಹಳ ಸಂತೋಷದ ಸಂಗತಿ.

ಮಹೋದಯರಾದ ಶ್ರೀ ಬಸಪ್ಪಾ ದಾನಪ್ಪಾ ಜತ್ತಿ ಇವರು ರಾಜ್ಯಾಂಗಗಳ ಜ್ಞಾನವನ್ನು ಸಂಪಾದಿಸಿಕೊಂಡು ಮುಂದುವರಿದಂತೆ ಜಗದ್ಗುರು ರೇಣುಕಾಚಾರ್ಯರಿಂದ ಉಪದೇಶಿಸಿದ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮ, ತಪ, ಪೂಜಾ, ಜಪ, ಧ್ಯಾನ ಈ ಹತ್ತು ಧರ್ಮಗಳನ್ನು ಅನುಷ್ಠಾನದಲ್ಲಿ ತರಲು ಸತತ ಪ್ರಯತ್ನ ಪಡುತ್ತಿರುವುದು ಸ್ತೋತ್ರಾರ್ಹವಾದ ಸಂಗತಿಯಾಗಿದೆ.

ಕನ್ನಡ ರಾಜ್ಯಕ್ಕೆ ರಾಜಧಾನಿಯಾದ ಬೆಂಗಳೂರು ನಗರದಲ್ಲಿ ರಾಜ್ಯಾಂಗಕ್ಕೆ ವಿಧಾನಸೌಧವಿದ್ದಂತೆ ಆಧ್ಯಾತ್ಮದ ಬೆಳಕಿನ ದ್ಯೋತಕವಾಗಿ ಬಸವಸದನವನ್ನು ನಿರ್ಮಿಸಿರುವುದು ಇವರ ಧರ್ಮಶ್ರದ್ಧೆಯನ್ನು ನೋಡಬಹುದಾಗಿದೆ. ವೇದ, ಆಗಮ, ಉಪನಿಷತ್, ಪುರಾಣ ಮತ್ತು ಇವುಗಳ ಸಾರವನ್ನು ಮಾತೃಭಾಷೆಯಾದ ಕನ್ನಡದಲ್ಲಿ ಉಪದೇಶಿಸಿರುವ ವಚನ ಶಾಸ್ತ್ರ ಮಂತಾದ ಧರ್ಮ ಗ್ರಂಥಗಳ ಸಂಗ್ರಹದ ಅಭ್ಯಾಸವನ್ನು ನಿತ್ಯಾಚರಣೆಯಲ್ಲಿ ತಂದಿರುವುದು ಆದರ್ಶವಾಗಿದೆ, ಮತ್ತು ತಮ್ಮಲ್ಲಿರುವ ಧಾರ್ಮಿಕ ಭಾವನೆಯನ್ನು ಜನ ಸಾಮಾನ್ಯರಲ್ಲಿಯೂ ಮೂಡಿಸಿ ಭಾರತೀಯ ಸನಾತನಧರ್ಮ ರಕ್ಷಣೆಗೆ ಕಾರಣೀಭೂತರಾಗಿದ್ದಾರೆ.

ಇಂದಿನ ನವ ನಾಗರಿಕತೆಯ ಮಾನವರಿಗೆ ಇವರ ಧರ್ಮ ಶ್ರದ್ಧೆ ಕಾಯಕ ನಿಷ್ಠೆಯು ಆದರ್ಶವಾಗಿದೆ.

ಪ್ರತಿಯೊಬ್ಬ ಮನುಷ್ಯನ ಪ್ರಗತಿ ಅವನ ಸ್ವಶಕ್ತಿಯಿಂದಲೇ ಆಗುತ್ತದೆ. ಅವಿಶ್ರಾಂತ ಪ್ರಯತ್ನ, ಸ್ವಾರ್ಥ ತ್ಯಾಗ, ವಿಶ್ವಪ್ರೇಮ, ಕಾರ್ಯೋತ್ಸಾಹ, ಪಾಪ ಭೀತಿ, ಸ್ವಾವಲಂಬನೆ ಮತ್ತು ಮನೋನೈರ್ಮಲ್ಯ, ಈ ಏಳು ಗುಣಗಳಿಂದ ಉನ್ನತಿಯನ್ನು ಹೊಂದಿದ ಶ್ರೀ ಬಿ. ಡಿ. ಜತ್ತಿಯವರು ಬೆಂಗಳೂರು ನಗರದಲ್ಲಿ ಸಂಕಲ್ಪಸಿದ ಶ್ರೀ ಜಗದ್ಗುರು ಪಂಚಾಚಾರ್ಯ ಭವನವನ್ನು ಪೂರ್ಣಗೊಳಿಸಿ ಕರ್ನಾಟಕ ರಾಜ್ಯವನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಿಂದ ತುಂಬುವ ಶಕ್ತಿವಂತರನ್ನಾಗಿ ಮಾಡಲು ಪೂರ್ಣ ಪದವಿಯನೇರಲೆಂದು ಆಶಿಸುತ್ತೇವೆ.



## ನಿಸ್ಸೀಮರು

ಹಿರಿಯರೆಂತಿಪ್ಪರಯ್ಯಾ ?
ಅಯ್ಯಾ, ದಿಟದ ರಾಸಿಗೆ ಅವರ ಘಟಲಕ್ಷಣ
ನಿಸ್ಸೀಮರೆಂತಿಪ್ಪರಯ್ಯಾ ?
ಅಯ್ಯಾ, ಸೀಮೆಗೆಡೆಗುಡದ ಬಯಲನೊಳಕೊಂಡಿಪ್ಪರು
ಭಾವರೆಂತಿಪ್ಪರಯ್ಯಾ ?
ಅಯ್ಯಾ, ಕಣ್ಣಾಲಿದೃಷ್ಟಿಯ ನುಂಗಿದಂತೆ
ನೀರೆಂತ ನನೆವುದೆಂದು ಬೆಸಗೊಂಡಡೆ,
ಹೇಳುವ ಶಬ್ದದಂತಿಹುದವರ ನಿಲವು.
'ಲಿಂಗಮಧ್ಯೇ ಜಗತ್ ಸರ್ವಂ'
ಲಿಂಗದಂಗ ರೇಕಣ್ಣ ಪ್ರಿಯನಾಗಿ ನಾಥನಂತಿಪ್ಪರು.

— ಬಹುರೂಪಿ ಚೌಡಯ್ಯ

ವೀರಶೈವ ಮತಸ್ಥಾಪನಾಚಾರ್ಯ

ಶ್ರೀ ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ

## ಶ್ರೀ ಶ್ರೀ ಜಗದ್ಗುರು ವಿಶ್ವೇಶ್ವರ
## ಶಿವಾಚಾರ್ಯ ಮಹಾಸ್ವಾಮಿಗಳವರು

ಜಂಗಮವಾಡಿ ಮಠ, ಶ್ರೀ ಕ್ಷೇತ್ರ ಕಾಶಿ ವಾರಣಾಸಿ.

● ಮಹಾಸನ್ನಿಧಾದದಿಂದ ●

ಶರಣರ ತಪೋಭೂಮಿಯಾದ ಕಲ್ಬುರ್ಗಿಯಲ್ಲಿ ಬಸವ ಸಮಿತಿಯ ಅಧ್ಯಕ್ಷರೂ, ಭಾರತದ ಉಪರಾಷ್ಟ್ರಪತಿಗಳೂ ಆದ ಸನ್ಮಾನನೀಯರಾದ ಶ್ರೀ ಬಸಪ್ಪ ದಾನಪ್ಪ ಜತ್ತಿಯವರ ಸತ್ಕಾರ ಸಮಾರಂಭವನ್ನು ತಾ|| ೪-೧೦-೧೯೭೫ ನೆ ದಿನ ನಡೆಯುವ ವಿಷಯವು ಅವಗತವಾಗಿ ಮಹದಾನಂದವಾಯಿತು.

ಜಗತ್ತಿನಲ್ಲಿ ಮನುಷ್ಯನಿಗೆ ಭಕ್ತಿ, ಜ್ಞಾನ, ವೈರಾಗ್ಯ, ಸದ್‌ವಂಶ, ಐಶ್ವರ್ಯ, ಪವಿತ್ರ ಪಾವನ ಜೀವನ, ಮತ್ತು ದಯಾ, ದಾಕ್ಷಿಣ್ಯ, ಸದ್‌ವಿಚಾರ, ಪ್ರೇಮ ಭಾವನೆಗಳು ಪ್ರಾಪ್ತವಾಗಬೇಕಾದರೆ ಒಂದು ಸುಯೋಗ್ಯ ಕಾರಣವನ್ನು ಒಪ್ಪಲೇಬೇಕು; ಅದುವೇ ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯ ಪುಂಜವು. ಆ ಪುಣ್ಯದ ಫಲದಿಂದಲೇ ಮಾನವನು ಸರ್ವತೋಮುಖದಿಂದ ಸುಖಮಯ ಜೀವನವನ್ನು ಕಳೆಯುತ್ತಾನೆ. ನರನು ಮಾಡಿದ ಪುಣ್ಯಕರ್ಮಗಳಿಂದ ಆತನೇ ಹರನಾಗಿ ಬಾಳುತ್ತಾನೆ; ಆದರ್ಶ ಪ್ರಾಯನಾಗುತ್ತಾನೆ. ಇದೇ ಪ್ರಕಾರ ಭಾರತ ದೇಶದ ಉಪರಾಷ್ಟ್ರಪತಿಗಳಾದ ಸನ್ಮಾನನೀಯ ಶ್ರೀ ಬಿ. ಡಿ. ಜತ್ತಿಯವರು ತಮ್ಮ ಪೂರ್ವ ಜನ್ಮದ ಸುಕೃತದಿಂದ ಶಿವಶರಣರಿಂದ ಪರಿಪೂತವಾದ ವಿಜಾಪುರ ಜಿಲ್ಲೆಯ ಜಮಖಂಡಿಯ ಸಮೀಪದಲ್ಲಿರುವ ಸಾವಳಗಿ ಎಂಬ ಗ್ರಾಮದಲ್ಲಿ ಜನ್ಮವೆತ್ತಿದರು. ವಿಜಾಪುರ ಜಿಲ್ಲೆ ಎಂದರೆ ಶ್ರೀ ಬಸವಾದಿ ಶಿವಶರಣರ ನಾಡು; ಮಹಾತ್ಮರ ನೆಲೆಬೀಡು. ಆ ಮಹಾತ್ಮರಾದ ಸರ್ವ ಶಿವಶರಣರ ಜೀವನವೆಂದರೆ ಪವಾಡವು. ಅಂದ ಮೇಲೆ ಸನ್ಮಾನನೀಯ ಶ್ರೀ ಬಿ. ಡಿ. ಜತ್ತಿಯವರ ಜೀವನವೆಂದರೆ ಪವಾಡ ಜೀವನವು; ಪವಿತ್ರ, ಪ್ರಕಾಶ, ಪರಿಪೂರ್ಣ ಜ್ಯೋತಿಯೇ ಸರಿ.

ಉಪರಾಷ್ಟ್ರಪತಿಗಳು ವೀರಶೈವ ಮತದಲ್ಲಿ ಹುಟ್ಟಿ ಬೆಳೆದು ಶರಣ ಧರ್ಮವನ್ನೇ ಜೀವಾಳವನ್ನಾಗಿ ಮಾಡಿಕೊಂಡಿದ್ದಾರೆ. ಅವರು ಯಾವದೇ ಕಾರ್ಯ ವನ್ನು ಮಾಡಿದರೂ ಧರ್ಮದೃಷ್ಟಿಯಿಂದಲೇ ಮಾಡುತ್ತಾರೆ. ಧರ್ಮವೇ ಅವರ ಪ್ರಾಣ, ಧರ್ಮ ರಕ್ಷಣೆಯನ್ನು ತಮ್ಮ ಶರೀರದಂತೆ ರಕ್ಷಿಸುತ್ತಾರೆ; ಆದ್ದ ರಿಂದ ಅನುಭವಿಗಳು ಹೇಳಿದಂತೆ. " ಧರ್ಮೋ ರಕ್ಷತಿ ರಕ್ಷಿತಃ " ಎಂಬಂತೆ ಧರ್ಮವು ಅವರ ರಕ್ಷಣೆಯನ್ನು ಮಾಡುತ್ತ ಉಜ್ವಲವಾದ ಜೀವನವನ್ನು ದಯಪಾಲಿಸುತ್ತ ಬಂದಿದೆ ಎಂದು ಪ್ರತಿಯೊಬ್ಬನೂ ತಿಳಿದ ವಿಷಯ.

ಶ್ರೀ ಬಸವಾದಿ ಶಿವಶರಣರು ಹಾಕಿಕೊಟ್ಟ ಮಾರ್ಗವು ಶ್ರೀ ಜತ್ತಿ ಯವರಿಗೆ ಮಹಾಪಥವು. ಅವರು ತಮ್ಮ ಜೀವನ ಯಾತ್ರೆಯಲ್ಲಿ ಮಹಾ ಶಿವಶರಣರು ಇಟ್ಟ ಹೆಜ್ಜೆಯಲ್ಲಿ ಹೆಜ್ಜೆಯನ್ನಿಡುತ್ತ ಶರಣರ ಮಾರ್ಗವನ್ನು ಇನ್ನೂ ಪ್ರಕಾಶಮಯಗೊಳಿಸಿದ್ದಾರೆಂದರೆ ಅತಿಶಯೋಕ್ತಿ ಯಾಗಲಾರದು. ಶ್ರೀ ಜತ್ತಿಯವರ ಜೀವನವು ಅತಿ ಸರಳ ಜೀವನವು, ಮತ್ತು ಆದರ್ಶ ಜೀವನವು.

## ದಯಾಭರಿತರು

ಶ್ರೀ ಬಸವಣ್ಣನವರು " ದಯವಿಲ್ಲದ ಧರ್ಮವಾವುದಯ್ಯ, ದಯ ವಿರಬೇಕು ಸಕಲಪ್ರಾಣಿಗಳೆಲ್ಲರಲ್ಲಿ " ಎಂಬ ಉದಾತ್ತ ತತ್ವಜ್ಞಾನದ ಅಮೃತ ವಾಣಿಯಂತೆ ಉಪರಾಷ್ಟ್ರಪತಿಗಳು ದಯಾಭರಿತರು, ಪ್ರತಿಯೊಂದು ಜೀವದ ದಯಾಭರಿತ ಜೀವಾಳು; ಅವರಲ್ಲಿ ಅನುಕಂಪವು ತುಂಬಿ ತುಳುಕು ತ್ತಲಿದೆ. ಪರಾತ್ಪರ ಪರಮಾತ್ಮನಲ್ಲಿ, ಗುರು ಹಿರಿಯರಲ್ಲಿ ಮತ್ತು ಶಿವಶ ರಣರಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟಿರುವುದರಿಂದ ಅವರ ಜೀವನವು ಉಜ್ವಲ ಸ್ಥಿತಿಯನ್ನು ಹೊಂದಿ ಉನ್ನತ ಮಟ್ಟವನ್ನೇ ಬೆಳಗುತ್ತ ಬಂದಿದೆ ಎಂಬುದು ಅಭಿಮಾನದ ವಿಷಯವಾಗಿದೆ.

ಅವರು ಈಶ ಸೇವೆಯನ್ನು ಜನಸೇವೆಯಲ್ಲಿಯೇ ಕಾಣುತ್ತಲಿದ್ದಾರೆ. ಆದ್ದರಿಂದ ಪ್ರಾರಂಭಿಕ ಜೀವನದಿಂದ ಇಲ್ಲಿಯವರೆಗೆ ರಾಜನೀತಿಯಲ್ಲಿ ಪ್ರವೇ ಶಿಸಿ ಜನ ಸೇವೆಯನ್ನು ಸಲ್ಲಿಸುತ್ತ ಭಾರತಾಂಬೆಯ ಸೇವೆಯಲ್ಲಿ ನಿರತ ರಾಗಿದ್ದಾರೆ. ಕರ್ನಾಟಕ ಜನತೆಯ ಅಪಾರ ಸೇವೆಯನ್ನು ಸಲ್ಲಿಸಿ ಸಂಪೂರ್ಣ ಭಾರತ ದೇಶದ ಅಖಂಡ ಸೇವೆ ಸಲ್ಲಿಸಲು ಭಾರತ ಮಾತೆಯ ಮಡ

ಲಿಸಲ್ಲಿ ಬಂದು ತಂಗಿದ್ದಾರೆ. — ಭಾರತ ದೇಶದ ಉಪರಾಷ್ಟ್ರಪತಿಗಳ ಸ್ವಾಗತವು ಎಲ್ಲರಿಗೂ ಆನಂದವೇ ಆನಂದವು.

## ಸಮನ್ವಯ ದೃಷ್ಟಿ

ಉಪರಾಷ್ಟ್ರಪತಿಗಳ ಜೀವನವೆಂದರೆ ಆಧ್ಯಾತ್ಮಿಕ ಹಾಗೂ ಆದಿಭೌತಿಕಗಳ ಯೋಗ; ರಾಜ ನೀತಿ ಹಾಗೂ ಧರ್ಮ ನೀತಿ ಇವೆರಡನ್ನೂ ಸಮನ್ವಯ ದೃಷ್ಟಿಯಿಂದ ನೋಡುವದು ಅವರದೊಂದು ಉಜ್ವಲ ಜೀವನವು. ರಾಜನೀತಿಯಲ್ಲಿ ನಿರತನಾದ ಮನುಷ್ಯನು ಸಾಮಾನ್ಯವಾಗಿ ಧಾರ್ಮಿಕ ಭಾವನೆಗಳಿಂದ ದೂರಾಗಲು ಪ್ರಯತ್ನಿಸುತ್ತಾನೆ. ಆದರೆ ಸನ್ಮಾನನೀಯ ಶ್ರೀ ಜತ್ತಿಯವರು ರಾಜನೀತಿಯಲ್ಲಿಯೇ ಇದ್ದುಕೊಂಡು ಧಾರ್ಮಿಕ ಜೀವನವನ್ನು ಸಾಗಿಸುತ್ತಾರೆಂಬುವದಕ್ಕೆ ಅವರ ಲಲಾಟ ವಿಭೂಷಿತವಾದ ತ್ರಿಂಪುಡ್ರ ಭಸ್ಮವೇ ಸಾಕ್ಷಿಯು. ಇದೇ ಪ್ರಕಾರ ಸನ್ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಸರ್ವತೋಮುಖ ಉನ್ನತಿಯನ್ನು ಹೊಂದಿ ಮುಂದಿನ ಸರ್ವೋಚ್ಚ ಸ್ಥಾನವನ್ನು ಗಳಿಸಿ ಭಾರತಾಂಬೆಯ ಅನವರತ ಸೇವೆಯನ್ನು ಸಲ್ಲಿಸಲು ಜಗಜ್ಜನನೀ ಜನಕರಾದ ಶ್ರೀ ಪಾರ್ವತಿ ಪರಮೇಶ್ವರರೂ ಶ್ರೀ ಜಗದ್ಗುರು ಪಂಚಾಚಾರ್ಯರೂ ಕೃಪೆಯನ್ನೀಯಲೆಂದು. ಹಾರೈಸಲಾಗಿದೆ.

ಶಿವಮ್ ಭೂಯಾತ್



ಶ್ರೀ ಮದ್ವೇದಾಗಮೋಪನಿಷಚ್ಛಾಸ್ತ್ರ
ಪುರಾಣೇತಿಹಾಸಪ್ರಸಿದ್ಧ ಸನಾತನ ವಿಮಲ
ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ ಶ್ರೀಮದ್
ರಾಮನಾಥ ಲಿಂಗಗರ್ಭಾವಿರ್ಭೂತ ಸಮಸ್ತ ಪವಿತ್ರ
ಕ್ಷೇತ್ರ ಮಸ್ತಕ ಮಣಿಭೂತ ಸಾಕ್ಷಾತ್ಕೈಲಾಸವಿರಾಜಮಾನ
ಶ್ರೀಹಿಮವದ್ಕೇದಾರ ಮಹಾಕ್ಷೇತ್ರ ವಿದ್ಯೋತಮಾನ

ವೈರಾಗ್ಯ ಸಿಂಹಾಸನಾಧೀಶ್ವರ ರಾಜಾಧಿರಾಜಸಂಪೂಜಿತ "ರಾವಲ್"
ಇತಿ ಪದಪ್ರತಿಷ್ಠಿತ ಜಗದ್ಗುರು

## ೧೦೦೮ ಶ್ರೀ ಶ್ರೀ ಶ್ರೀ ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ

● ದಿವ್ಯ ಸನ್ನಿಧಾನೇನ ●

ಭಾರತದ ಉಪರಾಷ್ಟ್ರಪತಿ ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಉಪರಾಷ್ಟ್ರಪತಿಯಾದ ನಂತರ ಮೊದಲನೆಯ ಬಾರಿಗೆ ಶ್ರೀ ಶರಣರ ಸ್ಥಾನವಾಗಿರತಕ್ಕಂಥ, ಭಕ್ತಿಯ ತವರೂರು ಆಗಿರತಕ್ಕಂಥ, ಕಲ್ಬುರ್ಗಿಗೆ ಆಗಮಿಸುತ್ತಿರುವುದು ಬಹು ಸಂತೋಷದ ಸಂಗತಿ.

ಗುರುಭಕ್ತಿಸಂಪನ್ನರಾದ ಮಾನ್ಯ ಶ್ರೀಯುತ ಬಿ. ಡಿ. ಜತ್ತಿಯವರು ವಿಜಾಪುರ ಜಿಲ್ಲೆಯ ಜಮಖಂಡಿ ಸಂಸ್ಥಾನದಲ್ಲಿ ಜನಿಸಿ ಬಹು ಕಷ್ಟದಿಂದ ವಿದ್ಯಾಭ್ಯಾಸವನ್ನು ಮಾಡಿ ಉನ್ನತ ಮಟ್ಟಕ್ಕೆ ಬಂದವರು.

ಹಿಂದೂ ಧರ್ಮದಲ್ಲಿಯೂ ಮತ್ತು ವೀರಶೈವ ಧರ್ಮದಲ್ಲಿಯೂ ವಿಶೇಷವಾಗಿ ಅಧ್ಯಯನ ಮಾಡಿ, ಜ್ಞಾನಾರ್ಜನೆಯನ್ನು ಸಂಪಾದಿಸಿರುವದು ಸ್ತುತ್ಯವಾಗಿದೆ. ಹಾಗೂ ಕಾಲಧರ್ಮಕ್ಕನುಗುಣವಾಗಿ ಶ್ರೀ ಮಹಾತ್ಮಾ ಗಾಂಧೀಜಿಯವರ ಸೇವೆಗೈದು ಅವರ ಅನುಷ್ಠಾನದಿಂದ ಉತ್ತರೋತ್ತರ ಉನ್ನತ ಪದವಿಯನ್ನು ಹೊಂದಿ ತಮ್ಮ ಶಕ್ತಿಮೀರಿ ಜನಸೇವೆಯೇ ಈಶಸೇವೆಯೆಂದು ತಿಳಿದು ಸೇವೆ ಸಲ್ಲಿಸುತ್ತಿರುವದು ಸನ್ನಿಧಿಗೆ ತುಂಬ ಸಂತೋಷವಾಗಿರುತ್ತಿದೆ. ಕರ್ನಾಟಕದ ಮುಖ್ಯಮಂತ್ರಿಯಾಗಿಯೂ ಪಾಂಡಿಚೇರಿಯ

ಲೆಫ್ಟನೆಂಟ ಗವ್ಹರನರರಾಗಿಯೂ ಜನತೆಗೆ ಅಪಾರ ಸೇವೆ ಸಲ್ಲಿಸಿರುತ್ತಾರೆ ಈಗಂತೂ ಅಖಿಲ ಭಾರತದ ಉಪರಾಷ್ಟ್ರಪತಿಯಾಗಿರುವರು. ಅವರಲ್ಲಿರತಕ್ಕ ಗುರು ಭಕ್ತಿ, ಆಚಾರ, ವಿಚಾರ ದೇಶ ಭಕ್ತಿಯ ದ್ಯೋತಕವಾಗಿವೆ. ಅವರ ಜ್ಞಾನ ಸೇವೆಯಿಂದ ಹಿಂದೂ ಧರ್ಮಕ್ಕೆ ಮತ್ತು ಮಾನವನ ಏಳಿಗೆಗೆ ಅವರಿಂದ ಸಹಾಯವಾಗಲು ಯಾವ ಸಂದೇಹವೂ ಇಲ್ಲ.

ಶ್ರೀ ಕೇದಾರೇಶ್ವರನು ಶ್ರೀ ಸದರಿಯವರಿಗೆ ಇನ್ನೂ ಉಚ್ಚ ಸ್ಥಾನ ವನ್ನು ಆಯುರಾರೋಗ್ಯ ಪ್ರಮುಖ ಸೌಭಾಗ್ಯವನ್ನೀಯಲೆಂದು ಹೃತ್ಪೂ ರ್ವಕವಾಗಿ ಆಶೀರ್ವದಿಸಲಾಗುವದು.

ಸಮಸ್ತ ಸನ್ಮಂಗಳಾನಿ ಭವಂತು

ಇತ್ಯಾಶ್ರೀ



## ಜಂಗಮ

ಜಂಗಮಕ್ಕೆ ಮಾತಾಪಿತರಿಲ್ಲ.
ಜಂಗಮಕ್ಕೆ ಜಾತಿಬಂಧುಗಳಿಲ್ಲ.
ಜಂಗಮಕ್ಕೆ ನಾಮರೂಪುಗಳಿಲ್ಲ.
ಜಂಗಮಕ್ಕೆ ಸೀಮೆಸಂಗಗಳಿಲ್ಲ.
ಜಂಗಮಕ್ಕೆ ಕುಲಗೋತ್ರಗಳಿಲ್ಲ.
ಜಂಗಮಕ್ಕೆ ಮಲಮಾಯೆಗಳಿಲ್ಲ
– ನೋಡಾ ಅಖಂಡೇಶ್ವರಾ

— ಷಣ್ಮುಖ ಶಿವಯೋಗಿಗಳು.

ಶ್ರೀಮದುಜ್ಜಯನಿ ಸದ್ಧರ್ಮ ಸಿಂಹಾಸನಾಧೀಶ
ಶ್ರೀ ತರಳಬಾಳು ಜಗದ್ಗುರು

## ಶ್ರೀ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರ

ಮಹಾ ಸನ್ನಿಧಾನದಿಂದ

ರಾಜಕಾರಣಿಗಳಲ್ಲಿ ವಿವಿಧ ದೃಷ್ಟಿಕೋನವುಳ್ಳವರುಂಟು. ಆದರೆ ಶರಣ ಬಿ. ಡಿ. ಜತ್ತಿಯವರಂಥವರು ತುಂಬಾ ವಿರಳ. ನಾವು ಜತ್ತಿಯವರನ್ನು ಕರ್ನಾಟಕದ ಮುಖ್ಯಮಂತ್ರಿಗಳಾದ ಕಾಲದಿಂದಲೂ ಬಲ್ಲೆವು. ನಮ್ಮ ಅನುಭವದಲ್ಲಿ ರಾಜಕಾರಣಿಗಳೆಂದರೆ ಇಲ್ಲದ ಸಮಸ್ಯೆಗಳ ಜನಕರು. ಆದರೆ ಜತ್ತಿಯವರು ಒದಗಿಬಂದ ಸಮಸ್ಯೆಗಳ ನಿವಾರಕರು. ಇವರಲ್ಲಿ ವೈಯಕ್ತಿಕ ಭಾವನೆಗಳನ್ನು ನಾವು ಎಂದೂ ಕಾಣಲಿಲ್ಲ. ವಿನಯ ಮತ್ತು ಸರಳತೆಯ ಸಾಕಾರಮೂರ್ತಿಗಳು. ತಮ್ಮದನ್ನು ಬಿಡುವವರಲ್ಲ, ಇತರರದನ್ನು ಹತ್ತಿಕ್ಕುವವರಲ್ಲ. ಕಾಲೋಚಿತವಬಲ್ಲ ರಾಜಕಾರಣಿಗಳೊಬ್ಬರು ಯಾರಾದರೂ ಕರ್ನಾಟಕದಲ್ಲಿದ್ದಾರೆಂದರೆ ಶರಣ ಜತ್ತಿಯವರೊಬ್ಬರೇ ಎಂದು ನಮ್ಮ ಅಭಿಪ್ರಾಯ.

ಎಲ್ಲದರಲ್ಲೂ ಜತ್ತಿಯವರುಂಟು. ಆದರೆ ಯಾವುದರಲ್ಲೂ ಜತ್ತಿಯವರಿಲ್ಲ. ಕುಂಬಾರ ಹುಳದಂತೆ ತಾವು ತಾವಾಗಿಯೇ ಇರುತ್ತಾರೆ. ಮುಖ್ಯಮಂತ್ರಿಗಳಾಗಿದ್ದರು; ಅರ್ಥಮಂತ್ರಿಗಳಾಗಿದ್ದರು; ಲೆಫ್ಟಿನೆಂಟ್ ಗವರ್ನರ್‌ರವರಾಗಿದ್ದರು; ಗವರ್ನರ್ ಸಹ ಆಗಿದ್ದರು. ಈ ಎಲ್ಲಾ ಕಾಲದಲ್ಲೂ ಅಲ್ಲಲ್ಲಿಯೇ ನಾವು ಅವರನ್ನು ಬಲ್ಲೆವು. ರಾಜಕಾರಣಿಗಳೆಲ್ಲರೂ ಶರಣ ಜತ್ತಿಯವರಂತೆ ಏಕಾಗಬಾರದೆಂಬುದೇ ನಮ್ಮ ಚಿಂತೆ. ನಮ್ಮ ರಾಜಕಾರಣಿಗಳಲ್ಲಿ ಜಾತಿಯುಂಟು; ಸ್ವಾರ್ಥವುಂಟು. ಎಲ್ಲಕ್ಕೂ ಮಿಗಿಲಾಗಿ ವೈಭವಯುತ ಜೀವನವುಂಟು. ಶರಣ ಜತ್ತಿಯವರಲ್ಲಿ ಇದಾವುದನ್ನೂ ಯಾರೂ ಕಾಣರು.

ಇವರಿಗೆ ಸ್ಥಾನ ಮುಖ್ಯವಲ್ಲ, ಸೇವೆಮುಖ್ಯ. ಸೇವಾಸ್ಥಾನದಲ್ಲಿ ತರತಮಗಳನ್ನು ಎಣಿಸುವವರಲ್ಲ. ಅಂತೆಯೇ ತಾವು ಮುಖ್ಯಮಂತ್ರಿಯಾದವರಾದರೂ ತಮಗೆ ಸರಿಬಾರದವರ ನೇತೃತ್ವದಲ್ಲಿ ಅರ್ಥಮಂತ್ರಿಗಳಾಗಿ ಸೇವೆ ಸಲ್ಲಿಸಿ ತಮ್ಮ ಹಿರಿಯತನವನ್ನು ಪ್ರದರ್ಶಿಸಿದರು. ಈಗ ನಮ್ಮ ರಾಷ್ಟ್ರದ ಉಪರಾಷ್ಟ್ರಪತಿಗಳಾ

ಗಿದ್ದಾರೆ. ಇಲ್ಲಿಯೂ ಅವರು ಸ್ನೇಹ ಸೌಹಾರ್ದಗಳನ್ನು ನೀಡಬಲ್ಲರೇವಿನಃಅಧಿಕಾರದ ಹೆಮ್ಮೆಯನ್ನು ಪ್ರದರ್ಶಿಸುವವರಲ್ಲ. ಇವರ ಜೀವನವು ರಾಷ್ಟ್ರಕ್ಕೆ ಆದರ್ಶವಾಗಿದೆ.

ಶ್ರೀ ಜತ್ತಿ ಅವರು ಮತ್ತೊಬ್ಬರ ಅನುಕರಣೆಯನ್ನು ಮಾಡುವವರಲ್ಲ. ತಮ್ಮ ಪಾದುದನ್ನು ಯಾವ ಕಾರಣಕ್ಕೂಬಿಡುವವರಲ್ಲ. ಇದಕ್ಕೆ ನಿದರ್ಶನ ವಿಭೂತಿಧಾರಣೆ. ಬಸವಣ್ಣನ ಹೆಸರೆತ್ತಿದರೆ ಜಾತೀಯ ಭಾವನೆ ಮೂಡೀತೆಂದು ಲಿಂಗವನ್ನು ಬಿಟ್ಟವರುಂಟು; ವಿಭೂತಿಯನ್ನು ಧರಿಸದವರುಂಟು. ಆದರೆ ಬಸವಣ್ಣನವರು ಲಿಂಗವಂತರಲ್ಲ; ಅವರು ಜಾತಿಯಿಂದ ಬ್ರಾಹ್ಮಣರು. ಲಿಂಗ–ವಿಭೂತಿಗಳನ್ನು ಬಸವಣ್ಣನವರು ಬಳಸಿದ್ದು ಜಾತಿಗಾಗಿ ಅಲ್ಲ. ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ಎಂಬುದನ್ನು ಅರಿತಾಚರಿಸುವ ರಾಜಕಾರಣಿಗಳಲ್ಲಿ ಶರಣ ಜತ್ತಿಯವರೊಬ್ಬರೇ. ವಿಶ್ವಮಾನವರ ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ಜೀವನವನ್ನು ಮುಡುಪಿಟ್ಟು ಹೋರಾಡಿ ಮಡಿದವರು ಪ್ರಪಂಚದ ಇತಿಹಾಸದಲ್ಲಿ ಬಸವಣ್ಣನವರೊಬ್ಬರೇ. ಅವರ ತತ್ವವನ್ನು ಪ್ರಪಂಚಕ್ಕೆ ಒಪ್ಪಿಸುವ ಮಹಾಕಾರ್ಯದಲ್ಲಿ ಯಾವ ಸಂಕೋಚವೂ ಇಲ್ಲದೆ ಮುನ್ನುಗ್ಗುತ್ತಿರುವರು. ಶ॥ ಜತ್ತಿ ಅವರು. ನಾವು ಒಬ್ಬ ವಿಶ್ವದ ಪೌರರಾಗಿ ಜತ್ತಿಯವರಲ್ಲಿ ವಿಶ್ವ ಪೌರತ್ವದ ಸರ್ವಗುಣ ಗಾಂಭೀರ್ಯಗಳನ್ನು ಮತ್ತು ಸ್ನೇಹ–ಸೌಹಾರ್ದಗಳನ್ನು ಕಾಣುತ್ತಲಿದ್ದೇವೆ. ಕಲ್ಯಾಣ ಕರ್ನಾಟಕದ ನಾಗರಿಕರು ಅವರನ್ನು ಸನ್ಮಾನಿಸುವ ಈ ಸಂದರ್ಭವನ್ನು ಪುಣ್ಯಮಯವಾದುದೆಂದು ಗಣಿಸುತ್ತೇವೆ. ಶರಣ ಜತ್ತಿಯವರು ಚಿರಕಾಲ ಬಾಳಲಿ. ಇದು ನಮ್ಮ ಹಾರೈಕೆ.



ಶ್ರೀಮತ್ಪರಮಪಾವನ ಚರಿತ್ರ
ಚಾರುತರ ಸಮ್ಮೋಹನಾಂಗ ಮದನಮರ್ದನ
ಮಾಯಾ ಕೋಲಾಹಲ, ನಿತ್ಯನಿರಂಜನ, ನಿಗಮಗೋಚರ

ಸಚ್ಚಿದಾನಂದ, ನಿತ್ಯಪರಿ
ಪೂರ್ಣಹೃದಯ,ಜಗದ್ವಿಸ್ತಾರ ಮೂಲಸ್ತಂಭಾ
ಯಮಾನ ಪ ರ ಶಿ ವ ಸ್ವ ರೂ ಪ ಶ್ರೀಮದಲ್ಲಮಪ್ರಭು

ಸ್ವಾಮ್ಯನ್ವಯ ಸಂಜನಿತಾನಾಂ,
ಶ್ರೀಮದ್ವೀರಶೈವ ಸಿದ್ಧಾಂತ ಸಕಲ ಸಿಂಹಾಸ
ನಾಧಿಪ ಪರಮ ಷಟ್‌ಸ್ಥಲ ಸ್ಥಾಪನಾಚಾರ್ಯವರ್ಯಾಣಾಂ

ಶ್ರೀ ಮಚ್ಚಿನ್ಮೂಲಾದ್ರಿ
ಬೃಹನ್ಮಠಾಂತರಾಳ ಪರಿಶೋಭಿತ ಸತ್ಪ್ರಭು
ಮಂಡಿತೋರ್ಧ್ವ ಹೃದಯಾತ್ಮಕದ್ವಾರವತಿ ಶೂನ್ಯಸಿಂಹಾಸನಾಧೀಶ

**ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ**
**ಮುರುಘರಾಜೇಂದ್ರ ಮಹಾಸ್ವಾಮಿನಾಂ**

ಶ್ರೀ ಮಚ್ಚಿನ್ಮೂಲಾದ್ರಿ ಬೃಹನ್ಮಠ, ಚಿತ್ರದುರ್ಗ.

ಮಹಾ ಸಂಸ್ಥಾನದಿಂದ

ಭಾರತದ ಉಪರಾಷ್ಟ್ರಪತಿ, ಶ್ರೀಮಾನ್ ಬಸಪ್ಪ ದಾನಪ್ಪ ಜತ್ತಿ, ಅವರು ತಮ್ಮ ರಾಜಕೀಯ ಜೀವನದಲ್ಲಿಯೂ ಧರ್ಮ ಶ್ರದ್ಧೆಯನ್ನು, ತತ್ವ ನಿಷ್ಠೆಯನ್ನು, ಬಹು ಜಾಗರೂಕತೆಯಿಂದ ಕಾಪಾಡಿಕೊಂಡು ಬಂದಿದ್ದಾರೆ. ಅವರ ಆಧ್ಯಾತ್ಮ ಬುದ್ಧಿ, ಅವರಿಗೆ ಎಲ್ಲ ಕ್ಷೇತ್ರಗಳಲ್ಲಿ ಅವಕಾಶ ಕಲ್ಪಿಸಿಕೊಟ್ಟಿದೆ; ಎಲ್ಲ ಪರಿಸ್ಥಿತಿ ಯಲ್ಲಿ ಸೂಕ್ತ ಮಾರ್ಗದರ್ಶನ ನೀಡಿದೆ.

ಅವರು ಅಧಿಕಾರದ ಎತ್ತರದ ಗದ್ದುಗೆಯ ಮೇಲಿದ್ದರೂ ನಿರಹಂಭಾವದ ಸರಳ–ಸಾತ್ವಿಕ–ವರ್ತನೆಯಿಂದ " ಸದು ವಿನಯವೇ ಸದಾಶಿವನ ಒಲುಮೆ "— ಎಂಬ ಬಸವ ಮಹಾನುಭಾವನ ನೀತಿ ಸೂತ್ರವನ್ನು ಎತ್ತಿ ಹಿಡಿದಿದ್ದಾರೆ !

ತಮ್ಮ ಧರ್ಮದ ಆದರ್ಶಗಳಿಗೆ ಹೊಂದಿಕೊಂಡು, ಇತರ ಧರ್ಮಗಳನ್ನು ಹೇಗೆ ಪ್ರೀತಿಸಬೇಕು ? ಹೇಗೆ ಗೌರವಿಸಬೇಕು ? — ಎಂಬುದನ್ನು ಅವರು ಚೆನ್ನಾಗಿ ಮನನರಿಕೆ ಮಾಡಿಕೊಂಡಿದ್ದಾರೆ; ಎಲ್ಲ ಧರ್ಮಗಳಿಗೂ ಆಪ್ತ ವ್ಯಕ್ತಿಯೆನಿಸಿದ್ದಾರೆ !

ಅಧಿಕಾರ ಮುಖ್ಯವಲ್ಲ; ಧ್ಯೇಯ ಸಾಧನೆ ಮುಖ್ಯ — ಎಂಬ ಬೀಜ ಮಂತ್ರದ ಬಲದಿಂದಲೇ ಅವರು ಮುಂದುವರಿಯುತ್ತ ಇದ್ದಾರೆ. ಅವರ ಉನ್ನತ ವ್ಯಕ್ತಿತ್ವವನ್ನು, ಕೇವಲ ಸಮಾಜ ದೃಷ್ಟಿಯಿಂದ ನೋಡದೆ ದೇಶ ದೃಷ್ಟಿಯಿಂದ, ರಾಷ್ಟ್ರ ದೃಷ್ಟಿಯಿಂದ, ನೋಡಿದಾಗ, ಅವರು ಇನ್ನೂ ನಿಚ್ಚಳವಾಗಿ ಗೋಚರರಾಗುತ್ತಾರೆ.

ನೀವು ಯೋಚಿಸಿರುವಂತೆ, ಅವರಿಗೆ ಅಭಿನಂದನ ಗ್ರಂಥವನ್ನು ಅರ್ಪಿಸಿ, ಕೃತಜ್ಞತೆಯನ್ನು ಸೂಚಿಸುವುದು ಸರ್ವಥಾ ಸೂಕ್ತ; ಆದು ತಕ್ಕ ರೀತಿಯಲ್ಲಿ ನೆರವೇರಲೆಂದು ಹಾರೈಸಲಾಗಿದೆ.



## ಗುಹೇಶ್ವರ ಪೂಜೆ

ಗಗನವೇ ಗುಂಡಿಗೆ, ಆಕಾಶವೇ ಅಗ್ಘವಣಿ !
ಚಂದ್ರಸೂರ್ಯರಿಬ್ಬರೂ ಪುಷ್ಪನೋಡಾ !
ಬ್ರಹ್ಮ ಧೂಪ, ವಿಷ್ಣು ದೀಪ
ರುದ್ರನೋಗರ ಸಯಿದಾನ ನೋಡಾ
ಗುಹೇಶ್ವರಲಿಂಗಕ್ಕೆ ಇದು ಪೂಜೆ ನೋಡಾ !!

— ಅಲ್ಲಮಪ್ರಭುಗಳು.

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು

## ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು

ಮೂರುಸಾವಿರ ಮಠ ಹುಬ್ಬಳ್ಳಿ ಅವರ

● ದಿವ್ಯ ಸನ್ನಿಧಾನದಿಂದ ●

ಭಾರತದ ಉಪರಾಷ್ಟ್ರಪತಿಗಳಾದ ಶ್ರೀ ಬಿ. ಡಿ. ಜತ್ತಿಯವರು ಜೀವನದ ವಿಸ್ತಾರವಾದ ಬಯಲಿನಲ್ಲಿ ತಮ್ಮನ್ನು ತಾವರಿಯುತ್ತ ಸಾಗಿದವರು. ಕೆಲಸ ಮಾಡಿದಲ್ಲೆಲ್ಲ ತಮ್ಮ ವ್ಯಕ್ತಿತ್ವದ; ಸಜ್ಜನಿಕೆಯ ಮಾಧುರ್ಯದಿಂದ, ಸಂಸ್ಕಾರದಿಂದ ಹಲವು ಹೃದಯಗಳನ್ನು ಗೆದ್ದವರು. ಕರ್ನಾಟಕದಲ್ಲಿ ಮಂತ್ರಿಗಳಾಗಿ, ಮುಖ್ಯಮಂತ್ರಿಗಳಾಗಿ, ಪಾಂಡಿಚೇರಿಯ ಲೆಫ್ಟನಂಟ ಗವ್ಹರ್ನರರಾಗಿ, ಒಡಿಸಾದ ರಾಜ್ಯಪಾಲರಾಗಿ, ಸಧ್ಯ ಭಾರತದ ಉಪರಾಷ್ಟ್ರಪತಿಗಳಾದುದು ಅವರ ವ್ಯಕ್ತಿತ್ವದ ಒಂದೊಂದು ಮುಖ ನವೋನವವಾಗಿ, ಪರಿಸ್ಫುಟವಾಗಿ, ಸ್ಪಟಿಕದಂತೆ ಸ್ವಚ್ಛವಾಗಿ ಅತ್ಯಂತ ಪ್ರಭಾವಶಾಲಿಯಾದ ವ್ಯಕ್ತಿತ್ವವನ್ನು ತಂದುಕೊಟ್ಟಿದುದರ ನಿದರ್ಶನ.

**ಕಡುನಿಷ್ಠೆ**

ವೀರಶೈವ ಧರ್ಮದ ಸಂಸ್ಕೃತಿ, ಸತ್ಯ, ಅಹಿಂಸೆ, ತಪಸ್ಸು ಇವುಗಳ ಸುಮಧುರ ವಿಶ್ವಫಲಗಳನ್ನು ಸಾಧನೆಗೈದು, ರಾಜಕೀಯ ಜೀವನದಲ್ಲಿ ಮುನ್ನಡೆದ ಶ್ರೀ ಬಿ. ಡಿ. ಜತ್ತಿಯವರು ರಾಜಕೀಯ ವ್ಯಕ್ತಿಗಳಾಗಿದ್ದಂತೆ ಧಾರ್ಮಿಕ ವ್ಯಕ್ತಿಗಳು ಸಹ. ರಾಜಕೀಯದಲ್ಲಿ ಧರ್ಮವನ್ನು ಪ್ರವೇಶಿಸಿಕೊಂಡು ಸಾಗಿದ ಕೆಲವರಲ್ಲಿ ಶ್ರೀ ಜತ್ತಿಯರೊಬ್ಬರು. ಬಹಳ ವರ್ಷಗಳಿಂದ ಅತ್ಯಂತ ಸಮೀಪದಿಂದ ನಿರೀಕ್ಷಿಸುತ್ತಲಿರುವ ನಮಗೆ ತೋರಿರುವದು ಅವರ ಕಡು ನಿಷ್ಠೆ, ಅಚಲ ನಿರ್ಧಾರ, ಆಡಿದಂತೆ ಮಾಡುವ ಗುಣ, ಎಲ್ಲದಕ್ಕಿಂತ ಮಿಗಿಲಾಗಿ ಆಪ್ಯಾಯಮಾನವಾದ ಧಾರ್ಮಿಕ ಮನೋಭಾವನೆ. ಹುಬ್ಬಳ್ಳಿಗೆ ಬಂದಾಗಲೆಲ್ಲ ನಮ್ಮ ಮಠಕ್ಕೆ ಬಂದು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ದರ್ಶನಾಶೀರ್ವಾದ ಪಡೆಯುತ್ತಿರುವದು ಅವರಲ್ಲಿಯ ಶುದ್ಧ ಸಂಸ್ಕಾರಕ್ಕೆ ಸಾಕ್ಷಿಯಾಗಿದೆ.

ಧರ್ಮಚೈತನ್ಯದ ಅಮೃತವನ್ನು ಕೊಟ್ಟ ಶರಣ ಸಾಹಿತ್ಯದ ಪ್ರಚಾರ, ಪ್ರಸಾರದ ಕಾರ್ಯವನ್ನು ಬೆಂಗಳೂರಿನಲ್ಲಿ ಬಸವಸಮಿತಿಯನ್ನು ಸ್ಥಾಪಿಸಿ, ಅಲ್ಲದೆ ಹಲವು ಮುಖಗಳಿಂದ ಮಾಡಿದುದು ನಿಜಕ್ಕೂ ಮೆಚ್ಚುವಂತಹದ್ದು. ಪ್ರಚಲಿತ ವಿಜ್ಞಾನ ಯುಗದಲ್ಲಿಯೂ ಸಹ ಹಣೆಗೆ ಭಸ್ಮಧಾರಿಗಳಾಗಿ, ವೀರಶೈವ ಧರ್ಮದ ಮೌಲ್ಯಗಳನ್ನು ಅಳವಡಿಸಿಕೊಂಡು ಸಾಗಿದ ಅವರ ಸ್ಥಿತ ಪ್ರಜ್ಞೆ ಅನುಪಮವಾದುದು.

ರಾಜಕೀಯವನ್ನು ಧಾರ್ಮಿಕ ಪ್ರಜ್ಞೆಯ ತಳಪಾಯದ ಮೇಲೆ ಕಟ್ಟುವ ಶ್ರೀ ಜತ್ತಿಯವರಂತಹ ಸಹಸ್ರಾರು ವ್ಯಕ್ತಿಗಳು ಸಮಾಜದಲ್ಲಿ ಮುನ್ನಡೆದಂತೆ, ರಾಷ್ಟ್ರ ಜೀವನ ಶ್ರೇಯೋಭಿವೃದ್ಧಿಯ ಪಥದಲ್ಲಿ ಸಾಗುವದರಲ್ಲಿ ಸಂದೇಹವಿಲ್ಲ.

ಸತ್ಯಂ ಶಿವಂ ಸುಂದರಂ



## ಅಂಗ — ಲಿಂಗ

ಜ್ಯೋತಿ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯಾ
ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯಾ
ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯಾ
ಲಿಂಗವ ಮುಟ್ಟಿದಂಗವೆಲ್ಲ ಲಿಂಗವಪ್ಪವಯ್ಯ
ಸಕಳೇಶ್ವರದೇವಾ, ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ

— ಸಕಳೇಶ ಮಾದರಸ

ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ

## ಶ್ರೀ ಮಹಾಂತಸ್ವಾಮಿಗಳು

ಮುರುಘಾಮಠ, ಮೃತ್ಯುಂಜಯ ನಗರ, ಧಾರವಾಡ ಅವರ

● ದಿವ್ಯ ಸನ್ನಿಧಾನದಿಂದ ●

ಸಂಸಾರದಿಂ ಸದ್ಗತಿಯುಂಟು ಕೇಳ್ ಮಗನೆ
ಬಸವಾದಿ ಪ್ರಮಥರಿಗೇನಿದ್ದಿಲ್ಲವೇ ॥
ಸಂಸಾರ ಪಿಡಿದು ಸನ್ಮಾರ್ಗದಲಿ ನಡೆವರಿಗೆ
ಕುಶಲ ಶಂಕರ ತಾನೆ ಮೋಕ್ಷವನು ಕೊಡುವ

ಎಂದು ಬಾಲಲೀಲಾ ಶ್ರೀ ಮಹಾಂತಶಿವಯೋಗಿಗಳು ಬೋಧಿಸಿದಂತೆ ಮಾನವನು ಸಂಸಾರದಲ್ಲಿದ್ದರೂ ಕಾಯಕ ಜೀವಿಯಾಗಿ ಸನ್ಮಾರ್ಗದಲ್ಲಿ ನಡೆದರೆ ಇಹದಲ್ಲಿ ಸುಖಿಯಾಗಿ ಪರಲೋಕದಲ್ಲಿ ಸಲ್ಲುವವನಾಗುವನು. ಪುಷ್ಪವು ಫಲಸೂಚಕವೆಂಬಂತೆ ಜಮಖಂಡಿ ಸಂಸ್ಥಾನ ಸಾವಳಗಿಯಲ್ಲಿ ಶ್ರೀ ಜತ್ತಿಯವರ ಮನೆತನದಲ್ಲಿ ಶ್ರೀ ಬಸವಪ್ಪನವರು ಸತ್ಪುತ್ರರಾಗಿ ಜನಿಸಿದರು. ಇವರ ತಂದೆ ಶ್ರೀ ದಾನಪ್ಪನವರು ಧರ್ಮನಿಷ್ಠರೂ ಭಕ್ತಿ ಮಾರ್ಗದಲ್ಲಿ ನಡೆಯುವವರೂ ಆಗಿದ್ದರು. ಅಥಣಿ ಶ್ರೀ ಮುರುಘೇಂದ್ರ ಶಿವಯೋಗಿಗಳ ದರ್ಶನಾಶೀರ್ವಾದಕ್ಕೆ ಆಗಾಗ ಹೋಗುತ್ತಿದ್ದರು. ಒಮ್ಮೆ ಚಿ॥ ಬಸವಪ್ಪ ಬಾಲಕನನ್ನು ಕರೆದುಕೊಂಡು ಅಥಣಿಗೆ ಹೋಗಿ ಶ್ರೀ ಮಹಾಶಿವಯೋಗಿಗಳವರಿಗೆ ಸಾಷ್ಟಾಂಗವೆರಗಿ ಕುಳಿತುಕೊಂಡರು. ಶಿವಯೋಗಿಗಳು ಅಘಟನಘಟನಾ ಸಾಮರ್ಥ್ಯವುಳ್ಳವರು. ಲಿಂಗದಲಿ ಮನವಾಗಿ, ಲಿಂಗದಲಿ ನೆನಹಾಗಿ. ಲಿಂಗದಿ ನೋಟ ನುಡಿಕೂಟವುಳ್ಳವರಾಗಿದ್ದರು. ಅವರ ಹಸ್ತ, ನೋಟ, ನುಡಿ, ಮನ, ಭಾವಗಳು ಪರುಷವಾಗಿದ್ದವು. ದಾನಪ್ಪನವರ ಹತ್ತಿರ ಕುಳಿತ ಚಿ॥ ಬಸವಪ್ಪ ಬಾಲಕನನ್ನು ನೋಡಿ ಆನಂದದಿಂದ ಇವನು ರಾಜನಾಗತಾನಲ್ಲ ! ಎಂದು ಭವಿಷ್ಯ ನುಡಿದರು. ಇವರ ನುಡಿಯು ಜ್ಯೋತಿರ್ಲಿಂಗ.

ಶ್ರೀ ಬಸವಪ್ಪನವರು ಬಿ. ಎ. ಎಲ್‌ಎಲ್. ಬಿ ಪರೀಕ್ಷೆ ಪಾಸಾಗಿ ಜಮಖಂಡಿ ಸಂಸ್ಥಾನದಲ್ಲಿ ಮಂತ್ರಿಯಾಗಿ ಸೇವೆಸಲ್ಲಿಸಿದರು. ನಂತರ ಮುಂಬೈ

ರಾಜ್ಯದಲ್ಲಿ ಎಂ. ಎಲ್. ಎ. ಆಗಿ ರಾಜ್ಯಾಡಳಿತ ಅನುಭವವನ್ನು ಪಡೆದರು. ಕನ್ನಡನಾಡು ಪ್ರತ್ಯೇಕವಾದ ನಂತರ ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಆಡಳಿತ ಸೂತ್ರವನ್ನು ವಹಿಸಿ ಜನಮೆಚ್ಚುಗೆಗೆ ಪಾತ್ರರಾದರು. " ಜಾಣನು, ಲೌಕಿಕ ಪಾರಮಾರ್ಥವೆರಡನು ಕೂಡಿ ನಡೆಸುತಿಹನು " ಎಂಬ ಶಿವಯೋಗಿಗಳ ಬೋಧೆಯಂತೆ ಶ್ರೀ ಪೂಜ್ಯ ಮೃತ್ಯುಂಜಯಪ್ಪಗಳವರಿಂದ ೧೯೧೧ರಲ್ಲಿ ಪ್ರಾರಂಭಿಸಲ್ಪಟ್ಟ ಬಸವಜಯಂತಿಗೆ ವಿಶಾಲವಾದ ಸ್ವರೂಪಕೊಟ್ಟು ಬೆಂಗಳೂರಲ್ಲಿ ಉನ್ನತವಾದ ಬಸವಭವನವನ್ನು ನಿರ್ಮಿಸಿದ್ದಾರೆ. ಕಾರ್ಯನಿರ್ವಹಣೆಗೆ ಬಸವಸಮಿತಿಯನ್ನು ರಚಿಸಿ ತಾವೇ ಅವರ ಅಧ್ಯಕ್ಷರಾಗಿ ರಾಜ್ಯದ ಮೇಧಾವಿಗಳ, ಉದಾರ ದಾನಿಗಳ ಸಹಾಯ ಸಹಕಾರಗಳನ್ನು ಪಡೆದು ಬಸವತತ್ವವನ್ನು ನಾಡಿನಲ್ಲೆಲ್ಲ ಪುಸ್ತಕ ರೂಪದಿಂದ ಪ್ರಚಾರಮಾಡಿದ್ದಾರೆ. ಬಸವಸಮಿತಿಯ ಶಾಖೆಯನ್ನು ನ್ಯೂಯಾರ್ಕ ( ಅಮೇರಿಕಾ ) ದಲ್ಲಿಯೂ ತೆರೆಯುವ ಸಾಹಸ ಮಾಡಿದ್ದಾರೆ. ಅವರ ಕರ್ತೃತ್ವಶಕ್ತಿ, ಆಡಳಿತದ ಅನುಭವ, ಆಧ್ಯಾತ್ಮ ಹಸಿವು ಅಸಾಧಾರಣವಾದುವು.

## ಹರಕರುಣೆ

" ಹರನೀವ ಕಾಲಕ್ಕೆ ಸಿರಿಯು ಬೆನ್ನಲಿಬಕ್ಕು. ಹರಿದು ಪದ್ಮೋದಕೆಯು ಕೆರೆ ತುಂಬಿದಂತಯ್ಯ. ನೆರೆಯದ ವಸ್ತು ನೆರೆವುದು ನೋಡಯ್ಯ. ಅರಸು ಪರಿವಾರ ಕೈವಾರ ನೋಡಯ್ಯ. ಪರಮ ನಿರಂಜನನ ಮರೆವ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ ಕೂಡಲಸಂಗಮದೇವ " ಎಂಬಂತೆ ಸಿರಿಸಂಪತ್ತು, ವಸ್ತುವಾಹನ, ಅಧಿಕಾರ ಅರಸು ಪರಿವಾರ ಇವರು ಬಯಸಿದ್ದಕ್ಕಿಂತ ಹೆಚ್ಚಾಗಿ ಹರಕರುಣೆಯಿಂದ ಇವರಿಗೆ ಲಭ್ಯವಾಗಿವೆ.

ಪಾಂಡೀಚೆರಿಯ ಗವ್ಹರ್ನರರಾದರು. ಇವರದು ಪ್ರೇಮಪೂರಿತ ಸಮರ್ಥ ಆಳಿಕೆಯು. ಜನಾನುರಾಗಿಗಳು. ಇವರ ಭಾಗ್ಯವು ಇವರನ್ನು ಮುನ್ನುಗ್ಗಿಸಿತು. ಓರಿಸಾ ರಾಜ್ಯದ ಗವ್ಹರ್ನರರಾಗಿ ತಮ್ಮ ಆಡಳಿತದ ಕುಶಲತೆ ಹಾಗೂ ಹೃದಯ ವೈಶಾಲ್ಯದ ಪರಿಣಾಮವಾಗಿ ಇವರ ಪ್ರತಿಭೆ ಕೇಂದ್ರ ಸರಕಾರಕ್ಕೂ ಮುಟ್ಟಿತು. ಕೇಂದ್ರದಲ್ಲಿಯೂ ಇವರ ಹೆಸರು ಪ್ರಭಾವಿತವಾಗಿ ಮೆರೆಯಿತು. ಇವರು ಭಾರತದ ಉಪರಾಷ್ಟ್ರಪತಿಗಳಾಗಿ ಈಗ ಆಡಳಿತ ಸೂತ್ರ ವಹಿಸಿಕೊಂಡು ಕರ್ತವ್ಯನಿರ್ವಹಿಸುತ್ತಿರುವದು ಸರ್ವರಿಗೂ ಸಂತೋಷ. ಅಥಣಿ ಮಹಾಶಿವಯೋಗಿಗಳವರ ಭವಿಷ್ಯವಾಣಿ ಮಂಗಲ ಸ್ವರೂಪವನ್ನು ಧರಿಸಿದುದು ಶ್ರೀ

ಮಾನ್ ಬಿ. ಡಿ. ಜತ್ತಿಯವರಿಗೂ ಅವ್ಯಕ್ತವಾಗಿ ಮಂಗಲಕರವಾಗಿ ಪರಿಣಮಿಸುತ್ತಿರುವುದು ಸರ್ವರಿಗೂ ಪರಮ ಸಂತೋಷವಾಗಿದೆ. ಶ್ರೀ ಬಿ. ಡಿ. ಜತ್ತಿಯವರು ತಮ್ಮ ಕರ್ತೃತ್ವ ಶಕ್ತಿಯಿಂದ ಮಹಿಮರ ಆಶೀರ್ವಾದವನ್ನು ರಕ್ಷಾಕವಚವಾಗಿಟ್ಟುಕೊಂಡು ಉನ್ನತ ಸ್ಥಾನಕ್ಕೇರಲೆಂದು ಹಾರೈಸುತ್ತೇವೆ.



## ಬಟ್ಟೆ ಬಯಲು

ನಾನೊಂದು ಊರಿಗೆ ಹಾದಿಯ ಕೇಳಿಕೊಂಡು ಹೋಗುತ್ತಿರಲಾಗಿ
ಮುಂದೆ ಅರಣ್ಯದೊಳಗೆ ಮೂರು ಬಟ್ಟೆ ಆಯಿತ್ತು.
ಎರಡು ಪಥವ ಬಿಟ್ಟು ಒಂದು ಪಥವ ಹಿಡಿದು
ಬರುತಿರಲು ಮೂರು ಬಟ್ಟೆಯು ಒಂದಾದವು.
ಆ ಮೂರು ಬಟ್ಟೆ ಕೂಡಿದ ಬಳಿ ಒಂದು ಬೆಟ್ಟ ಹುಟ್ಟಿತ್ತು.
ಆ ಬೆಟ್ಟವನಾರೂ ಏರಬಾರದು, ಇಳಿಯಬಾರದು.
ಈ ಬೆಟ್ಟವ ಬಿಟ್ಟು ಹೋದರೆ, ಎನಗೆ ಪಥವಿಲ್ಲವೆಂದು
ಸುತ್ತ ನೋಡಲಾಗಿ ಆರು ಮೆಟ್ಟಲದೊಂದು ಏಣಿ ಕಂಡೆ.
ಆ ಏಣಿಯ ಮೆಟ್ಟಲಮೆಟ್ಟಿ ಆ ಬೆಟ್ಟದ ತುದಿಯನೇರಿವೆ
ಆ ತುಟ್ಟ ತುದಿಯನೇರಿ ನೋಡಲಾಗಿ ಬಟ್ಟೆ ಬಯಲಾಗಿದ್ದಿತು
ಆ ಬಟ್ಟೆ ಬಯಲೊಳಗೆ ಹೋಗುತ್ತಿರಲಾಗಿ ನಾ
ಎತ್ತ ಹೋದನೆಂದರಿಯೆನಯ್ಯ ಬಸವಪ್ರಿಯಕೂಡಲ ಚೆನ್ನಬಸವಣ್ಣ

— ಹಡಪದಪ್ಪಣ್ಣನವರು

ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ

## ಶ್ರೀ ಶ್ರೀ ಮಹಾಂತಸ್ವಾಮಿಗಳು

ಶ್ರೀ ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ.

● ಮಹಾ ಸನ್ನಿಧಾನದಿಂದ ●

"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ಶರಣ ವಾಣಿಗೆ ಭಾಷ್ಯವನ್ನು ಬರೆದು ನಿಂತಿದೆ ಜತ್ತಿ ದಂಪತಿಗಳ ಪುಣ್ಯಬಾಳು. ಲಲಾಟ ದಲ್ಲಿ ಭಸ್ಮ, ಕಣ್ತುಂಬ ಸಮರ್ಪಣೆ, ಮುಖತುಂಬಿ ಪ್ರಸನ್ನಮಂದಹಾಸ, ಮಾತಿ ನಲ್ಲಿ 'ನುಡಿದರೆ ಲಿಂಗಮೆಚ್ಚಿ ಅಹುದೆನಬೇಕೆಂ' ಬಂತೆ ಧೀಮಂತ ಮಾರ್ದವತೆ, ನಡೆಯಲ್ಲಿ ಕರ್ತವ್ಯಸ್ಫುರಣ, ಎತ್ತರ ಕಿರಿದಾದರೂ ಭೀಷ್ಮ ಸಂಕಲ್ಪಗಳನ್ನು ಹೊತ್ತ ಪ್ರಸಾದಶರೀರ....ಇವೇ ಶ್ರೀ ಬಸವಪ್ಪನವರು ದಾನಪ್ಪನವರು ಜತ್ತಿ ಅವರ ಬಹಿ ರಂಗದ ವಿಡಾಯ. ಅಂತರಂಗಕ್ಕೆ ಕೈಗನ್ನಡಿ. ಅವರ ಬದುಕಿನ ಉಸಿರು ಅವರ ಸಹಧರ್ಮಿಣಿ. ಶರಣಸಂಸ್ಕೃತಿಯ ಅಚ್ಚದೇಶಿ ಇಲ್ಲಿದೆ. ಪತಿಯ ಯೋಗಕ್ಷೇಮ ಪತ್ನಿಗುಂಟು. ಪತ್ನಿಯ ದೈವಿಕತೆ ಪತಿಗುಂಟು. ಇವರ ಸುಧೀರ್ಘ ದಾಂಪತ್ಯದ ಸ್ವಾರಸ್ಯದಲ್ಲಿ ಅನೇಕ ಸಾಹಸಶೃಂಗವಿಷಯಗಳಿವೆ. ಧೀರೊದಾತ್ತ ಹೋರಾಟಗಳಿವೆ. ಸಾಮಾನ್ಯ ಮಾನವ ತಡೆದುಕೊಳ್ಳಲಾರದ ಅದ್ಭುತ ಗಂಡಾಂತರಗಳೂ ಉಂಟು. ಎಂಟೆದೆಗಳಿಗೆ ಸರಿಸಾಟಿಯಾದ ಕಷ್ಟಭಾರಗಳೂ ಉಂಟು. ಅದಕ್ಕೆಲ್ಲ ಇವರ ಸ್ಥಿತ ಪ್ರಜ್ಞತ್ವವೇ ಉತ್ತರ.

ಬಹುದಿನಗಳಿಂದ ನಾವು ಶ್ರೀ ಜತ್ತಿ ಅವರ ಬೀಗುಬೆಳಗುಗಳನ್ನು ಗತಿ–ಗಮನಗಳನ್ನು ಸಮೀಪದಿಂದ ನಿರೀಕ್ಷಿಸುತ್ತ ಬಂದಿದ್ದೇವೆ. ಜೀವನವೂ ಒಂದು ಕಲೆ. ಆ ಕಲೆಯೂ ಒಂದು ಉತ್ಕ್ರಾಂತಿ. ನಿತ್ಯಸಾಹಸಿಗೆ ಅದು ನಿತ್ಯಕೈಲಾಸ- ಕಷ್ಟದಲ್ಲೂ ಕೈವಲ್ಯ- ಇದು ಜತ್ತಿಯವರ ಬಾಳಿನಬುತ್ತಿ. ಅವರು ಎಲ್ಲೂ ತೂಕತಪ್ಪಿದವರಲ್ಲ. ಭಾವಾತಿರೇಕಗಳಿಗೆ ಆಹಾರವಾದವರಲ್ಲ. ಮಾತು ಎಷ್ಟೇ ಸವೇಗವಾದರೂ ಸಕ್ರ ಮವೂ ಸಜೀವವೂ ಆಗಿರುತ್ತದೆ. ಅಂತೆಯೇ ಅವರು ಶಿಸ್ತಿನ ಸಿಪಾಯಿ. ಶರಣ ಧರ್ಮದ ಯೋಧ- ರಾಷ್ಟ್ರಸೇವೆಯ ಕಂಕಣ ಕಟ್ಟಿದ ಅಪ್ಪಟ ಧುರೀಣ- ಸಕಲ ಜೀವಾತ್ಮರ್ರಿಗೆ ಲೇಸನುಬಯಸುವವನೇ ಕುಲಜನಲ್ಲವೆ? ಕುಲಸಂಬಂಧಕ್ಕೆ ಈ ಗುಣ

ಸಂಬಂಧ ಇವರಲ್ಲುಂಟು- ಇವರನ್ನು ಕಂಡಬಳಿಕ ಇವರಾರೆಂದು ಕೇಳಬೇಕಿಲ್ಲ ಇವರ ಇರುವೇ ಅರುಹಿನ ಪರಿಚಯ. ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ಒಪ್ಪಿರುವ ಇರವು ಇವರದು- ಜಮಖಂಡಿಯ ಸರಕಾರ, ಮುಂಬೈ ಸರಕಾರ, ಕರ್ನಾಟಕರಾಜ್ಯ, ಪಾಂಡಿಚೇರಿರಾಜ್ಯ, ಓರಿಸ್ಸರಾಜ್ಯ, ಈಗ ಭಾರತ ಸರಕಾರ ಹೀಗೆ ಇವರ ಸೇವೆಯ ಸಿಂಧೂನದಿ, ಎಲ್ಲೋ ಉದಿಸಿ, ಎಲ್ಲೋ ಪ್ರವಹಿಸಿ, ಈಗ ಮಾನವ ಸೇವೆಯ ಸಾಗರ ಸಂಪರ್ಕ ಹೊಂದಿದೆ. ಭಾರತದೇಶದ ಉಪಮಹಾಸ್ಥಾನವಾದ ಉಪ ರಾಷ್ಟ್ರಪತಿ ಪೀಠ ಇವರಿಗೆ ಎಡೆಯಾಗಿ ಬಂದಿದೆ- ಅದು ಇವರ ವ್ಯಕ್ತಿತ್ವಕ್ಕೆ ಗೌರವ-

## ಧರ್ಮ ಪುರುಷ

ಧರ್ಮ, ಭಾರತ ಸಂಸ್ಕೃತಿಯ ಅವಿಭಾಜ್ಯ ಅಂಗ. ಈ ದೇಶದ ಇತಿಹಾಸದ ಪ್ರತಿಯೊಂದು ಮಜಲಿನಲ್ಲೂ ಧರ್ಮ–ಆಧ್ಯಾತ್ಮ–ಯೋಗಗಳ ಬಗ್ಗೆ ಪ್ರಯೋಗ ಗಳು ನಡೆಯುತ್ತ ಬಂದಿವೆ- ಸನಾತನ ಧರ್ಮಕ್ಕೆ ಇಲ್ಲಿ ಜನಾಶ್ರಯವೂ ಉಂಟು; ರಾಜಾಶ್ರಯವೂ ಉಂಟು- ವಿಶಾಲಾರ್ಥದಲ್ಲಿ; ಇಲ್ಲಿ ಧರ್ಮವೇ ರಾಷ್ಟ್ರ; ರಾಷ್ಟ್ರವೇ ಧರ್ಮ. ಒಂದು ಇನ್ನೊಂದರ ಮುಖ- ಈ ಆತ್ಯಂತಿಕ ತಿಳುವಳಿಕೆ–ಸಂಸ್ಕೃತಿ–ಸಹ ಜಾಚರಣೆ ಜತ್ತಿಯವರು ಮರ್ತ್ಯಲೋಕದಲ್ಲಿ ಸಾಧಿಸಿದ ಮಹದಗಂಟು. ಅವರು ಅಕ್ಷರಶಃ ಧರ್ಮಪುರುಷರು. ಚಿತ್ತರಗಿ ಪ್ರಭು ಶ್ರೀ ವಿಜಯ ಮಹಾಂತೇಶ್ವರರು ಅವರಿಗೆ ಆಯುಶ್ಶಕ್ತಿಸಾಮರ್ಥ್ಯಗಳನ್ನು ಕರುಣಿಸಲಿ- ಭವಿಷತ್ತಿನಲ್ಲಿ ಇನ್ನೂ ಅದ್ಭುತ ಎತ್ತರಗಳನ್ನು ಅನುಗ್ರಹಿಸಲೆಂದು ನಾವು ಕಳಕಳಿಯಿಂದ ಹಾರೈಸುತ್ತೇವೆ- ಶ್ರೀ ಜತ್ತಿ ದಂಪತಿಗಳು ಶರಣಧರ್ಮದ ಆತ್ಮಯಾತ್ರಿಕರೆಂಬುದನ್ನು ಲೋಕ ತಿಳಿಯಲಿ-

ಸತ್ಯಂ ಶಿವಂ ಸುಂದರಂ





ಬಸವ ಸಮಿತಿ ಹೊಸದರಲ್ಲಿ (೧೯೬೫) ಯಾದಗಿರಿಯಲ್ಲಿ ಏಕಕಾಲಕ್ಕೆ ೧೦೧ ಜನ ಅಜೀವ ಸದಸ್ಯರಾಗಿ ಬಸವ ಸಮಿತಿಗೆ ೧೧,೧೧೧ ರೂ.ಗಳ ಹಮ್ಮಿಣಿ ಅರ್ಪಿಸಲಾಯಿತು. ಆ ಸಂದರ್ಭದಲ್ಲಿ ಶ್ರೀ ಜತ್ತಿ ಅವರನ್ನು ಸ್ವಾಗತಿಸಲಾಗುತ್ತಿದೆ. ಪಕ್ಕದಲ್ಲಿದ್ದವರು ಆಗಿನ ಪಾರ್ಲಿಮೆಂಟ ಸದಸ್ಯ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ ಅವರು ಮೆರವಣಿಗೆಯ ಕಾಲಕ್ಕೆ.



ಮನೋಲ್ಲಾಸದೊಡನೆ ರಾಷ್ಟ್ರದ ಆಗು ಹೋಗುಗಳ ಚರ್ಚೆ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿ ಅವರು ಪ್ರೇಕ್ಷಕರಾಗಿರಲು ಕೇಂದ್ರ ಸಚಿವ ಕಮಲಾಪತಿ ತ್ರಿಪಾಠಿಯವರೊಂದಿಗೆ ಶ್ರೀ ಜತ್ತಿ ಅವರು ಯಾವುದೋ ನಗೆ ಪ್ರಸಂಗದೊಡನೆ ಬೆರೆತಿದ್ದಾರೆ.

ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ

## ಶ್ರೀ ಶ್ರೀ ಶಿವಬಸವ ಮಹಾಸ್ವಾಮಿಗಳು ನಾಗನೂರು

ಅಧ್ಯಕ್ಷರು : ಶಿವಯೋಗಮಂದಿರ

● ಮಹಾಸನ್ನಿಧಾನದಿಂದ ●

ಲೋಕವೇ ನನ್ನ ಮನೆ, ಮಾನವ ಕುಲವೇ ನನ್ನ ಕುಟುಂಬ; ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವದೇ ನನ್ನ ಧರ್ಮ; ಭಾರತೀಯರೆಲ್ಲರು ಒಂದೇ ಕುಟುಂಬದವರು – ಎಂದು ಆತ್ಮೀಯತೆಯಿಂದ ನುಡಿದು ಆಚರಿಸಿದ ಕೆಲವೇ ಮಹಾನ್ ವ್ಯಕ್ತಿಗಳಲ್ಲಿ ಶ್ರೀಮಾನ್ ಬಿ. ಡಿ. ಜತ್ತಿಯವರ ಸ್ಥಾನವು ಎದ್ದು ಕಾಣುವಂತಿದೆ. ವೀರಶೈವ ಧರ್ಮಕ್ಕೂ ಕನ್ನಡ ಸಾಹಿತ್ಯಕ್ಕೂ ಇವರು ಸಲ್ಲಿಸಿದ ಸೇವೆಯು ಅಪಾರವೂ ಅವಿಸ್ಮರಣೀಯವೂ ಆಗಿದೆ.

ಸರ್ವ ಧರ್ಮಗಳ ಸಮನ್ವಯ ಸಾಧಿಸಲಿಕ್ಕೆ ದೈವೀ ಸಂಪದ್ಭರಿತರಾದ ಈ ಮಹಾನುಭಾವರು ಪಟ್ಟ ಪರಿಶ್ರಮವು ಭಾರತೀಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹದಿದೆ. ವೀರಶೈವ ವಚನ ವಾಙ್ಮಯದಲ್ಲಿ ಆವಿರ್ಭೂತವಾಗಿರುವ ವಿಶ್ವಮಾನವತೆಯ ಮಹಾನ ತತ್ವಗಳನ್ನು ಬಸವ ಸಮಿತಿ ಅಧ್ಯಕ್ಷ ಪೀಠದಿಂದ ಕನ್ನಡ ನಾಡಿನಾದ್ಯಂತವೂ ಮತ್ತು ಹೊರನಾಡುಗಳಲ್ಲಿಯೂ ಕೂಡಾ ಪ್ರಖರದಿಂದ ಪ್ರಚಾರ ಮಾಡಿ ಹನ್ನೆರಡನೆಯ ಶತಮಾನದ ಆದಿಯಲ್ಲಿ ಬಸವಾದಿ ಪ್ರಮಥರು ಕೈಕೊಂಡಿದ್ದ ಮಹಾಕಾರ್ಯದ ಪುನಃಶ್ಚೇತನಗೊಳಿಸಿ ವೀರಶೈವ ಧರ್ಮಕ್ಕೆ ಅದರಲ್ಲಿಯೂ ಕನ್ನಡ ಸಿರಿದೇವಿಯ ಸಿರಿಭಾಂಡಾರಕ್ಕೆ ಮಹಾನ ಕೊಡುಗೆಯನ್ನಿತ್ತಿದ್ದಾರೆ. ಇವರು ಅಳವಡಿಸಿಕೊಂಡಿರುವ ಅಪಾರವಾದ ಗುರು – ಲಿಂಗ – ಜಂಗಮ ಭಕ್ತಿ, ಧರ್ಮನಿಷ್ಠೆ, ಧರ್ಮಪ್ರಜ್ಞೆ, ಆಳವಾದ ರಾಜಕೀಯ ಅನುಭವ ಇವರನ್ನು ಉಪರಾಷ್ಟ್ರಪತಿಯಂತಹ ಉನ್ನತ ಸ್ಥಾನಕ್ಕೆ ಮುಟ್ಟಿಸಲು ಮುಖ್ಯ ಕಾರಣವಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು.

"ಧರ್ಮೋ ರಕ್ಷತಿ ರಕ್ಷಿತಃ" ಈ ತತ್ವವು ಈ ಮಹಾನುಭಾವರಿಗೆ ಚಾಚೂ ತಪ್ಪದೆ ಅನ್ವಯಿಸುತ್ತದೆ. ಧರ್ಮದ ಬಗ್ಗೆ ಇವರಲ್ಲಿದ್ದ ಪ್ರಕಾಂಡ ಪ್ರಜ್ಞೆ ಹಾಗು ಆಚರಣೆ ಇವು ಅವರ ಜೀವನ ವಿಕಾಸಕ್ಕೆ ಮೂಲ ಕಾರಣವಾಗಿದ್ದು ಅವರು ಕಾಲ ಕಾಲಕ್ಕೆ ಪಡೆಯುತ್ತ ಬಂದಿರುವ ಉನ್ನತೋನ್ನತವಾದ ಅಧಿಕಾರದ ಸ್ಥಾನಮಾನಗಳು ಅವರು ಸಾಧಿಸಿರುವ ಪೂಜಾ ಒಲ ಹಾಗೂ ಸತ್ಯ ಸಾತ್ವಿಕ ತೇಜದ ಪ್ರತೀಕದಂತಿವೆ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಇಟ್ಟುಕೊಂಡಿದ್ದ ಆದರ್ಶಗಳನ್ನೇ ಇವರು ತತ್ವಶಃ ಆಚರಿಸುತ್ತ ಬಂದುದರ ಮಹಾ ಪುಣ್ಯದ ಬಲವೆ, ಇಂದು ಇವರು ಹೊಂದಿರುವ ಭಾರತದ ಉಪರಾಷ್ಟ್ರಪತಿ ಸ್ಥಾನ. ಇದರ ಪವಿತ್ರಮಯವಾದ, ಪುಣ್ಯಮಯವಾದ, ಧರ್ಮಯುಕ್ತವಾದ, ಜೀವನವೇ ಇವರನ್ನು ಇನ್ನು ಮುಂದೆಯೂ ರಾಷ್ಟ್ರದ ಮಹೋನ್ನತ ಸಾನ್ಥಮಾನಗಳಿಗೆ ಏರಿಸಲಿ ಮತ್ತು ಅವರಿಗೆ ಪರಮಾತ್ಮನ ಕೃಪೆಯು ಸದಾ ಇರಲಿ ಎಂದು ಹಾರೈಸಲಾಗಿದೆ.



## ಲಿಂಗೈಕ್ಯ

ಸತ್ತು ಮುಂದೆ ದೇವರ ಕೂಡಿಹೆವೆಂಬಿರಿ.!  
ಸಾಯದಮುನ್ನ ಸತ್ತಿದ್ದರೆ ಎಂತಯ್ಯ?  
ನಿಮ್ಮ ಲಿಂಗೈಕ್ಯದ ಪರಿ ಎಂತಯ್ಯ?  
ನಿಮ್ಮ ಪ್ರಮಥರ ಪರಿ ಅಂಗದ ಅವಸ್ಥೆಯಲ್ಲದೆ,  
ಲಿಂಗಾವಸ್ಥೆ ಆರಿಗೂ ಇಲ್ಲ ಗುಹೇಶ್ವರಾ.

— ಅಲ್ಲಮಪ್ರಭುಗಳು.

ಅಖಿಲ ಭಾರತ ಸಾಧು ಸಮಾಜ,
ನವದೆಹಲಿಯ ಅಧ್ಯಕ್ಷರೂ, ನೈಸರ್ಗಿಕ
ಚಿಕಿತ್ಸಾ ಆಸ್ಪತ್ರೆಯ ಅಧ್ಯಕ್ಷರೂ, ಅಖಿಲ
ಭಾರತ ಸಂಸ್ಕೃತ ಪ್ರಸಾರ ಸಮಿತಿಯ ಹಾಗೂ
ಅಂತರರಾಷ್ಟ್ರೀಯ ಆಧ್ಯಾತ್ಮಿಕ ಸಲಹಾ ಮಂಡ
ಲಿಯ ಅಧ್ಯಕ್ಷರೂ, ಮಾನವ ಧರ್ಮ ಮಿರ್ಷ, ಕರ್ನಾ
ಟಕ ಶಾಖೆಯ ಅಧ್ಯಕ್ಷರೂ, ಕರ್ನಾಟಕ ರಾಷ್ಟ್ರಭಾಷಾ
ಪರಿಷತ್‌ನ ಸಂಸ್ಥಾಪನಾಧ್ಯಕ್ಷರೂ, ವಿಶ್ವಭಾರತಿ ವಿದ್ಯಾ
ಪೀಠದ ಅಧ್ಯಕ್ಷರೂ ಮತ್ತು ಶ್ರೀ ಕೊಳದ ಮಠ
ಮಹಾ ಸಂಸ್ಥಾನ, ಬೆಂಗಳೂರು ಇದರ ಪೀಠಾಧ್ಯಕ್ಷರೂ ಆದ

## ಶ್ರೀ ಮ. ನಿ. ಪ್ರ. ಚ. ಶ್ರೀ ಶಾಂತವೀರ ಮಹಾಸ್ವಾಮಿಗಳವರ

### ● ಮಹಾ ಸನ್ನಿಧಾನದಿಂದ ●

ಭಾರತದ ಉಪರಾಷ್ಟ್ರಪತಿಗಳೂ, ಕನ್ನಡಾಂಬೆಯ ಪುತ್ರ ರತ್ನವೂ ಆದ ಶ್ರೀ ಬಸವಪ್ಪ ದಾನಪ್ಪ ಜತ್ತಿ ಅವರಿಗೆ ಕಲ್ಯಾಣ ಕರ್ನಾಟಕದ ಸುಸಂಸ್ಕೃತ ನಾಗರಿಕರಾದ ನೀವು ಕರ್ನಾಟಕದ ಮಹಾನ್ ಜನತೆಯ ಪರವಾಗಿ ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ಹರ್ಷದಾಯಕ ಸಂಗತಿಯಾಗಿದೆ.

ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ರಂಗಗಳಲ್ಲಿ ಸ್ಫೂರ್ತಿ ಸ್ವರೂಪಿಗಳೂ, ಪ್ರವೃತ್ತಿ-ನಿವೃತ್ತಿಗಳ ಸಮನ್ವಯ ಜೀವಿಗಳೂ, ಸರ್ವಧರ್ಮ ಸಮನ್ವಯಿಗಳೂ, ಕರ್ತವ್ಯನಿಷ್ಠರೂ, ಜನಾನುರಾಗಿಗಳೂ ಆದ ಶರಣ ಬಿ. ಡಿ. ಜತ್ತಿಯವರನ್ನು ಕರ್ನಾಟಕದ ಜನಸ್ತೋಮವೇ ಏನು ? ಸಮಗ್ರ ಭಾರತವೇ ಸನ್ಮಾನಿಸಬೇಕು-ಎಂಬುದೇ ನಮ್ಮ ಆಶಯ.

ಶರಣ ಬಿ. ಡಿ. ಜತ್ತಿಯವರ ಪರಿಚಯ ನಮ್ಮ ಕನ್ನಡ ಜನತೆಗೆ ಅನಗತ್ಯ. ನೋಟದಲ್ಲಿ ವಾಮನಮೂರ್ತಿ, ಮಾಟದಲ್ಲಿ ಬೃಹನ್ಮೂರ್ತಿಗಳಾದ ಅವರು ಜನಮನದಲ್ಲಿ ಸದಾ ನಲಿದಾಡುವವರಾಗಿದ್ದಾರೆ. ಅವರು ಜಮಖಂಡಿಯಲ್ಲಿ ಧರ್ಮನಿಷ್ಠ ಸದ್ಗೃಹಸ್ಥ ಕುಟುಂಬದಲ್ಲಿ ಜನಿಸಿ, ಬಾಲ್ಯದಿಂದಲೂ ಧರ್ಮಶ್ರದ್ಧೆ ಗುರುಭಕ್ತಿ, ದೈವಭಕ್ತಿ, ಸೇವಾತತ್ಪರತೆ ಮೊದಲಾದ ಸದ್ಗುಣಗಳನ್ನು ಬೆಳಸಿಕೊಂಡು ಬಂದ ತಮ್ಮ ಧೀಮಂತಿಕೆ ಹಾಗೂ ಸೌಜನ್ಯಗಳಿಂದ ಎಲ್ಲರಿಗೂ

ಬೇಕಾದವರಾಗಿ, ರಾಜಕೀಯ ಕ್ಷೇತ್ರದಲ್ಲಿ ದಕ್ಷತೆಯಿಂದ ಕಾರ್ಯನಿರ್ವಹಿಸಿ ಅನೇಕ ಹಂತಗಳಲ್ಲಿ, ಅನೇಕ ಉನ್ನತಾಧಿಕಾರಗಳಲ್ಲಿ ಸೇವೆಸಲ್ಲಿಸಿ, ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದು, ಪಾಂಡಿಚೆರಿಯಲ್ಲಿ ಲೆಫ್ಟಿನೆಂಟ್ ಗೌರ್ನರ್ ಆಗಿದ್ದು ಒರಿಸ್ಸಾದ ರಾಜ್ಯಪಾಲರಾಗಿದ್ದು ಈಗ ಭಾರತದ ಉಪರಾಷ್ಟ್ರಪತಿಗಳಾಗಿ ಗರಿಷ್ಠ ಸ್ಥಾನವನ್ನು ಅಲಂಕರಿಸಿದ್ದಾರೆ. ಇದು ನಮ್ಮೆಲ್ಲರಿಗೂ ಹೆಮ್ಮೆಯ ಮಾತಾಗಿದೆ.

## ಅನನ್ಯ ಭಕ್ತರು

ಶರಣ ಜತ್ತಿಯವರು ರಾಜಕೀಯ ಕ್ಷೇತ್ರದಲ್ಲಿ ಮಾತ್ರವೇ ಅಲ್ಲದೆ ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲೂ ಗಣ್ಯಸ್ಥಾನವನ್ನು ಅಲಂಕರಿಸಿದ್ದಾರೆ. ಮಹಾತ್ಮ ಬಸವೇಶ್ವರರ ಅನನ್ಯಭಕ್ತರಾಗಿ ಅವರ ತತ್ವಗಳನ್ನು ಜಗತ್ತಿಗೆ ಸಾರಲು ಕಟಿಬದ್ಧರಾಗಿ ಶ್ರಮಿಸುತ್ತಿದ್ದಾರೆ. ಇವರ ಅಚಲ ಪ್ರಯತ್ನದ ಫಲವಾಗಿ ಇಂದು ಕಲ್ಯಾಣ ನಗರ ಬೆಂಗಳೂರಿನಲ್ಲಿ ಶರಣ ಧರ್ಮದ ಮಹಾ ಕೇಂದ್ರವಾಗಿ ಭವ್ಯ ಬಸವ ಭವನವು ಕಂಗೊಳಿಸುತ್ತಿದೆ. ಶರಣ ಜತ್ತಿಯವರು ಬಸವ ಸಮಿತಿಯ ಅಧ್ಯಕ್ಷರಾಗಿ, ಸಮಿತಿಯ ಅಭ್ಯುದಯಕ್ಕೆ ಅಹರ್ನಿಶಿ ಶ್ರಮಿಸುತ್ತಿದ್ದಾರೆ.

ಅವರು ಪಾಂಡಿಚೇರಿಯಲ್ಲಿ ಕನ್ನಡಿಗರ ಉಪಯೋಗಕ್ಕಾಗಿ " ಕರ್ನಾಟಕ ನಿಲಯ " ವನ್ನು ಕಟ್ಟಿದರು.

ಹೀಗೆ ಶರಣ ಜತ್ತಿಯವರು ಚಾಣಾಕ್ಷ ರಾಜಕಾರಣಿಗಳು, ಶ್ರೇಷ್ಠ ಆಡಳಿತಗಾರರು, ಧರ್ಮನಿಷ್ಠರು ಆಗಿದ್ದಾರೆ.

ನಾವು ಕಂಡ ಶರಣ ಜತ್ತಿಯವರಲ್ಲಿ ಶರಣರ ತತ್ವಗಳಾದ — ಕಾಯಕವೇ ಕೈಲಾಸ — ಕಾಯಕವು ಇಹಕ್ಕೆ, ಲಿಂಗವು ಪರಕ್ಕೆ ಸಾಧನ - ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು—ಸಂಸಾರವು ದುಃಖವಲ್ಲ, ಅದು ಶಿವನ ಪ್ರಸಾದ — ವರ್ಣಭೇದ ಜಾತಿ ಭೇದಗಳು ಆಗಮ ಸಮ್ಮತವಲ್ಲ, ಅಸ್ಪೃಶ್ಯತೆ ಎಂಬುದು ಪಾಪಕರ, ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ — ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ; ಇದೇ ದಾಸೋಹಂಭಾವ — ಕಾಯಕವು ಹೊಟ್ಟೆಗೆ, ಇಷ್ಟಲಿಂಗವು ಮುಕ್ತಿಗೆ — ಧರ್ಮ—ಜ್ಞಾನ ಎರಡೂ ಜೀವನದ ಪ್ರಗತಿಗೆ ಸಾಧನ — ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ —

ಪರಧನವ ಒಲ್ಲದಿಪ್ಪುದೇ ವ್ರತ, ಪರ ಸ್ತ್ರೀಯರ ಕೂಡದಿಪ್ಪುದೇ ಶೀಲ, ಸರ್ವ ಜೀವರ ಕೊಲ್ಲದಿಪ್ಪುದೇ ನೇಮ, ತಥ್ಯ ಮಿಥ್ಯವನರಿದಿಪ್ಪುದೇ ನಿತ್ಯ ನೇಮ ಇದು ಈಶಾನ್ಯಮೂರ್ತಿ ಮಲ್ಲಿಕಾರ್ಜುನನ ಲಿಂಗಕ್ಕೆ ಸಂದೇಹವಿಲ್ಲದ ವ್ರತ — ಇವುಗಳು ಮೂರ್ತಿಭವಿಸಿವೆ.

ಶರಣ ಜತ್ತಿಯವರು ನಮ್ಮ ನೆಚ್ಚಿನ ಮೆಚ್ಚಿನ ಶಿಷ್ಯರಾಗಿದ್ದಾರೆ. ಶ್ರೀ ಜಲಕಂಠೇಶ್ವರ ಸ್ವಾಮಿಯು ಅವರು ತಮ್ಮ ತುಂಬು ಜೀವನದಲ್ಲಿ ಉತ್ತುಂಗ ಶಿಖರವನ್ನೇರುವಂತೆ ಕರುಣಿಸಲಿ, ಅವರಿಗೂ ಮತ್ತು ಅವರ ಕುಟುಂಬದವರಿಗೆ ಇತ್ಯೋಪಶಯವಾದ ಸಂಪದಭಿವೃದ್ಧಿ, ಸನ್ಮಂಗಳಗಳನ್ನು ಉಂಟುಮಾಡಲಿ ಈಗಿನ ಪದವಿಯಿಂದ ರಾಷ್ಟ್ರಪತಿ ಪದವಿಗೇರಲಿ ಎಂದು ನಾವು ಈ ಸುಸಂದರ್ಭದಲ್ಲಿ ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

ಈ ಅಭಿನಂದನ ಗ್ರಂಥ ಬೃಹದ್ಗ್ರಂಥವಾಗಿ, ಸರ್ವಾಂಗೀಣ ಸುಂದರವಾಗಿ ಹೊರ ಬರಲಿ ಎಂದು ಆಶಿಸುತ್ತೇವೆ.



ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ, ವೇದಾಂತಾಚಾರ್ಯ.

## ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು.

● ಇವರ ಸನ್ನಿಧಾನದಿಂದ ●

ಶ್ರೀ ಬಸವೇಶ್ವರರು — "ಬಡಿಬಡಿದು ರಜವ ಕಳೆದಿಹೆನೆಂದರೆ, ಹಸನಾಗಿತ್ತು ತಾಯೆ; ಅಂಗಳುಡುಗಿಹೆನೆಂದರೆ, ಮಂಗಳವಾಯಿತ್ತು ತಾಯೆ; ಒಳಗೆ ಗುಡಿಸಿ, ರಂಗವಲ್ಲಿಯನಿಕ್ಕಿ, ಗುಡಿತೋರಣವ ಕಟ್ಟಿದರೆ ಕೂಡಲಸಂಗಮದೇವ ಬಂದಡಿಯಿಡುವನವ್ವ !" ಎಂಬ ಬಹು ಮಾರ್ಮಿಕನುಡಿಯನ್ನಾಡಿದ್ದಾರೆ. ಇದೊಂದು ರೂಪಕ. ವ್ಯಕ್ತಿಯ ಜೀವನಕ್ಕೆ ಮುಖಗಳೆರಡು; ಒಂದು ಹೊರಗು; ಇನ್ನೊಂದು ಒಳಗು. "ಒಳಗು ಹೊರಗಾಗಬೇಕು; ಹೊರಗು ಒಳಗಾಗಬೇಕು" ಎಂಬ ಮಾತಿನ ರಹಸ್ಯ ಮಾನವ ಜೀವಿತದ ಅಂತರಂಗ ಪ್ರಪಂಚದ ಪಾರಿಶುದ್ಧ್ಯವನ್ನೇ ಹೇಳುವಂತಹುದು. ಮನೆಯ ಹೊರ ಅಂಗಳ ಶುದ್ಧಿಗೊಳ್ಳಬೇಕು; ರಜತೃಣಕಾಷ್ಠ ವಿವರ್ಜಿತವಾಗಬೇಕು. ಅಂತೆಯೇ ಒಳಗೆ ಅಂದರೆ, ಅಂತಃಕರಣ ಚತುಷ್ಟಯಗಳಿಗಂಟಿದ ರಜಾದಿಗಳೂ ಮಾಯವಾಗಬೇಕು; ಅಲ್ಲಿ ಗುಡಿಸಿ ರಂಗವಲ್ಲಿಯನ್ನಿಕ್ಕಬೇಕು; ಗುಡಿತೋರಣಗಟ್ಟಬೇಕು. ಅಂದರೆ ಹೊರಗೂ ಕಲ್ಯಾಣ ಒಳಗೂ ಕಲ್ಯಾಣವಾಗಬೇಕು. ಹಾಗಾದಾಗಲೇ ಅದು ಈಶ್ವರಾವಾಸಯೋಗ್ಯವಾಗುತ್ತದೆಂದು ಬಸವಣ್ಣನವರ ಸಂದೇಶ.

ಮೇಲಿನ ವಿವರಣೆ ಶ್ರೀಯುತ ಬಸಪ್ಪ. ದಾನಪ್ಪ ಜತ್ತಿ ಅವರ ಜೀವನಕ್ಕೆ ಹೊಂದಿಕೆಯಾಗುವ ಬಹುಸುಂದರ ಉಪಮಾನವೆಂದು ನಮ್ಮ ಭಾವನೆ. ಅವರು ನಿಷ್ಕಾಮಕರ್ಮದ ಪ್ರಾಬಲ್ಯವುಳ್ಳವರು. ಅಥವಾ ಶರಣರ ಪರಿಭಾಷೆಯಲ್ಲಿ ಹೇಳಬೇಕೆಂದರೆ, ಕಾಯಕ ಸದ್ಭಾವ ಸಮರ್ಥರು. ಅವರಿಗೆ ಅಕ್ರಿಯೆಯ ಪ್ರಾಬಲ್ಯವೇ ಅವರಿದ್ದಲ್ಲಿಗೆ ಫಲವನ್ನು ಎಳೆತಂದಿದೆ; ಈಯುತ್ತಿದೆ. ಅಂತೆಯೇ ಕಳೆದ ಮೂವತ್ತು ವರ್ಷಗಳ ರಾಜಕೀಯ ಹಾಗೂ ಧಾರ್ಮಿಕ ಜೀವನ ಭೂಭಾಗದಲ್ಲಿ ನೆಟ್ಟ ಆ ಸಸಿ ತನ್ನ ಅಂತಸ್ಸತ್ವದ ಬಾಹುಳ್ಯದ ಪ್ರಬಲ ಶಕ್ತಿಯಿಂದ ಅನೇಕ ರೆಂಬೆಕೊಂಬೆಗಳನ್ನು ಹೊರಹೊಮ್ಮಿಸಿ, ಇಂದು ವಿಶಾಲ

ವಿಟಪಿಯಾಗಿ ಭಾರತದ ಉದ್ದಗಲಕ್ಕೆ ಹಬ್ಬಿನಿಂತಿದೆ; ವಿಶ್ವವಿಶಾಲವಾಗಿದೆ. ದುರ್ಬಲಕ್ರಿಯೆಗೆ, ಅಳಿಮನಕ್ಕೆ ಈ ವ್ಯಾಪ್ತಿ ಸಾಧ್ಯವಿಲ್ಲ.

## ಕ್ರಿಯಾಸಿದ್ಧಿ

ಶ್ರೀಯುತ ಜತ್ತಿಯವರು ಅಧಿಕಾರದ ಆಮಿಷಕ್ಕೊಳಗಾಗಿ ತಮ್ಮ ಕ್ರಿಯಾ ಮುಖವನ್ನು ಬರಡುಗೊಳಿಸಿಕೊಂಡವರಲ್ಲ. ಅಧಿಕಾರವೇ ಇವರನ್ನು ಹುಡುಕಿ ಕೊಂಡು ಬರುವ ರೀತಿಯಲ್ಲಿ ಕ್ರಿಯಾಸಿದ್ಧಿಯೇ ಇವರ ಜೀವಿತ. ಶ್ರೀಯುತರು ಶಿವಶರಣರ ಆಡುಂಬೊಲದಂತಿರುವ ವಿಜಾಪುರ ಜಿಲ್ಲೆಯ ಮಹಾಶರಣ ಸಮೂ ಹದ ಸತ್ವಸಾರ ಬೊಬ್ಬುಳಿಗೊಂಡು ಈ ಯುಗಕ್ಕೆ ತಕ್ಕಹಾಗೆ ಮೈವೆತ್ತು ಬಂದ ಒಂದು ವ್ಯಕ್ತಿವಿಶೇಷವೆಂದು ನಮ್ಮ ಭಾವನೆ. ಅವರು ವ್ಯಕ್ತಿಯೂ ಅಲ್ಲ; ಒಂದು ಅದ್ಭುತಶಕ್ತಿ. ಅವರು ಪ್ರಭುಕಾರಣ್ಯವನ್ನು ಪಡೆದವರು. ಪ್ರಭುಚಿತ್ತ ದಂತೆ ನಡೆದವರು ಅಥವಾ ಅದರ ಪಡಿನೆಳಲಾಗಿ ಸಾಗಿದವರು. ಅದರಿಚ್ಛೆ ಅದಕೆ ಹಾದಿ ಇದಕೆ ಹರಿದತ್ತ ಬೀದಿ " ಎಂದು ಹೇಳುವ ಹಾಗೆ ಇವರನಡೆ. ಅಂತೆಯೇ ಬಸವಣ್ಣನವರು ಹೇಳುವಹಾಗೆ ಕೂಡಲ ಸಂಗಮದೇವನ ರಾಜ ತೇಜದಲ್ಲಿಯೇ ಇವರೂ ಸಾಗಿಬಂದವರು. ೧೯೪೫ ರಂದು ಜಮಖಂಡಿ ಸಂಸ್ಥಾ ನದ ಸಚಿವಸ್ಥಾನ ಪಡೆದಂದಿನಿಂದ ಇಂದಿನವರೆಗೆ ಉಂಟಾದ ರಾಜಕೀಯ ಘಟನೆಗಳ ಯಾವ ಜಂಝೂವಾತವೇ ಆಗಲಿ, ಉಬ್ಬರವಿಳಿತಗಳೇ ಆಗಲಿ, ಬಿರುಗಾಳಿಯೇ ಆಗಿರಲಿ, ಅವರ ಪ್ರಬಲ ಕ್ರಿಯಾಸತ್ವಸಾರಭರಿತ ವ್ಯಕ್ತಿತ್ವದ ನಾವೆಯನ್ನಲ್ಲಾಡಿಸಲಿಲ್ಲ. ಎಂಥ ಸಂದರ್ಭದಲ್ಲೂ ತಮ್ಮ ವಿಜಯಪತಾಕೆಯನ್ನೇ ಹಾರಿಸಿ, ಮುಗಿಲೆತ್ತರಕ್ಕೇರಿಸಿ, ಇಂದು ಭಾರತ ರಾಷ್ಟ್ರದ ಉಪರಾಷ್ಟ್ರಾಧ್ಯಕ್ಷ ಸ್ಥಾನಪನ್ನರಾಗಿ ಎಂದಿನಂತೆಯೇ ವಿಕಾರರಹಿತ ಮನಸ್ಕರಾಗಿದ್ದಾರೆ. ಅದೇ ಜೀವನ, ಅದೇಸಾರಳ್ಯ, ಅದೇಸೌಶೀಲ್ಯ, ಅದೇನಗು, ಅದೇಮಾತು. ನಡೆಯಲ್ಲಿ ನುಡಿಯಲ್ಲಿ ಸಂಯಮ, ಅವರ ಜೀವನದಗುಟ್ಟು. ವಿಕಾರಕಾರಣಗಳನೇಕವಿ ದ್ದರೂ, ಅವುಗಳಿಗೆ ಕನಸುಮನಸಿನಲ್ಲೂ ವಶವಾಗದೆ, ಧೀರರಾಗಿ ಬಸವಾದಿ ಪ್ರಮಥರ ದಿವ್ಯಾದೇಶವನ್ನು ಹೊತ್ತು ಸಾಗಿಬರುತ್ತಿರುವ ಶ್ರೀಯುತರು ಧನ್ಯಾ ತ್ಮರು. ವ್ಯವಹಾರದಲ್ಲಿ ಸಹೃದಯತೆ,. ಕಾಯಕದಲ್ಲಿಸದ್ಭಾವ, ಆಹಾರವಿಹಾರಗ ಳಲ್ಲಿ ಶಾಸ್ತ್ರಗಾಮಿತ್ವಗಳು ಇವರ ಹುಟ್ಟಿಗಂಟಿಕೊಂಡು ಬಂದಿರುವ ಸ್ವಭಾವಗಳಾಗಿವೆ

ಜಗತ್ತಿನ ಅನೇಕ ದರ್ಶನಗಳ ಅಭ್ಯಾಸಮಾಡಿರುವ ಶ್ರೀ ಜತ್ತಿಯವರು ವಿಶ್ವಮಾನವತಾವಾದಿ, ಜಗತ್ತಿನ ಪ್ರಪ್ರಥಮ ಸಮತಾವಾದಿ ಪ್ರಮಥ ಪ್ರಥಮಾ

ಚಾರ್ಯ ಬಸವಣ್ಣನವರ ಜೀವನದ ಆಳವಾದ ಅ ಭ್ಯಾ ಸ ಮಾಡಿದ್ದಾರೆ. ವಚನ ಶಾಸ್ತ್ರದ ರಹಸ್ಯವನ್ನು ಅರಿತು ಆಚರಿಸುವವರಾಗಿದ್ದಾರೆ. ಆ ಮಹಾವಿಭೂತಿ ಬಸವಣ್ಣನವರ ದಿವ್ಯಾದೇಶವನ್ನು ವಿಶ್ವದಾದ್ಯಂತ ಹರಡಿ ಅವರ ಮಹಾಮಾ ನವತ್ವವನ್ನು ಮುಗಿಲೆತ್ತರಕ್ಕೇರಿಸುವ ಮಹತ್ವಾಕಾಂಕ್ಷೆ ಶ್ರೀ ಜತ್ತಿಯವರ ಪವಿತ್ರ ಕಾರ್ಯಭಾರದಲ್ಲೊಂದು. ಅಂತೆಯೇ ೧೯೬೪ ಳ ನೆಯ ಇಸ್ವಿಯಲ್ಲಿ ನಾಡಿನ ಅನೇಕ ಮಹನೀಯರ ಸಹಾಯ ಸಹಕಾರಗಳಿಂದ ' ಬಸವ ಸಮಿತಿ ' ಯೆಂಬ ಹೆಸರಿನ ಬೃಹತ್ಸಮಿತಿಯೊಂದನ್ನು ಕಟ್ಟುವಲ್ಲಿನ ಅವರ ಘನತೆವೆತ್ತ ಪಾ ತ್ರ ದ ಬಗೆಗೆ ಎಲ್ಲರೂ ಕೃತಜ್ಞತೆಗಳನ್ನು ಸಲ್ಲಿಸಲೇಬೇಕು.

**ಶ್ಲಾಘನೀಯ**

ಬಸವಸಮಿತಿಯ ಆಶ್ರಯದಿಂದ ಭಾರತ ಮತ್ತು ಭಾರತೇತರ ಅ ನೇ ಕ ಭಾಷೆಗಳಿಗೆ ಬಸವಣ್ಣನವರ ವಚನಗಳನ್ನು ಪ ರಿ ವ ರ್ತಿ ಸಿ ಪ್ರಕಟಿಸುವುದರಲ್ಲಿ ಬಸವಣ್ಣನವರ ಎಂಟನೆಯ ಶತಮಾನೋತ್ಸವವನ್ನು ವಿಜೃಂಭಣೆಯಿಂದ ಆಚ ರಿಸುವಿಕೆಯಲ್ಲಿ ಸುಮಾರು ಹದಿನೈದು ಲಕ್ಷ ರೂಪಾಯಿಗಳ ಸಂಗ್ರಹಣೆ ಮಾಡುವ ಕಾರ್ಯದಲ್ಲಿ, ಇತಿಹಾಸಪ್ರಸಿದ್ಧ ಪಂಪಾಕ್ಷೇತ್ರದಿಂದ ಕಲ್ಯಾಣದವರೆಗೆ ನಮ್ಮನ್ನು ಮುಂದುಮಾಡಿಕೊಂಡು ಪಾದಯಾತ್ರೆ ಮಾಡಿಸಿ, ಜನಮನದಲ್ಲಿ ಬಸವಾದಿ ಪ್ರಮಥರ ದಿವ್ಯಸಂದೇಶವನ್ನು ಸಾರ್ವತ್ರಿಕಗೊಳಿಸುವಲ್ಲಿ, ಸಾಹಿತ್ಯ, ಸಂಸ್ಕೃತಿ ಧರ್ಮಕ್ಷೇತ್ರಗಳಲ್ಲಿ, ಜಾಗೃತಿಯ ಕಾರ್ಯಕ್ರಮಗಳನ್ನು ಏರ್ಪಾಟುಗೊಳಿಸುವಲ್ಲಿ, ಅಕ್ಕಮಹಾದೇವಿಯವರ ಜನ್ಮಸ್ಥಳವಾದ ಉಡುತಡಿಯಲ್ಲಿ ಅವರ ಎಂಟನೆಯ ಶತಮಾನೋತ್ಸವ ಸಮಾರಂಭವನ್ನು ಯಶಸ್ವಿಗೊಳಿಸುವಲ್ಲಿ — ಶ್ರೀಯುತ ಜತ್ತಿಯವರ ಪಾತ್ರ ಅತ್ಯಂತ ಶ್ಲಾಘನೀಯವಾದುದಾಗಿದೆ. ಅವರು ಪಾಂಡಿ ಚೇರಿಯಲ್ಲಿರಲಿ, ಭುವನೇಶ್ವರದಲ್ಲಿರಲಿ, ಈಗ ದಿಲ್ಲಿಯಲ್ಲಿಯೇ ಇರಲಿ, ಅಲ್ಲಿ ಕುಳಿತೇ ಬಸವಸಮಿತಿಯ ಕಾರ್ಯಕಲಾಪಗಳು ಯಥಾವತ್ತಾಗಿ ನಡೆಯುವಂತೆ ನೋಡಿಕೊಳ್ಳುತ್ತಿರುವುದು ಅವರ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವಕ್ಕೆ ಹಿ ಡಿ ದ ಕನ್ನಡಿಯಾಗಿದೆ. ಬೆಂಗಳೂರಿನ ಬಸವಸಮಿತಿಯ ಕಾರ್ಯಗಳು ಯಶಸ್ವಿಗೊ ಳ್ಳಲು ಅವರಿಗೆ ಶ್ರೀಮಾನ್ ಅನ್ನದಾನಯ್ಯ ಪುರಾಣಿಕರಂಥ ನಿಷ್ಠಾವಂತ ಕಾರ್ಯದರ್ಶಿಗಳು ದೊರಕಿರುವುದೊಂದು ಸಮಾಜದ ಪುಣ್ಯ ವಿಶೇಷವೇ ಸರಿ.

ಶ್ರೀ ಜತ್ತಿಯವರ ಬಹುಮುಖ ಪ್ರಯತ್ನದ ಫಲವಾಗಿ ಇಂದು ಭವ್ಯವಾದ ಬಸವಭವನ ಬೆಂಗಳೂರಿನಲ್ಲಿ ರಾರಾಜಿಸುತ್ತಿದೆ. ಅದು ಅನೇಕ ಸಾಂಸ್ಕೃತಿಕ, ಸಾಹಿ

ತ್ತಿಕ, ಧಾರ್ಮಿಕ ಕಾರ್ಯ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿದೆ, ಭವನದಿಂದ ಸುಮಾರು ಒಂದೂವರೆಲಕ್ಷ ರೂಪಾಯಗಳಷ್ಟು ನಿವ್ವಳ ವಾರ್ಷಿಕ ವರಮಾನವೂ ಬರುವಂತಾಗಿದ್ದು ಆ ಹಣವು ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ ಕಾರ್ಯ ಕಲಾಪ ಗಳಿಗೆ ವಿನಿಯೋಗವಾಗುತ್ತಿದೆ. ಇದು ಜತ್ತಿಯವರ ದೂರದರ್ಶಿತ್ವಕ್ಕೊಂದು ಉದಾಹರಣೆ.

ಶ್ರೀ ಜತ್ತಿಯವರ ಆಶೋತ್ತರಗಳು ಇಷ್ಟರಿಂದಲೇ ವಿರಾಮಗೊಂಡುವೆಂದಲ್ಲ. ಬಸವಭವನ ಇನ್ನೂ ವಿಶಾಲಗೊಳ್ಳಬೇಕು. ಅದು 'ಷಟ್‌ಸ್ಥಲ ಭವನ' ವೆನಿಸಿ ಮೆರೆಯಬೇಕು; ಅದರೆದುರಿಗೆ ಬಸವ ಬುಂಟಪ ತಲೆಯೆತ್ತಿ ನಿಲ್ಲಬೇಕು; ಕೆಂಗೇರಿಯ ಹತ್ತಿರ ಬಸವಾಶ್ರಮವು ಸ್ಥಾಪಿತವಾಗಿ, ಅಲ್ಲಿ ಅನೇಕ ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಿಕ ಚಟುವಟಿಕೆಗಳು ನಿರಂತರ ನಡೆಯಬೇಕು; ಸಂಶೋಧನಾಲಯ ಸ್ಥಾಪನೆಗೊಂಡು ಅದು ತನ್ನ ಬಹುಮುಖ ಕಾರ್ಯಕ್ರಮಗಳಲ್ಲಿ ನಿರತವಾಗಬೇಕು; ಬಸವಕಲ್ಯಾಣದಲ್ಲಿ ಅನುಭವ ಮಂಟಪವು ಪೂರ್ಣಗೊಳ್ಳಬೇಕು; ಅದೊಂದು ಸಾಂಸ್ಕೃತಿಕ ಕೇಂದ್ರವಾಗಬೇಕು; ಭಾರತದ ರಾಜಧಾನಿ ದಿಲ್ಲಿಯಲ್ಲಿ ಮತ್ತು ಪ್ರತಿ ರಾಜ್ಯಗಳ ರಾಜಧಾನಿಗಳಲ್ಲೂ ಬಸವ ಸಮಿತಿಯ ಶಾಖೆಗಳು ಪ್ರಾರಂಭಗೊಂಡು ಅವು ವಿಶ್ವವಿಭೂತಿ ಬಸವಣ್ಣನವರ ದಿವ್ಯ ಸಂದೇಶಗಳನ್ನು ಸಾರಬೇಕು. ತನ್ಮೂಲಕ ವಿಶ್ವಬಂಧುತ್ವ, ಭಾವೈಕ್ಯ ಸಾಧನೆಯಾಗಬೇಕೆಂಬ ಮುಗಿಲೆತ್ತರದ ಬಯಕೆ. ಅವರ ಕರ್ತೃತ್ವಶಕ್ತಿ ಈ ಎಲ್ಲ ಆಶೋತ್ತರಗಳನ್ನು ಈಡೇರಿಸುವುದೆಂಬ ಭರವಸೆ ನಮಗಿದೆ.

## ಆದರ್ಶ ಸತಿ

ಶ್ರೀಯುತ ಜತ್ತಿ ಬಸಪ್ಪನವರ ಬಹುಮುಖವಾದ ಜೀವನ ಸಿದ್ಧಿಗಳ ಯಶಸ್ಸಿಗೆ ಇನ್ನೊಂದು ತೆರೆಯ ಮರೆಯ ಶಕ್ತಿ: ತನ್ನ ಪ್ರಭಾವವನ್ನು ಬೀರುತ್ತಿದೆಯೆಂಬುನ್ನು ಬಹುಜನರು ಅರಿತಿರಲಿಕ್ಕಿಲ್ಲ. ಅದೇ ಅವರ ಆದರ್ಶ ಸತಿಯೆನಿಸಿದ ಶ್ರೀಮತಿ ಸಂಗವ್ವ ನವರ ಧಾರ್ಮಿಕತೇಜಸ್ಸು. ದಾಂಪತ್ಯ ಜೀವನದಲ್ಲಿ ಪತ್ಯರ್ಥವಾಗಿ ಸಮರ್ಪಿಸ ಲ್ಪಡುವ ಸಮಸ್ತಕ್ರಿಯಾಮುಖದ ಸಂಗವ್ವನವರ ಕೈಹಿಡಿದು ಜತ್ತಿಯವರು ಅತಿ ಸುಖಿಗಳೆನಿಸಿದ್ದಾರೆ. ಬಸವಣ್ಣನವರ ಆದರ್ಶಸತಿ ನೀಲಮ್ಮನವರಂತೆ, ಮೋಳಿಗೆಯ ಮಾರಯ್ಯನವರ ಪತ್ನಿ ಮಹಾದೇವಿಯಮ್ಮನವರಂತೆ, ಗಾಂಧೀಜಿ ಪತ್ನಿ ಕಸ್ತೂರಿ ಬಾಯಿಯಂತೆ ಶ್ರೀಮತಿ ಸಂಗಮ್ಮನವರು- ಸದಾ ಪತಿಯ ಛಾಯಾನುವರ್ತಿನಿ ಯೆನಿಸಿ, ಅವರ ಯಶಸ್ಸಿಗೆ ತಮ್ಮ ಲಿಂಗತಪಸ್ಸನ್ನೆಲ್ಲ ಧಾರೆಯೆರೆಯುತ್ತಿದ್ದಾರೆ. ಅವರು ಶಿವಾನುಭಾವಿಗಳಾಗಿದ್ದ ಹಾಗೆ ಕೈಮುಟ್ಟಿ, ಮನಮುಟ್ಟಿ ಕಾಯಕ ಮಾಡುವ

ಆದರ್ಶ ಗೃಹಿಣಿಯಾಗಿದ್ದಾರೆ. ಸಂಗಮ್ಮನವರ ಧಾರ್ಮಿಕಶ್ರದ್ಧೆ, ಸೌಜನ್ಯ ಸೌಶೀಲ್ಯಗಳೂ, ಜತ್ತಿಯವರ ಭಾಕ್ತಿಕಜೀವನ, ರಾಜಕೀಯಪ್ರಜ್ಞೆ, ಕರ್ತವ್ಯ ಕೌಶಲಗಳೂ ಮಿಳಿತಗೊಂಡು ಗಾರ್ಹಸ್ಥ್ಯ ಜೀವನ ಸಾಗಿಸುತ್ತಿದ್ದು 'ಸತಿಪತಿ ಗಳೊಂದಾದ ಭಕ್ತಿ ಹಿತವಪ್ಪುವದು ಶಿವಂಗೆ' ಎಂಬ ದೇವರ ದಾಸಮಯ್ಯ ನವರ ನುಡಿಯನ್ನು ಸಾರ್ಥಕಗೊಳಿಸಿವೆ.

ಶ್ವೇತವರ್ಣದ ಸರಳವಾದ ಉಡುಪು. ಸದಾ ನೊಸಲ ವಿಭೂತಿ ರೇಖೆಗಳು ತತ್ವನಿಷ್ಠೆ, ಕರ್ತವ್ಯಶ್ರದ್ಧೆ, ಎಂಥ ಪ್ರಸಂಗದಲ್ಲೂ ನಗುಮುಖದ ಮಾತುಕತೆ, ಹಿರಿಯ–ಕಿರಿಯದೆಂಬುದರ ಕಲ್ಪನೆಯನ್ನು ದೂರವಿರಿಸಿ ಸರ್ವರೊಡನೆ ಸಮ್ಮಿಳಿತ ಗೊಳ್ಳುವ ವ್ಯವಹಾರ ಚಾತುರ್ಯ, ಸಹೃದಯತೆಗಳಿಂದ ಕೂಡಿರುವ ಶ್ರೀ ಜತ್ತಿ ಯವರು ಉತ್ತರೋತ್ತರ ತಮ್ಮ ಇದೇ ರೀತಿಯ ಬಹುಮುಖ ಕಾರ್ಯ ಚಟು ವಟಿಕೆಗಳೊಡನೆ ರಾಜಕೀಯ ಕ್ಷೇತ್ರಕ್ಕೂ, ಧಾರ್ಮಿಕ ಕ್ಷೇತ್ರಕ್ಕೂ ಅಲಭ್ಯ ಲಾಭ ವನ್ನುಂಟುಮಾಡುವ ಮಹಾಕಾರ್ಯದಲ್ಲಿ ಮುಂದುವರಿಯಲೆಂದೂ, ಅಂಥ ಮಹಾ ಶಕ್ತಿಯನ್ನು ಜಗದೀಶ್ವರನು ಕರುಣಿಸಲೆಂದೂ ಹಾರೈಸುತ್ತೇವೆ. ಶ್ರಿ ಸರ್ಪಭೂಷಣ ಶಿವಯೋಗಿಗಳು ಜತ್ತಿ ದಂಪತಿಗಳಿಗೆ ಸಕಲಸನ್ಮಂಗಳವನ್ನು ಕರುಣಿಸಲಿ.

— ಶುಭಂ ಭೂಯಾತ್ —



## ಕಮಲ

ಪಂಕವಿಲ್ಲದೆ ಕಮಲಕ್ಕೆ ಸುಲಲಿತವೆಂತಪ್ಪುದಯ್ಯ ?
ಹೊನ್ನು, ಹೆಣ್ಣು, ಮಣ್ಣು ಇಲ್ಲದೆ ದೇವತಾಯೋಗ್ಯವೆಂತಪ್ಪುದಯ್ಯ
ಕಮಲ ಪಂಕದಲ್ಲಿ ವರ್ತಿಸಿದಂತೆ ಇಹರು ನಿಮ್ಮ ಶರಣರು
ಉರಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

— ಉರಿಲಿಂಗ ಪೆದ್ದಿಗಳು

ಶಿವಾನುಭವ ಚರವರ್ಯ

## ಪೂಜ್ಯ ಶ್ರೀ ನಿ. ಪ್ರ. ಸಂಗನಬಸವ ಸ್ವಾಮಿಗಳು

ಸಂಚಾಲಕರು : ಸರ್ವಧರ್ಮಸಮ್ಮೇಳನ

ಗವಿಮಠ, ನವಲಗುಂದ.

● ಇವರ ಮಹಾಸನ್ನಿಧಾನದಿಂದ ●

ಶ್ರೀ ಬಿ. ಡಿ. ಜತ್ತಿಯವರು ಅವರ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸುವದಾದರೆ ಅವರು ಸತತೋದ್ಯೋಗಿಗಳು, ಪ್ರಯತ್ನಶೀಲರು, ಕಾರ್ಯದುರಂಧರರು ಜಾಗ್ರತ ಜೀವಿಗಳು ಅನೇಕ ರಂಗಗಳಲ್ಲಿ ತಮ್ಮದೇ ಆದ ವೈವಿಧ್ಯಮಯ ಕಾರ್ಯ ಕೌಶಲ್ಯದಿಂದ ಪವಾಡದೋಪಾದಿಯಲ್ಲಿ ಅಗಣಿತ ಲೋಕೋಪಯೋಗಿ ಕಾರ್ಯಗಳನ್ನು ಮಾಡಿ ನಡೆದು ತೋರಿಸಿದ್ದಾರೆ. "ಉದ್ಯೋಗಂ ಪುರುಷಸ್ಯ ಲಕ್ಷಣಂ" ಎಂಬ ವಾಕ್ಯವನ್ನು ಅವರು ಪರಿಪೂರ್ಣ ಅರ್ಥೈಯಿಸಿಕೊಂಡು ಆಚರಿಸುತ್ತಲಿದ್ದಾರೆ. ಅತ್ಯುಚ್ಚ ಪದವಿಗಳು, ದೊಡ್ಡ ದೊಡ್ಡ ಸ್ಥಾನಗಳು ಮೈಗಳ್ಳರ ಮಹಾನ್ ಆಲಸಿಗಳ ಜನ್ಮ ಜನ್ಮಾಂತರಗಳ ಪ್ರಯತ್ನದಿಂದಲೂ ಲಭ್ಯವಾಗುವದಿಲ್ಲ ನಿಜವಾದ ಪ್ರಯತ್ನಶೀಲನಿಗೆ ಅಲ್ಪ ಸ್ವಲ್ಪ ಕಾಲದಲ್ಲಿಯೇ ಉಚ್ಚ ಪದವಿಗಳು, ದೊಡ್ಡ ಸ್ಥಾನಗಳು ಸಿಕ್ಕುತ್ತವೆ ಎನ್ನುವದಕ್ಕೆ ಉಪರಾಷ್ಟ್ರಪತಿ ಬಿ. ಡಿ. ಜತ್ತಿಯವರೇ ನಿತಾಂತ ನಿದರ್ಶನ. "ಉದ್ಯೋಗಿನಂ ಪುರುಷಸಿಂಹ ಮುಪೈಯಿತಿ ಲಕ್ಷ್ಮಿ" ಎಂಬಂತೆ ಸಿಂಹ ಸದೃಶವಾದ ಪರಾಕ್ರಮವನ್ನು ಹೊಂದಿ ಕಾರ್ಯತತ್ಪರನಾದವನಿಗೆ ಮಾತ್ರ ವಿಜಯಲಕ್ಷ್ಮಿ ಮಾಲೆ ಹಾಕುತ್ತಾಳೆ. ಅಂಥಾ ಪ್ರಯತ್ನವಾದಿಗಳಾದ ಜತ್ತಿಯವರು ದೈವಿಭಾವನೆಯಲ್ಲಿ ಅಚಲ ವಿಶ್ವಾಸವುಳ್ಳವರಾಗಿದ್ದಾರೆ. ಪರೋಪಕಾರವೇ ಪರಮಾರ್ಥವೆಂದು ಗ್ರಹಿಸಿ ಸಾಹಸ ಪ್ರವೃತ್ತಿಯಿಂದಲೂ, ಸ್ವಾರ್ಥತ್ಯಾಗದಿಂದಲೂ, ಸರ್ವತ್ರ ಸಾಧನೆಯಲ್ಲಿ ಧೈರ್ಯದಿಂದಲೂ, ದಿಟ್ಟತನದಿಂದಲೂ ಮುಂದಡಿ ಇಟ್ಟಿದ್ದಾರೆ. ದಿಟ್ಟಡಿಯ ಧೀರಂಗೆ ಕಟ್ಟಿಹುದು ಜಯಬುತ್ತಿ ಎಂಬ ಸರ್ವಜ್ಞನ ನುಡಿಯನ್ನು ಸಾರ್ಥಕಪಡಿಸಿದ್ದಾರೆ. ಕಾರ್ಯವನ್ನು ಯೋಜಿಸುವಲ್ಲಂತೂ ಅವರ ಬುದ್ಧಿಶಕ್ತಿ ಅತ್ಯಂತ ತೀಕ್ಷ್ಣವೂ, ಪರಾಕ್ರಮಯುತವೂ ಆಗಿದೆ. ಇದಕ್ಕೂ ಚೋದ್ಯವಾದ ಮಂಗಲ ಸಂಗತಿಯನ್ನು ಹೇಳಬೇಕೆಂದರೆ ಅವರ ಸಾಧನೆ ಹಾಗು ಪ್ರಯತ್ನಕ್ಕನುಗುಣವಾಗಿ ಅವುದೋ ಮೇಲಾದ ದೈವಿಶಕ್ತಿಯೊಂದು ಅವರ ಕೈಹಿಡಿದು ಮೇಲಕ್ಕೆತ್ತುತ್ತಲೇ ಇದೆ. ನೂರು ಪಾಲಿಗೂ ಸತ್ಯವಾದ ಮಾತೊಂದನ್ನು ಅವರ ವಿಷಯವಾಗಿ

ಹೇಳುವುದಾದರೆ ಅವರು ಧಾರ್ಮಿಕ ರಂಗದಲ್ಲಿ ಅಪ್ಪಟ ಧರ್ಮಜೀವಿಗಳು; ಬಸವಣ್ಣನವರಂತೆ ಗುರು ಕಾರುಣ್ಯವೇದ್ಯರು, ವಿಭೂತಿ ರುದ್ರಾಕ್ಷಿಧಾರಕರು, ಲಿಂಗಾಂಗ ಸಂಬಂಧಿಗಳು; ನಿತ್ಯಲಿಂಗಾರ್ಚಕರು, ಗುರಭಕ್ತಿ ಸಂಪನ್ನರು, ಏಕ ದೇವೋಪಾಸಕರು ಕಾಲೋಚಿತವಬಲ್ಲವರು ಇನ್ನೂ ಹೇಳಬೇಕೆಂದರೆ "ಸ್ವಧರ್ಮೆ ನಿಧನಂಶ್ರೇಯ; ಪರಧರ್ಮೆ ಭಯಾವಹ" ಎಂಬುದನ್ನು ಅರಿತು ಆಚರಿಸಿ ತೋರಿ ಸಿದ್ದಾರೆ. ಧರ್ಮರಂಗದಲ್ಲಿದ್ದುಕೊಂಡೆ ವಕೀಲರಾದರು. ಮಂತ್ರಿಗಳಾದರು. ಮುಖ್ಯ ಮಂತ್ರಿಗಳಾದರು. ಗೌರ್ನರರಾದರು. ರಾಜ್ಯಪಾಲರಾದರು ಉಪರಾಷ್ಟ್ರಪತಿಗಳಾದರು ಇದಕ್ಕೂ ಮೇಲಾಗಿ ಅವರು ಬಸವಾನ್ವಯಿಗಳಾಗಿದ್ದಾರೆ. ಸದುವಿನಯ ಹದುಳಿಗ ಭಾವ ಸೌಜನ್ಯ ಮೂರ್ತಿವೆತ್ತು ಬಂದರೆ ಅಂಥವರು ಬಿ. ಡಿ. ಜತ್ತಿಯವರಾದರೂ ಆಗಬಹುದು. ಬಸವಣ್ಣನವರೂ ಆಗಬಹುದು.

## ರಸನಿಮಿಷ

ಎಷ್ಟೋ ಜನರಿಗೆ ರಾಜಕೀಯ ರಂಗವು ಆತ್ಮೋನ್ನತಿಗೆ ಮಾರಕವೆನಿಸಿದ್ದರೆ ಧರ್ಮದ ತೈಲವನ್ನು ಲೇಪಿಸಿಕೊಂಡ ಜತ್ತಿ ಬಸವಣ್ಣವರಿಗೆ ಅದು ತಾರಕ ವಾಗಿದೆ. ಈಶನು ದೇಶ ಸೇವೆಗಾಗಿ ದೊಡ್ಡ ಸ್ಥಾನವನ್ನು ಅನುಗ್ರಹಿಸಿದ್ದಾನೆಂಬ ಸಂಪೂರ್ಣ ಪರಿಜ್ಞಾನ ಅವರಿಗಿದೆ. ಅವರು ವಕೀಲಿ ವೃತ್ತಿಯಿಂದ ಹಿಡಿದು ಉಪ ರಾಷ್ಟ್ರಪತಿಯಾಗುವವರೆಗೆ ದೀನ–ದಲಿತರ ಉದ್ಧಾರಕ್ಕಾಗಿ ಅವರು ಮಾಡಿದ ಕಾರ್ಯ ಧರ್ಮೋತ್ತೇಜನಕ್ಕಾಗಿ ಅವರು ಸಲ್ಲಿಸಿದ ಸೇವೆಯೇ ಸಾಕ್ಷಿ. ಅವರು ಮಾತಾ ಪಿತೃಗಳ ಭಕ್ತಿಯಲ್ಲಿ ಶ್ರವಣಕುಮಾರನನ್ನು ಮರೆಸಿದ್ದಾರೆನ್ನುವದಕ್ಕೆ ಅವರ ಜೀವನ ದಲ್ಲಿಯ ಸತ್ಯಘಟನೆಯೊಂದನ್ನು ಹೇಳಬಯಸುತ್ತೇವೆ. ಅವ್ವನಿಗೆ ಅವ್ವನೆನ್ನಲು ಅಪ್ಪನಿಗೆ ಅಪ್ಪನೆನ್ನಲು ಸಂಕೋಚಪಡುವ ಶುಷ್ಕವಿದ್ಯಾವಂತರ ಈಗಿನ ಕಾಲದಲ್ಲಿ ಕೆಲವೇ ದಿವಸಗಳ ಹಿಂದೆ ಬಸಪ್ಪನವರು ಮಾನ್ಯ ಮಂತ್ರಿವರ್ಯರಾಗಿ ಸ್ವಗ್ರಾಮಕ್ಕೆ ಆಗಮಿಸಿದ್ದರು. ಆಗ ಅವರ ಮಾತೆಯವರು ಹಿತ್ತಲಲ್ಲಿ ಕುಳ್ಳು ತಟ್ಟುತ್ತಲಿದ್ದರು. ಮಗನು ಬಂದನೆಂಬ ಮಮತೆಯಲ್ಲಿ ಶಗಣಿ ಬಳಿದ ಕೈಯಿಂದಲೇ ಅಪ್ಪಿಕೊಂಡರು. ಹತ್ತು ಬೆರಳು ಸಹಿತ ಉಭಯ ಹಸ್ತಗಳು ಮಂತ್ರಿಮಗನ ಅಂಗಿಯ ಮೇಲೆ ಪಡಿ ಮೂಡಿ ನಿಂತವು. ಅವರ ಜೀವನದಲ್ಲಿಯ ಇಂಥಾ ರಸನಿಮಿಷ ಮಾತೃ ಭಕ್ತಿಯ ದ್ಯೋತಕವಾಗಿದೆ. ಇಂಥಾ ಭಕ್ತಿಯನ್ನು ಈಗಿನ ತರುಣ ಹಾಗು ಪ್ರೌಢ ಜನಾಂಗವು ಅವಶ್ಯವಾಗಿ ಅನುಸರಿಸಬೇಕಾಗಿದೆ.

ಶ್ರೀ ಬಿ. ಡಿ. ಜತ್ತಿ ಅವರು ಚಿಕ್ಕಂದಿನಲ್ಲಿ ತಂದೆಯ ವಾತ್ಸಲ್ಯದೊಡಗೂಡಿ ದವರಾಗಿ ಒಮ್ಮೆ ಅಥಣಿಗೆ ಹೋಗಿದ್ದರು. ಮಹಾಲಿಂಗಪೂಜಕರಾದ ಶ್ರೀ

ಶಿವಯೋಗಿವರೇಣ್ಯರ ವರಪ್ರಸಾದದ ದಿವ್ಯಾನುಗ್ರಹ ಹೊತ್ತು ಬಂದರು. ಅದರಿಂದ ಆವರ ದೈವಬಲವು ಪ್ರಬಲವಾಗಿದೆ ಆಂತಲೇ ಸಾಧ್ವಿ ಶಿರೋಮಣಿ ಸೌಜನ್ಯ ಶೀಲೆ ಯಾದ ಶ್ರೀಮತಿ ಸಂಗಮ್ಮನವರು ಜೊತೆಯಾಗಿ ದೊರೆತಿದ್ದಾರೆ. ಆವರ ಪವಿತ್ರ ಮೀಸಲಮಯವಾದ ಶರಣ ದಂಪತಿಗಳ ಶಿವ ಜೀವನವು ಪರಶಿವನಿಗರ್ಪಿತ ವಾಗುತ್ತಲೇ ಇದೆ. "ಸತಿ–ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ಪುರಾತನರ ಉಕ್ತಿಯನ್ನು ಸಾರ್ಥಕಪಡಿಸಿದ್ದಾರೆ. ದ್ವಿತೀಯ ಬಸವಣ್ಣನೆಂದು ಧವಳ ಕೀರ್ತಿಯಿಂದ ಶೋಭಿಸುತ್ತಿರುವ ಜತ್ತಿ ಬಸಪ್ಪಣ್ಣನವರನ್ನು ಪಡೆದುಕೊಂಡ ಉಪ ರಾಷ್ಟ್ರಪತಿ ಸ್ಥಾನವು ನಿಜಕ್ಕೂ ಧನ್ಯವಾಗಿದೆ. ಇಂಥಾ ರಾಷ್ಟ್ರಪಿತಾಮಹರನ್ನು ಗೌರವಿ ಸುವದೆಂದರೆ ನಮ್ಮನ್ನು ನಾವೇ ಗೌರವಿಸಿಕೊಂಡಂತೆ ಇಂಥಾ ತತ್ವವನ್ನೆತ್ತುವವರನ್ನು ಸನ್ಮಾನಿಸುವದೆಂದರೆ ತತ್ವವನ್ನೆ ಸನ್ಮಾನಿಸಿ ಎತ್ತಿ ಹಿಡಿದಂತೆ. ಇಂಥಾ ಮಹಾ ಭಾಗ್ಯೋದಯ ಕಾಲವು ಕಲಬುರ್ಗಿ ನಗರಕ್ಕೆ ಸನ್ನಿಹಿತವಾಗಲು ಕಾರಣ ಕರ್ತೃ ಗಳಾದ ವಿಶ್ವನಾಥರೆಡ್ಡಿ ಮುದ್ನಾಳರು ಸಂಭಾವನಾ ಗ್ರಂಥ ಸಮರ್ಪಣೆ ಸಮಿತಿಯ ಸಂಚಾಲಕರಾದ ಡಾ॥ ಎಸ್. ಎಸ್. ನರಸಣಗಿಯವರು, ಗ್ರಂಥ ಸಂಪಾದನೆಯ ಗುರುತರ ಹೊಣೆಯನ್ನು ಹೊತ್ತುನಿಂತ ಬಿ. ಮಹಾದೇವಪ್ಪನವರು, ಕಲಬುರ್ಗಿಯ ನಾಗರಿಕರು ಪುಣ್ಯವಂತರೇ ಸರಿ. ಕಲಿಯುಗದ ಧರ್ಮರಾಯನಂತಿರುವ ಉಪ ರಾಷ್ಟ್ರಪತಿ ಬಿ. ಡಿ. ಜತ್ತಿಯವರು ಧಾರವಾಡ ಜಿಲ್ಲೆಯ ನವಿಲುಗುಂದ ಗವಿಮಠದ ಲಿಂಗೈಕ್ಯ ಶ್ರೀ ಮ. ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರ ಅಚ್ಚು ಮೆಚ್ಚಿನ ಆತ್ಮೀಯ ಶಿಷ್ಯರು. ಅವರಿಗೆ ಇತೋಪ್ಯತಿಶಯವಾಗಿ ಆರೋಗ್ಯ ಕೀರ್ತಿ ಗೌರವ ಸ್ಥಾನ ಮಾನಾದಿಗಳನ್ನು ಪರಮಗುರುವಾದ ಯಡೆಯೂರ ಮಹಾಶಿವಯೋಗಿಯು ಕೊಟ್ಟು ಕರುಣಿಸಲೆಂದು ಹೃದಯಾರೆ ಹಾರೈಸಲಾಗಿದೆ.

ಶುಭಂ – ಭದ್ರಂ – ಮಂಗಲಂ



ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ

## ಶ್ರೀ ಶ್ರೀ ಶಾಂತಲಿಂಗ ಮಹಾಸ್ವಾಮಿಗಳು

ಷಣ್ಮುಖ ಶಿವಯೋಗೀಶ್ವರ ಮಠ, ಷಣ್ಮುಖನಗರ, ಜೇವರಗಿ. ಇವರ

● ಮಹಾ ಸನ್ನಿಧಾನದಿಂದ ●

ಹರಿಹರ ಕವಿ 'ಭಕ್ತಿ ಭಂಡಾರಿ' ಬಸವಣ್ಣನವರ ಗುಣನೇಮಗಳನ್ನು ಬಣ್ಣಿಸುತ್ತಾನೆ. "ಎಲೆ ಬಸವ ಬಸವಣ್ಣ, ಬಸವರಸ, ಬಸವಯ್ಯ, ಬಸವ ರಾಜದೇವ ಕೇಳಯ್ಯ ನಿನ್ನ ನೇಮವಿದಾರ್ಗುಂಟು ? ಗುರುಲಿಂಗದೊಳೆರಡಿಲ್ಲ ದಿಪ್ಪೆ. ಶರಣರಂ ಸಂಗನೆಂದೇ ಕಾಣ್ಬೆ; ಬಂದ ಭಕ್ತರನತ್ಯಾದರಿಪೆ............" ಇದನ್ನೋದುತ್ತಿದ್ದಂತೆ ಇಂತಹವೇ ಗುಣಗಳನ್ನು ಪಡೆದು ಸತತ ಪ್ರಯತ್ನ, ಸದಾಚಾರ, ಸದ್ಭಕ್ತಿಗಳಿಂದ ಮೇಲೆ ಮೇಲೆರುತ್ತಾ ಹೋಗಿ ಇಂದು ಅತ್ಯಂತ ಗೌರವಾನ್ವಿತವಾದ, ಭಾರತದ ಉ ಪ ರಾ ಷ್ಟ್ರ ಪ ತಿ ಸ್ಥಾನವನ್ನಲಂಕರಿಸಿದ ಶ್ರೀ ಬಸವಪ್ಪ ದಾನಪ್ಪ ಜತ್ತಿಯವರ ನೆನಪು ಅವರನ್ನು ಪ್ರಪ್ರಥಮ ಸಲ ಕಂಡಾಗಿನ ಸಂದರ್ಭ ಕಣ್ಮುಂದೆ ಸುಳಿಯುತ್ತದೆ.

ಮಾನ್ಯ ಜತ್ತಿಯವರನ್ನು ನಾವು ೧೯೫೪ರಲ್ಲಿ ಅವರ ಮಾತೃ ಭೂಮಿ ಯಾದ ಬಿಜಾಪುರ ಜಿಲ್ಲೆಯ ಸಾವಳಗಿ ಗ್ರಾಮದಲ್ಲಿ ಅವರನ್ನು ಕಂಡೆವು ಪ್ರಪ್ರಥಮ ಸಲ. ಶ್ರೀ ಭೀಮರಾಯ ಕಲ್ಯಾಣಿ ಎಂಬ ಭಕ್ತರ ಮನೆಗೆ ಕಾರ್ಯ ನಿಮಿತ್ತ ಹೋಗಿದ್ದಾಗ ಮಂತ್ರಿಗಳು ನಿನ್ನಿನ ರಾತ್ರಿ ಅಲ್ಲಿಗೆ ಬಂದಿರು ವರೆಂಬ ವಾರ್ತೆ ತಿಳಿಯಿತು. ಅವರನ್ನು ಊರಿಗೆ ಹೋಗುವ ಮುನ್ನ ಮರು ದಿನ ಮುಂಜಾನೆ ಕಾಣಬೇಕೆಂದು ನಿಶ್ಚಯಿಸಿದೆವು. ನನ್ನೊಡನೆ ಕನಮಡಿಯ ಶರಣರಾದ ಲಿ|| ಗುರುಸಿದ್ದಪ್ಪ ಅನಂತಪೂರ ಮತ್ತು ಶ್ರೀ ಗುರುಲಿಂಗಪ್ಪ ಅನಂತಪೂರ ಇವರಿದ್ದು, ಅವರೂ ಸಹ ಜತ್ತಿಯವರನ್ನು ಕಾಣುವ ಕಾತರ ವ್ಯಕ್ತಪಡಿಸಿದರು. ಬೆಳಿಗ್ಗೆ ೮ ಗಂಟೆಗೆ ನಾವು ಬರುವ ಸುದ್ದಿಯನ್ನು ಅವರಿಗೆ ತಿಳಿಸಲು ಆಳೊಂದನ್ನು ಕಳುಹಿಸಿದಾಗ "ಜೇವರಗಿಯಿಂದ ಪೂಜ್ಯರು ಬಂದಿ ರುವರೋ ? ಹಾಗಾದರೆ ಅಪ್ಪ ಅವರ ದರುಶನಕ್ಕೆ ನಾನೇ ಬರುತ್ತೇನೆಂದು ಹೇಳು" ಎಂದು ಹೇಳಿ ಕಳುಹಿಸಿದರು. ಅವರ ಅಪೂರ್ವ ಗುರು ಭಕ್ತಿ

ಮತ್ತು ಶರಣ ಸಂಸ್ಕೃತಿಗೆ ಆ ಮಾತು ಪ್ರತೀಕವಾಗಿತ್ತು. ಆದರೂ ನಾವು ಇಲ್ಲಿ ಜತ್ತಿಯವರ ಜನ್ಮ ಭೂಮಿಗೆ ಬಂದು ಅವರ ಮನೆಗೆ ಸಂದರ್ಶನ ನೀಡದೆ ಹೋಗುವದು ಉಚಿತವಲ್ಲ. ಅಲ್ಲದೆ ಭಕ್ತನಿದ್ದ ಠಾವಿಗೆ ಜಂಗಮ ನಡೆದು ಬರಬೇಕಾದುದು ಕರ್ತವ್ಯ ಎಂದು ನುಡಿದು ಪುನಃ ನಾವೇ ಬರುವ ವಿಚಾರ ತಿಳಿಸಿ ಹೊರಟೆವು.

## ತ್ರಿವಿಕ್ರಮ ಪಾದ

ದಾರಿಯಲ್ಲಿ ಜತ್ತಿಯವರ ಸಾಧನೆ, ಕ್ರಿಯಾಶೀಲ ವ್ಯಕ್ತಿತ್ವವನ್ನು ಬಣ್ಣಿಸುತ್ತಾ ಬಂದೆವು. ಅಂತಹ ಸಣ್ಣ ಹಳ್ಳಿಯಲ್ಲಿ ರಾಷ್ಟ್ರದ ನಂದಾದೀಪವಾಗಿ ಬೆಳಗಬಲ್ಲ ವ್ಯಕ್ತಿ ಹುಟ್ಟಿದ್ದು ನಾಡ ಭಾಗ್ಯ ಎಂದೆವು. ಜತ್ತಿಯವರು ವಕೀಲಿ ವೃತ್ತಿಯನ್ನು ಸಾಮಾನ್ಯರಂತೆ ಆರಂಭಿಸಿ, ತಮ್ಮ ಅಸಾಮಾನ್ಯವಾದ ಕಾನೂನು ಹಾಗು ಕಾರ್ಯಕೌಶಲ್ಯದಿಂದ ಅಂದಿನ ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿ ಸ್ಥಾನವನ್ನು ಪಡೆದದ್ದು ರಾಜಕೀಯ ಚದುರಂಗದಲ್ಲಿ ಜಾಣರಾದ ಜತ್ತಿ ಮುಂದೆ ಮುಂಬೈ ಪ್ರಾಂತ್ಯದಲ್ಲಿ ಆರೋಗ್ಯ ಉಪಮಂತ್ರಿಗಳಾಗಿ ಸೇವೆ ಸಲ್ಲಿಸಿದ್ದು, ಮನಸ್ಸು ಮಾಡಿದ್ದರೆ ಈ ಪುಟ್ಟ ವಾಮನ ಮೂರ್ತಿ ರಾಜಕೀಯ ಭೂ ವ್ಯೋ ಮ ವ ನ್ನೇ ತನ್ನ ತ್ರಿವಿಕ್ರಮ ಪಾದಗಳಿಂದ ಮುಟ್ಟಿ ನಿಲ್ಲಬಲ್ಲ. ಎಂದಾಡಿಕೊಳ್ಳುತ್ತ ಅವರ ಮನೆ ತಲುಪಿದೆವು. ಮಧ್ಯಮ ವರ್ಗದ ಸಂಪ್ರದಾಯಸ್ಥ ಲಿಂಗಾಯತ ಒಕ್ಕಲುತನದ ಅಚ್ಚುಕಟ್ಟಾದ ಮನೆ, ಮನೆಯ ಮುಂದೆ ನಾವು ಬರುತ್ತಿದ್ದಂತೆಯೇ ಒಳಗಿನಿಂದ ಶುದ್ಧ ಖಾದಿ ಧೋತರು, ಖಾದಿ ನೆಹರು ಶರ್ಟ ಧರಿಸಿದ ನಿಷ್ಕಲ್ಮಶತನು ಹಣೆಯ ಮೇಲಿಟ್ಟ ವಿಭೂತಿ ಶೃಂಗಾರ, ಮುಖದಲ್ಲಿ ಮಂದಸ್ಮಿತತೆ, ಕಿರಿ ಗಾತ್ರದಲ್ಲಿ ಹಿರಿಪಾತ್ರವನ್ನು ಹುದುಗಿಟ್ಟ ಗಂಭೀರ ವ್ಯಕ್ತಿತ್ವ ಅಷ್ಟೇ ನಿರಾಡಂಬರ ಸಹಜ ಪೂರ್ಣ ನಡಿಗೆಯಿಂದ ಬಂದು "ಒಳಗೆ ಬನ್ನಿ" ಎಂದು ಸ್ವಾಗತಿಸಿ, ಕರೆದೊಯ್ದು ಒಂದು ರತ್ನಗಂಬಳಿಯನ್ನು ಹಾಸಿ, ನನ್ನೊಡನಿದ್ದ ಭಕ್ತರಿಗೆ ಉಚಿತಾಸನವನ್ನು ತಾವೇ ಸ್ವತಃ ಹಾಕಿ ಬಳಿಯಲ್ಲಿ ವಿನಯದಿಂದ ಕುಳಿತರು.

ಬಹುಶಃ ಇವರು ವ್ಯವಸ್ಥಾಪಕರಿರಬಹುದು. ಮಂತ್ರಿಗಳು ಇನ್ನೂ ಒಳಗಿನಿಂದ ಬರಬಹುದೆಂದು ಯೋಚಿಸಿ, ಆ ಮಾತು ಈ ಮಾತು ಆಡುತ್ತಾ ಕುಳಿತೆವು. ಬಹಳ ಸಮಯ ಕಳೆದ ನಂತರ ಶ್ರೀ ಜತ್ತಿ ಅವರನ್ನು ಕಾಣುವ ಉತ್ಕ

ಟಾಕಾಂಕ್ಷೆಯಿಂದ "ಜತ್ತಿ ಮಂತ್ರಿಗಳು ಇನ್ನೂ ಪೂಜೆಯಲ್ಲಿರುವರೇ ?" ಎಂದು ಪಕ್ಕದಲ್ಲಿ ಕುಳಿತವನನ್ನು ಕೇಳಿದೆವು. ಆಗ ಅವರು ಮುಗುಳ್ನಗೆ ನಕ್ಕು "ನಾನೇ ಜತ್ತಿ, ಅಪ್ಪಾ ಅವರೇ"? ಎಂದಾಗ ದಿಗ್ಭ್ರಮೆಗೊಂಡೆವು. ಅವರೇ ಜತ್ತಿ ಮಂತ್ರಿಗಳೆಂದು ಗುರ್ತಿಸದೇ ಹೋದುದು ನಮ್ಮ ಅಜ್ಞಾನ. ಆದರೆ 'ಕಣ್ಣರಿಯದಿರ್ದಡಂ, ಕರುಳರಿಯದೇ ?' ಅವರು ನಮ್ಮನ್ನು ಯಾವ ದೃಷ್ಟಿಯಿಂದಲೂ ಅನ್ಯರೆಂದು ಬಗೆಯಲಿಲ್ಲ. ಆತ್ಮೀಯತೆಯಿಂದ, ಭಕ್ತಿಯಿಂದ ಬಹಳ ಹೊತ್ತು ಮಾತನಾಡಿದರು. ನಮ್ಮ ಲಿಂಗಾರ್ಚನೆಗೆ ಅಣಿ ಮಾಡುವುದಾಗಿ ಹೇಳಿದರು. ಆದರೆ ಆಗಲೆ ನಾವು ಬೆಳಗಿನ ಪೂಜಾ ವಿಧಿ ತೀರಿಸಿರುವುದಾಗಿ ತಿಳಿಸಲು ನಮ್ಮೊಡನೆ ಬಂದಿದ್ದ ಭಕ್ತರಿಗೆ ಅಲ್ಪೋಪಹಾರ ಮಾಡಿಸಿ, ಹಾರ್ದಿಕವಾಗಿ ಬೀಳ್ಕೊಟ್ಟರು.

## ಚಿದ್ಘನ ಆಶೀರ್ವಾದ

ಅವರ ಮನೆಯ ಬಾಗಿಲು ದಾಟಿ ಬರುವಾಗ ನಾವು ಅನುಗ್ರಹ ಪೂರ್ವಕವಾಗಿ 'ನಿಮ್ಮ ಶುದ್ಧ ವ್ಯಕ್ತಿತ್ವ, ಭಕ್ತಿ ಜೀವನ, ರಾಜಕೀಯ ಕ್ಷೇತ್ರದಲ್ಲಿ ಒಂದು ಪವಿತ್ರ ಪರಿಸರವನ್ನು ನಿರ್ಮಿಸಲಿ. ನಿಮ್ಮ ಕೀರ್ತಿ ರಾಷ್ಟ್ರದುದ್ದಕ್ಕೂ ಹರಡಲಿ' ಎಂದು ನುಡಿಯುತ್ತಿದ್ದಂತೆ, "ಪೂಜ್ಯರೇ, ನಾನು ಹುಟ್ಟಿರುವದೇ ತಮ್ಮಂಥವರ ಚಿದ್ಘನ ಆಶೀರ್ವಾದದಿಂದ. ಅಥಣಿಯ ಲಿಂ॥ ಪರಮಪೂಜ್ಯ ಮುರುಘೇಂದ್ರ ಶಿವಯೋಗಿಗಳ ಹರಕೆಹೊತ್ತು ನಮ್ಮ ತಾಯಿ ನನ್ನನ್ನು ಹೆತ್ತಿದ್ದಾಳೆ. ಇಂದಿನ ನನ್ನ ಜೀವನದ ಕಿಂಚಿತ ಸಾಧನೆಗೆ ಆ ಮಹಾಮೂರ್ತಿ ಮುರುಘೇಂದ್ರರ ತಪಃಶಕ್ತಿ ಅನುಗ್ರಹ ಬಲಗಳೇ ಕಾರಣ!" ಎಂದು ಉದ್ಗಾರ ತೆಗೆದರು. "ಜತ್ತಿಯವರ ಲೋಕಸಾಧನೆಗಳಿಗೆ ಆಧ್ಯಾತ್ಮಿಕ ಬೆಂಬಲವಿರುವದರಿಂದಲೇ ಅವರು ನಿಂತ ನೆಲ ಗಟ್ಟಿಯಾಗಿದೆ. ಅದು ಅವರನ್ನು ಉನ್ನತೋನ್ನತ ಸ್ಥಾನಗಳಿಗೆ ಕರೆದೊಯ್ಯುವ ಸಂಜೀವಿನಿ ಶಕ್ತಿಯಾಗಿದೆ. ತಾವು ಇದಕ್ಕೂ ಹೆಚ್ಚಿನ ಸ್ಥಾನಕ್ಕೇರುವಂತೆ ಶಿವಯೋಗಿ ಅನುಗ್ರಹಿಸಲಿ" ಎಂದು ಹಾರೈಸಿ ಅವರಿಂದ ಬೀಳ್ಕೊಂಡೆವು.

ಮುಂದೆ ಜತ್ತಿಯವರು ವಿಶಾಲ ಮೈಸೂರು ರಾಜ್ಯದ ಆಹಾರ ಮಂತ್ರಿಗಳಾಗಿದ್ದಾಗ "ಬಸವ ಸಮಿತಿಯ"ಯ ಅಧ್ಯಕ್ಷರಾಗಿ ಬಸವಣ್ಣನವರ ಅಷ್ಟಶತಮಾನೋತ್ಸವದ ಬೃಹತ್ ಯೋಜನೆಯ ನಿರ್ಮಾತೃಗಳಾಗಿ ನಿಂತ ಮೇಲೆ ಮಠಾಧಿಪತಿಗಳಾದ ನಮ್ಮ ಸಂಪರ್ಕ ಅವರೊಡನೆ ಗಾಢವಾಗುತ್ತ ಬಂದಿತು.

೧೨ ನೇ ಶತಮಾನದ ಕರ್ನಾಟಕದ ಸ್ವತಂತ್ರ ಧೀರ ಶರಣ, ಶ್ರೇಷ್ಠ ತತ್ವಜ್ಞಾನಿ, ಅಂದಿನ ಹಿರಿಯ ರಾಜಕಾರಣಿ ಬಸವಣ್ಣನವರಿಗೆ ಸ್ವತಂತ್ರ ಕರ್ನಾಟಕದ ಇಂದಿನ ರಾಜಕಾರಣಿ, ಬಸವ ತತ್ವಾನುಸಂಧಾನಿ, ಭಕ್ತಾಗ್ರೇಸರ ಜತ್ತಿಯವರು ಸರಿಸಾಟಿಯಾಗಿ ದುಡಿದರು. ಬಸವಣ್ಣನವರ ಅಷ್ಟ ಶತಮಾನೋತ್ಸವದ ಶುಭ ಸಂದರ್ಭದಲ್ಲಿ ಹಂಪೆಯ ವಿರೂಪಾಕ್ಷೇಶ್ವರನ ದಿವ್ಯ ಸಾನಿಧ್ಯದಿಂದ ಬಸವ ಕಲ್ಯಾಣದವರೆಗೆ ಪಾದಯಾತ್ರೆ ಹೊರಟಾಗ ಕೋಟಿ ಕೋಟಿ ಭಕ್ತರ ಹೃದಯ ಮಂದಿರದಲ್ಲಿ ಸುಪ್ತವಾಗಿದ್ದ ನವ ಜಾಗೃತಿಯ ಜಯ ಘಂಟೆ ಕೇಳಿಸಿತು. ಬಸವಣ್ಣನವರ ನೂತನ ಸಮಾಜ ನಿರ್ಮಾಣದ ಸಾರ್ವಕಾಲಿಕ ಸಂದೇಶಗಳ ತೂರ್ಯಧ್ವನಿ ಚಿತ್ತದಲ್ಲಿ ಮೊಳಗಿತು. ಮಂತ್ರಿಗಳು, ಮಠಾಧಿಪತಿಗಳು, ಮಹಾದಾನಿಗಳು, ಎಲ್ಲ ಮತ ಪಂಥದವರು, ವಿಶ್ವ ಧರ್ಮ ದ್ರಷ್ಟಾರರಾದ ಬಸವೇಶ್ವರರ ತತ್ವಗಳನ್ನು ತಿಳಿದುಕೊಳ್ಳಲು ಮುಂದೆ ಬಂದರು. ಅಂದಿನ ಪಾದಯಾತ್ರೆಯಲ್ಲಿ ಸ್ವತಃ ಜತ್ತಿಯವರೇ ಮುಡಿಬಾಗಿ ಅಡಿಯಟ್ಟು ಭಕ್ತಿ ಭಿಕ್ಷೆಯನ್ನೆತ್ತಲು ಮುನ್ನಡೆದಾಗ ಕಲ್ಯಾಣದ ಮಹಾದ್ವಾರವೇ ತೆರೆದಂತಾಯಿತು. ಹಳ್ಳಿ ಪಟ್ಟಣಗಳಲ್ಲಿ ಪಾದಯಾತ್ರಿಕರ ವಿಜೃಂಭಿತ ಸ್ವಾಗತ ದಾರಿಯುದ್ದಕ್ಕೂ ಹಸಿರು ತೋರಣ, ವಚನಗಳ ಉದ್ಧರಣ, ಬಸವ ಜಯಘೋಷಣ. ಒಂದು ಸಂಜೆ ಪಾದಯಾತ್ರಿಕರ ಗುಂಪು ಅಖಂಡೇಶ್ವರ ವಚನ ಕರ್ತೃ, ಷಣ್ಮುಖ ಶಿವಯೋಗಿಗಳ ಶ್ರೀ ಮಠಕ್ಕೂ, ಬಿಜಯಂಗೈದು ವಿಶ್ರಮಿಸಿದಾಗ ಜೇವರಗಿ ಭಕ್ತರ ಅಂಗಮನ ಭಾವಗಳಲ್ಲಿ ಅದೆಂತಹ ಭಕ್ತಿ ! ಅತಿಥಿ ಸತ್ಕಾರ ಪ್ರೇಮ !! ಸಾಸಿವೆ ಮೇಲೆ ಸಾಗರ ಹರಿದು ಬಂದಂತೆ ಆಗಿತ್ತು. ಅಂದು ಶ್ರೀ ಶಿವಕುಮಾರಸ್ವಾಮಿಗಳ ಒತ್ತಾಯದಂತೆ ಪಾದಯಾತ್ರೆಯಲ್ಲಿ ನಾವೂ ಭಾಗಿಯಾಗಿ ಪ್ಯಾರಸಾಬಾದ ಶ್ರೀ ಅಂದಾನೇಶ್ವರ ಮಠಕ್ಕೆ ಬಂದಾಗ ಅಲ್ಲಿಗೆ ಶ್ರೀ ಜತ್ತಿಯವರ ಆಗಮನವಾಯಿತು. ಅದು ಎರಡನೆಯ ಭೆಟ್ಟಿಯಾಗಿತ್ತು.

## ಹರ್ಷೋದ್ಗಾರಗಳು

ಜತ್ತಿಯವರು ಆತ್ಮೀಯತೆಯಿಂದ ಮಾತನಾಡಿದರು. ಶ್ರೀ ಶಿವಕುಮಾರ ಸ್ವಾಮಿಗಳು ಜೇವರಗಿಯಲ್ಲಿ ನಮ್ಮ ಮತ್ತು ಯಾವತ್ತು ಭಕ್ತರ ಉತ್ಸಾಹ ಆದರಾತಿಥ್ಯಗಳನ್ನು ಪ್ರಶಂಸಿಸಿ ನುಡಿದಾಗ, ಹರ್ಷೋದ್ಗಾರಗಳಿಂದ ಹೃದಯ ತುಂಬಿ ಕೃತಜ್ಞತೆಗಳನ್ನು ಸಲ್ಲಿಸಿದರು. 'ವೀರಶೈವ ಧರ್ಮದ ಜಾಗೃತಿಗೆ ತಮ್ಮಂಥ ಮಠಾಧಿಪತಿಗಳು ಮೊದಲು ಮುಂದಾಗಬೇಕು ಅಪ್ಪಾ

ಅವರೇ! ಉತ್ಸಾಹ ಇಷ್ಟಕ್ಕೆ ನಿಲ್ಲಬಾರದು. ಶರಣರ ಇತಿಹಾಸ, ಸಂಸ್ಕೃತಿ ಕಣ್ಮರೆಯಾಗಿ ಹೋಗಬಾರದು. ತಾವು ಸುಶಿಕ್ಷಿತರಾಗಿದ್ದೀರಿ ತಮ್ಮ ವಿದ್ಯೆಯನ್ನು ಸಂಶೋಧನೆಗೆ ವಿನಿಯೋಗಿಸಿ ಹಿಂದುಳಿದ ಈ ಭಾಗದ ವೀರಶೈವ ಮಠಮಾನ್ಯಗಳ ಚರಿತ್ರೆಯನ್ನು ಸಂಗ್ರಹಿಸಿಕೊಟ್ಟರೆ ಅಗತ್ಯವಾಗಿ ಪ್ರಕಟ ಮಾಡುತ್ತೇವೆ." ಎಂದು ಅಭಿಮಾನದಿಂದ ಮಾತನಾಡಿದರು.

### ಉಚಿತ ಸಂದರ್ಭ

ಮೂರನೆಯಸಲ ಅವರನ್ನು ಕಂಡುದು ಬಿಜಾಪೂರದಲ್ಲಿ. ಇಂಡೀ ತಾಲೂಕಿನ, ಎಂ. ಎಲ್. ಎ. ಗಳಾಗಿದ್ದ ಸಾಮಾಜಿಕ, ರಾಜಕೀಯ, ಸೇವಾ ಧುರೀಣ ಸುರಪುರದ ಶ್ರೀ ಮಲ್ಲಪ್ಪನವರ ಮಗಳ ವಿವಾಹ ಸಂದರ್ಭದಲ್ಲಿ, ವರ ನಮ್ಮ ಊರಿನವರೇ ಪ್ರೊ. ಶಂಕರ ಸೀರಿ. ನಮ್ಮ ಮಠದ ಅಭಿಮಾನಿ ಭಕ್ತರಾದ ಸೀರಿ ಬಂಧುಗಳ ಆಮಂತ್ರಣದ ಮೇರೆಗೆ ನಾವು ವಿವಾಹಕ್ಕೆ ಹೋಗಲೇ ಬೇಕಾಗಿತ್ತು. ಬೇರೊಂದು ಊರಿನಿಂದ ನಾವು ಬಿಜಾಪೂರಕ್ಕೆ ಬಂದಾಗ ಮುಹೂರ್ತದ ವೇಳೆ ದಾಟುತ್ತಿತ್ತು. ತಡವಾಯಿತೆಂದು ನಾವು ಯೋಚಿಸುತ್ತ ನಿಂತಾಗಲೇ ಜತ್ತಿಯವರ ಕಾರು ಬಂದಿತು. ಅವರು ನಮ್ಮನ್ನು ನೋಡಿ ವಿಷಯ ತಿಳಿದುಕೊಂಡಾಗ "ಸರಿ ನಾನೂ ಅದಕ್ಕೆ ಉಪಸ್ಥಿತನಾಗಬೇಕು. ಬಹುಶಃ ತಡ ಮಾಡಿ ಹೋಗುವವರು ನಾವಿಬ್ಬರೇ ಎಂದು ಕಾಣುತ್ತದೆ. ಅದಕ್ಕೆ ಸ್ವಾಮಿಗಳೊಡನೆ ಹೋದರೆ ಜನ ನಮ್ಮನ್ನು ಕ್ಷಮಿಸಬಹುದು." ಎಂದು ನಗುತ್ತ ನುಡಿದು ಇಬ್ಬರೂ ವಿವಾಹ ಮಂಟಪಕ್ಕೆ ಕೂಡಿ ಹೋದೆವು. ಮಲ್ಲಪ್ಪನವರು ಮತ್ತಿತರ ಪ್ರತಿಷ್ಠಿತರು ಭವ್ಯ ಸ್ವಾಗತ ನೀಡಿದರು. "ಏನ್ರೀ ಸ್ವಾಮಿಗಳೊಡನೆ ಕೂಡಿ ಬಂದು ಬಿಟ್ಟಿರಲ್ಲ ಎಂದು ನುಡಿದಾಗ ಜತ್ತಿಯವರು "ಹೌದು ತಪ್ಪೇನಿದೆ? ಗುರು ಇದ್ದ ಠಾವಿನಲ್ಲಿ ಭಕ್ತ ಇರಲೇಬೇಕು ಅಲ್ಲಿ, ಅಲ್ಲವೇ?" ಎಂದು ನುಡಿದು ನನ್ನ ಮುಖ ನೋಡಿದರು. ಸುಮಾರು ೧೫ ವರ್ಷಗಳ ಹಿಂದೆ ನಾವು ಅವರ ಭೆಟ್ಟಿಗೆ ಹೋದಾಗ ನಾವು ಅಂದ ಮಾತನ್ನು ಇಂದಿಗೂ ಸ್ಮರಣೆಯಲ್ಲಿಟ್ಟಿರುವುದು ಮತ್ತು ಅದನ್ನು ಇಷ್ಟು ಉಚಿತ ಸಂದರ್ಭದಲ್ಲಿ ನಮ್ಮ ಮುಂದೆಯೇ ನುಡಿದುದು ನಮ್ಮನ್ನು ಕ್ಷಣಕಾಲ ದಿಗ್ಭ್ರಾಂತವಾಗಿಸಿತು. ಜತ್ತಿಯವರ ಭಕ್ತಿ, ಸಂಸ್ಕಾರಗಳು ಅತ್ಯಂತ ಗಾಢವೂ ಶಾಶ್ವತವೂ ಆಗಿವೆ ಎಂಬುದು ಆಗಲೇ ನಮಗೆ ದೃಢವಾಗಿ ಬಿಟ್ಟಿತು.

ಇದಾದ ಮೇಲೆ ಮತ್ತೆ ಹಲವು ವರ್ಷಗಳು ಉರುಳಿವೆ. ಈ ವರುಷವೇ ನಾವು ಹಮ್ಮಿಕೊಂಡಿದ್ದ ಶ್ರೀ ಶಿವಯೋಗೀಶ್ವರರ ಚತುಃ ಶತಮಾನೋತ್ಸವ

ಕಾಲಕ್ಕೆ ಅವರನ್ನು ಬರಮಾಡಿಕೊಳ್ಳಬೇಕೆಂಬ ಹಂಬಲವು ಹೆಚ್ಚಿತ್ತಾದರೂ ಉಪ ರಾಷ್ಟ್ರಪತಿಗಳಾಗಿ ಕೆಲವೇ ತಿಂಗಳು ಆದ್ದರಿಂದ ಸಮಗ್ರ ಭಾರತದ ಪ್ರಜೆಗಳ ಹಿತಾಭಿವೃದ್ಧಿಯ ಹೊಣೆ ಹೊತ್ತದ್ದರಿಂದ ಸದ್ಯ ಆಗದಿದ್ದರೂ ಮುಂದೆ ಬರುವುದಾಗಿ ತಿಳಿಸಿದ್ದು ಮತ್ತೆ ಅವರ ಬಗೆಗೆ ಅಭಿಮಾನ ಮೂಡುವಂತೆ ಮಾಡಿದೆ. ಅವರ ವಿನಯ ಶ್ರೀ, ವಿಜಯಶ್ರೀ, ಆತ್ಮ ಶ್ರೀಗಳನ್ನು ಕಂಡು ನಾವು ಹೆಮ್ಮೆ ಪಟ್ಟಿದ್ದೇವೆ. ಆತ್ಮಬಲವುಳ್ಳ ವ್ಯಕ್ತಿ ಎಂತಹ ಮಹಾಸ್ಥಾನಕ್ಕಾದರೂ ಏರುತ್ತಾನೆ. ಎಂತಹ ರಾಜಕೀಯ ರಂಗವೇ ಆದರೂ ಅದನ್ನು ರಾಜಯೋಗವಾಗಿ ಮಾಡಬಲ್ಲ. ಕಾರಣಿಕನಾಗುತ್ತಾನೆ. ಅವರಿಂದ ಉಪರಾಷ್ಟ್ರಪತಿ ಸ್ಥಾನವನ್ನಲಂಕರಿಸಿದ್ದು ವೀರಶೈವರ ರಾಜಕೀಯ ಇತಿಹಾಸದಲ್ಲಿಯೇ ಒಂದು ಸುವರ್ಣ ಸಂಪುಟ. ಇದರಿಂದ ಕರ್ನಾಟಕದ ಘನತೆಗೌರವದ ಕಳಸ ನಭಕ್ಕೇರಿದೆ. ಇಂದಿಗೂ ಬಸವಣ್ಣನವರ ನೈಷ್ಠಿಕ ಭಕ್ತರಾಗಿ 'ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' ಎಂಬ ಬಸವ ವಚನವನ್ನು ಕ್ರಿಯಾಚರಣೆಯಲ್ಲಿ ತಂದು, ರಾಷ್ಟ್ರದೇವಿಯ ಪೂಜೆಗೆ ಅರ್ಹರಾಗಿರುವ ಶ್ರೀ ಜತ್ತಿ ರಾಷ್ಟ್ರಪತಿಗಳಾಗಿ ಮಾತ್ರವಲ್ಲ, ಇಂದಿಲ್ಲ ನಾಳೆ ರಾಷ್ಟ್ರಪತಿಗಳಾಗಿ ಶೋಭಿಸುತ್ತಾರೆ. ಎಂಬುದು ನಿಸ್ಸಂಶಯದ ಮಾತು. ನಮ್ಮ ಮಠದ ವಚನ ಕರ್ತೃಗಳಾದ ಷಣ್ಮುಖ ಶಿವಯೋಗಿಗಳವರ ಈ ವಚನ ಅವರ ವ್ಯಕ್ತಿತ್ವಕ್ಕೆ ಸಂಕೇತವಾಗಿದೆ. ಅವರ ಮುಂದಣ ಪದವಿಗೆ ಪಲ್ಲವಿಯಾಗಿದೆ.

ನುಡಿಯಲ್ಲಿ ಕರ್ಕಶವಿಲ್ಲದೆ ನಡೆಯಲ್ಲಿ ಬೀಸರವೋಗದೆ !
ಹಿಡಿದ ಭಕ್ತಿಯ ಕಡೆತನಕ ಬಿಡದೆ !
ಬಡತನ, ಎಡರು, ಕಂಟಕ ಬಂದಲ್ಲಿ ಚಿಂತೆಯಿಂದ ಕಾಂತಿಗುಂದದೆ !
ಅಡಿಗಡಿಗೆ 'ಶಿವ' ಎಂಬ ನುಡಿಯ ಮರೆಯದೆ !
ನಡೆವ ಸದ್ಭಕ್ತರಿಗೆ ಬೇಡಿದ ಪದವಿಯನ್ನೀವ ನಮ್ಮ ಅಖಂಡೇಶ್ವರಾ.



ಅವರೇ! ಉತ್ಸಾಹ ಇಷ್ಟಕ್ಕೆ ನಿಲ್ಲಬಾರದು. ಶರಣರ ಇತಿಹಾಸ, ಸಂಸ್ಕೃತಿ ಕಣ್ಮರೆಯಾಗಿ ಹೋಗಬಾರದು. ತಾವು ಸುಶಿಕ್ಷಿತರಾಗಿದ್ದೀರಿ ತಮ್ಮ ವಿದ್ಯೆಯನ್ನು ಸಂಶೋಧನೆಗೆ ವಿನಿಯೋಗಿಸಿ ಹಿಂದುಳಿದ ಈ ಭಾಗದ ವೀರಶೈವ ಮಠಮಾನ್ಯಗಳ ಚರಿತ್ರೆಯನ್ನು ಸಂಗ್ರಹಿಸಿಕೊಟ್ಟರೆ ಅಗತ್ಯವಾಗಿ ಪ್ರಕಟ ಮಾಡುತ್ತೇವೆ." ಎಂದು ಅಭಿಮಾನದಿಂದ ಮಾತನಾಡಿದರು.

## ಉಚಿತ ಸಂದರ್ಭ

ಮೂರನೆಯಸಲ ಅವರನ್ನು ಕಂಡುದು ಬಿಜಾಪೂರದಲ್ಲಿ. ಇಂಡೀ ತಾಲೂಕಿನ, ಎಂ. ಎಲ್. ಎ. ಗಳಾಗಿದ್ದ ಸಾಮಾಜಿಕ, ರಾಜಕೀಯ, ಸೇವಾ ಧುರೀಣ ಸುರಪುರದ ಶ್ರೀ ಮಲ್ಲಪ್ಪನವರ ಮಗಳ ವಿವಾಹ ಸಂದರ್ಭದಲ್ಲಿ, ವರ ನಮ್ಮ ಊರಿನವರೇ ಪ್ರೊ. ಶಂಕರಿ ಸೀರಿ. ನಮ್ಮ ಮಠದ ಅಭಿಮಾನಿ ಭಕ್ತರಾದ ಸೀರಿ ಬಂಧುಗಳ ಆಮಂತ್ರಣದ ಮೇರೆಗೆ ನಾವು ವಿವಾಹಕ್ಕೆ ಹೋಗಲೇ ಬೇಕಾಗಿತ್ತು. ಬೇರೊಂದು ಊರಿನಿಂದ ನಾವು ಬಿಜಾಪೂರಕ್ಕೆ ಬಂದಾಗ ಮುಹೂರ್ತದ ವೇಳೆ ದಾಟುತ್ತಿತ್ತು. ತಡವಾಯಿತೆಂದು ನಾವು ಯೋಚಿಸುತ್ತ ನಿಂತಾಗಲೇ ಜತ್ತಿಯವರ ಕಾರು ಬಂದಿತು. ಅವರು ನಮ್ಮನ್ನು ನೋಡಿ ವಿಷಯ ತಿಳಿದುಕೊಂಡಾಗ "ಸರಿ ನಾನೂ ಅದಕ್ಕೆ ಉಪಸ್ಥಿತನಾಗಬೇಕು. ಬಹುಶಃ ತಡ ಮಾಡಿ ಹೋಗುವವರು ನಾವಿಬ್ಬರೇ ಎಂದು ಕಾಣುತ್ತದೆ. ಅದಕ್ಕೆ ಸ್ವಾಮಿಗಳೊಡನೆ ಹೋದರೆ ಜನ ನಮ್ಮನ್ನು ಕ್ಷಮಿಸಬಹುದು." ಎಂದು ನಗುತ್ತ ನುಡಿದು ಇಬ್ಬರೂ ವಿವಾಹ ಮಂಟಪಕ್ಕೆ ಕೂಡಿ ಹೋದೆವು. ಮಲ್ಲಪ್ಪನವರು ಮತ್ತಿತರ ಪ್ರತಿಷ್ಠಿತರು ಭವ್ಯ ಸ್ವಾಗತ ನೀಡಿದರು. "ಏನ್ರೀ ಸ್ವಾಮಿಗಳೊಡನೆ ಕೂಡಿ ಬಂದು ಬಿಟ್ಟಿರಲ್ಲ ಎಂದು ನುಡಿದಾಗ ಜತ್ತಿಯವರು "ಹೌದು ತಪ್ಪೇನಿದೆ ? ಗುರು ಇದ್ದ ಠಾವಿನಲ್ಲಿ ಭಕ್ತ ಇರಲೇಬೇಕು ಅಲ್ಲಿ, ಅಲ್ಲವೇ ?" ಎಂದು ನುಡಿದು ನನ್ನ ಮುಖ ನೋಡಿದರು. ಸುಮಾರು ೧೫ ವರ್ಷಗಳ ಹಿಂದೆ ನಾವು ಅವರ ಭೆಟ್ಟಿಗೆ ಹೋದಾಗ ನಾವು ಅಂದ ಮಾತನ್ನು ಇಂದಿಗೂ ಸ್ಮರಣೆಯಲ್ಲಿಟ್ಟಿರುವದು ಮತ್ತು ಅದನ್ನು ಇಷ್ಟು ಉಚಿತ ಸಂದರ್ಭದಲ್ಲಿ ನಮ್ಮ ಮುಂದೆಯೇ ನುಡಿದುದು ನಮ್ಮನ್ನು ಕ್ಷಣಕಾಲ ದಿಗ್ಭ್ರಾಂತವಾಗಿಸಿತು. ಜತ್ತಿಯವರ ಭಕ್ತಿ, ಸಂಸ್ಕಾರಗಳು ಅತ್ಯಂತ ಗಾಢವೂ ಶಾಶ್ವತವೂ ಆಗಿವೆ ಎಂಬುದು ಆಗಲೇ ನಮಗೆ ದೃಢವಾಗಿ ಬಿಟ್ಟಿತು.

ಇದಾದ ಮೇಲೆ ಮತ್ತೆ ಹಲವು ವರ್ಷಗಳು ಉರುಳಿವೆ. ಈ ವರುಷವೇ ನಾವು ಹಮ್ಮಿಕೊಂಡಿದ್ದ ಶ್ರೀ ಶಿವಯೋಗೀಶ್ವರರ ಚತುಃ ಶತಮಾನೋತ್ಸವ

ಕಾಲಕ್ಕೆ ಅವರನ್ನು ಬರಮಾಡಿಕೊಳ್ಳಬೇಕೆಂಬ ಹಂಬಲವು ಹೆಚ್ಚಿತ್ತಾದರೂ ಉಪ ರಾಷ್ಟ್ರಪತಿಗಳಾಗಿ ಕೆಲವೇ ತಿಂಗಳು ಆದ್ದರಿಂದ ಸಮಗ್ರ ಭಾರತದ ಪ್ರಜೆಗಳ ಹಿತಾಭಿವೃದ್ಧಿಯ ಹೊಣೆ ಹೊತ್ತದ್ದರಿಂದ ಸದ್ಯ ಆಗದಿದ್ದರೂ ಮುಂದೆ ಬರುವುದಾಗಿ ತಿಳಿಸಿದ್ದು ಮತ್ತೆ ಅವರ ಬಗೆಗೆ ಅಭಿಮಾನ ಮೂಡುವಂತೆ ಮಾಡಿದೆ. ಅವರ ವಿನಯ ಶ್ರೀ, ವಿಜಯಶ್ರೀ, ಆತ್ಮ ಶ್ರೀಗಳನ್ನು ಕಂಡು ನಾವು ಹೆಮ್ಮೆ ಪಟ್ಟಿದ್ದೇವೆ. ಆತ್ಮಬಲವುಳ್ಳ ವ್ಯಕ್ತಿ ಎಂತಹ ಮಹಾಸ್ಥಾನಕ್ಕಾದರೂ ಏರುತ್ತಾನೆ. ಎಂತಹ ರಾಜಕೀಯ ರಂಗವೇ ಆದರೂ ಅದನ್ನು ರಾಜಯೋಗವಾಗಿ ಮಾಡಬಲ್ಲ. ಕಾರಣಿಕನಾಗುತ್ತಾನೆ. ಅವರಿಂದ ಉಪರಾಷ್ಟ್ರಪತಿ ಸ್ಥಾನವನ್ನಲಂಕರಿಸಿದ್ದು ವೀರಶೈವರ ರಾಜಕೀಯ ಇತಿಹಾಸದಲ್ಲಿಯೇ ಒಂದು ಸುವರ್ಣ ಸಂಪುಟ. ಇದರಿಂದ ಕರ್ನಾಟಕದ ಘನತೆಗೌರವದ ಕಳಸ ನಭಕ್ಕೇರಿದೆ. ಇಂದಿಗೂ ಬಸವಣ್ಣನವರ ನೈಷ್ಠಿಕ ಭಕ್ತರಾಗಿ 'ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' ಎಂಬ ಬಸವ ವಚನವನ್ನು ಕ್ರಿಯಾಚರಣೆಯಲ್ಲಿ ತಂದು, ರಾಷ್ಟ್ರದೇವಿಯ ಪೂಜೆಗೆ ಅರ್ಹರಾಗಿರುವ ಶ್ರೀ ಜತ್ತಿ ರಾಷ್ಟ್ರಪತಿಗಳಾಗಿ ಮಾತ್ರವಲ್ಲ, ಇಂದಿಲ್ಲ ನಾಳೆ ರಾಷ್ಟ್ರಪತಿಗಳಾಗಿ ಶೋಭಿಸುತ್ತಾರೆ. ಎಂಬುದು ನಿಸ್ಸಂಶಯದ ಮಾತು. ನಮ್ಮ ಮಠದ ವಚನ ಕರ್ತೃಗಳಾದ ಷಣ್ಮುಖ ಶಿವಯೋಗಿಗಳವರ ಈ ವಚನ ಅವರ ವ್ಯಕ್ತಿತ್ವಕ್ಕೆ ಸಂಕೇತವಾಗಿದೆ. ಅವರ ಮುಂದಣ ಪದವಿಗೆ ಪಲ್ಲವಿಯಾಗಿದೆ.

ನುಡಿಯಲ್ಲಿ ಕರ್ಕಶವಿಲ್ಲದೆ ನಡೆಯಲ್ಲಿ ಬೀಸರವೋಗದೆ !
ಹಿಡಿದ ಭಕ್ತಿಯ ಕಡೆತನಕ ಬಿಡದೆ !
ಬಡತನ, ಎಡರು, ಕಂಟಕ ಬಂದಲ್ಲಿ ಚಿಂತೆಯಿಂದ ಕಾಂತಿಗುಂದದೆ !
ಅಡಿಗಡಿಗೆ 'ಶಿವ' ಎಂಬ ನುಡಿಯ ಮರೆಯದೆ !
ನಡೆವ ಸದ್ಭಕ್ತರಿಗೆ ಬೇಡಿದ ಪದವಿಯನ್ನೀವ ನಮ್ಮ ಅಖಂಡೇಶ್ವರಾ.



## ಸಮ್ಯಗ್ ಜ್ಞಾನ

ಮುಂದನರಿಯದೆ ಮತಿಗೆಟ್ಟ ಮರಳು ಮನವೇ !
ಕಾಲ ಕಾಮರ ಗೆಲುವ ಉಪಾಯವಾವುದೆಂದು,
ತಲೆಯೂರಿ ನೆಲವ ಬರೆಯುತಿಪ್ಪರೇ ?
ಮೊಲ ಜಂಬುಕಂಗಳ ಹುಯ್ಯಲಿಗೆ
ಆನೆ ಫೌಜನಡ್ಡ ಮಾಡಬೇಕೆ ?
ಕಾಲಕಾಮರ ಗೆಲುವುದಕೆ
ಆಲೋಚನೆ ಏತಕಯ್ಯಾ ಮರುಳು ಮನವೆ ?
ಪಂಚೇಂದ್ರಿಯಂಗಳು ಪಂಚಬ್ರಹ್ಮವನಪ್ಪಿ
ಅಗಲದಿಪ್ಪುದೆ ಪಂಚಬಾಣನ ಹರಣದಕೇಡು
ನಾನು ಪರಬ್ರಹ್ಮದಲ್ಲಿಯೇ ಜನನ,
ಎನ್ನ ತನುಮನಧನಂಗಳ ಪರಬ್ರಹ್ಮಕ್ಕೆ ಮಾರುಗೊಟ್ಟೆನು;
ಎಂಬ ನಿಚ್ಚಟದ ನುಡಿಯೆ ಕಾಲನ ಗಂಟಲ ಗಾಣ,
ಅದು ಹೇಗೆಂದೊಡೆ, ಲಿಂಗಾಂಕಿತವಾದ ವೃಕ್ಷಂಗಳ
ಮಂಡಲಾಧಿಪತಿ ಮೊದಲಾಗಿ ಮುಟ್ಟಲಮ್ಮ
ತನುಜನ ಆಡು ಮುರಿದಡೆ ಹೀನವಾರಿಗಪ್ಪುದಯ್ಯ ?
ಈ ಪ್ರಕಾರದ ಸಮ್ಯಗ್‌ಜ್ಞಾನದಿಂದ ನಿಮ್ಮ ಶರಣರು
ಕಾಲಕಾಮರ ಗೆಲಿದರಯ್ಯ ಘನಲಿಂಗಿಯ ಮೋಹದ
ಚೆನ್ನಮಲ್ಲಿಕಾರ್ಜುನಾ.

— ಘನಲಿಂಗದೇವರು



ಶ್ರೀ ಬಿ. ಡಿ. ಜತ್ತಿ ಅವರು ೧೯೭೧ ರಲ್ಲಿ 'ವಿಶ್ವಕಲ್ಯಾಣ' ಕಾರ್ಯಾಲಯಕ್ಕೆ ಭೇಟಿ ನೀಡಿದಾಗ ಪತ್ರಿಕೆ ಸಂಪಾದಕ ಹಾಗೂ ಈ ಸಂಭಾವನಾ ಗ್ರಂಥದ ಸಂಪಾದಕ ಶ್ರೀ ಬಿ· ಮಹಾದೇವಪ್ಪನವರು ಮಾಲಾರ್ಪಣೆ ಮಾಡಿ ವಂದಿಸುತ್ತಿದ್ದಾರೆ.



ಒರಿಸ್ಸ ರಾಜ್ಯ ಪಾಲರಾಗಿ ಪ್ರತಿಜ್ಞಾ ವಿಧಿ ಸ್ವೀಕರಿಸುತ್ತಿರುವುದು.



"ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಧರ್ಮಪತ್ನಿ ಶ್ರೀಮತಿ ಸಂಗವ್ವ ಜತ್ತಿ ಅವರೊಂದಿಗೆ ಶ್ರೀ ಬಿ. ಡಿ. ಜತ್ತಿ ಅವರು



ಬಸವ ಸಮಿತಿ ಪಾದಯಾತ್ರೆಯ (೧೯೬೬) ಕಲ್ಬುರ್ಗಿ ಪ್ರಚಾರ ಸಭೆಗೆ ಆಗಮಿಸುತ್ತಿರುವ
ಆಗಿನ ರಾಜ್ಯಪಾಲ ಶ್ರೀ ವಿ. ವಿ. ಗಿರಿ ಅವರನ್ನು ಬರಮಾಡಿಕೊಳ್ಳಲಾಗುತ್ತಿದೆ.

# ಭವ್ಯ ಬದುಕು

ಬಂದುದನು ಬಂದಂತೆ ಒಪ್ಪಿದಿರಿ ಅಪ್ಪಿದಿರಿ
ಅರಿವು – ಕ್ರಿಯೆಯಿಂದದನು ಸಿಂಗಾರಗೈದಿರಿ:

"ಶಿವ" ದ ಕುಡಿಯೊಡೆಯಿತ್ತು
ಹೂ ಹಣ್ಣು ತಳೆಯಿತ್ತು

ನಾಡ ಮೈಯಲಿ ಬೆಳಕು–ನೆತ್ತರನು ಹರಿಯಿಸಿತು
ಕೆಚ್ಚು ನಚ್ಚಿನ ನವ್ಯ ಮಾರ್ಗವನು ನಿರ್ಮಿಸಿತು

● ಶಾಂತರಸ

● [ ಶ್ರೀ ಶಾಂತರಸ ರಾಯಚೂರು ಅವರು ಹೈದರಾಬಾದ ಕರ್ಣಾಟಕದ ಪ್ರಾತಿನಿಧಿಕ ಕವಿಗಳು. ಅವರು ಏನೇ ಬರೆಯಲಿ ಅಲ್ಲಿ ಕಲ್ಯಾಣದ ಸಂಸ್ಕೃತಿಯ ಸುವಾಸನೆ ಇರುತ್ತದೆ- ಲಿಂಗಾನುಸಂಧಾನಕ್ಕೆ ಕುಳಿತ ವ್ಯಕ್ತಿಯೂ ಲಿಂಗವೂ ಒಂದೇ ಆಕಾರದಲ್ಲಿರುತ್ತಾರೆ ಎಂದು ಶ್ರೀ ಬಿ. ಡಿ. ಜತ್ತಿ ಅವರು ಪ್ರತಿಪಾದಿಸುವುದುಂಟು. ಶ್ರೀ ಶಾಂತರಸ ಅವರು ಲಿಂಗಾಕಾರದಲ್ಲಿ ಕವನ ರಚಿಸಿ ಶ್ರೀ ಜತ್ತಿ ಅವರ ಬದುಕು ಚಿತ್ರಿಸಿದ್ದಾರೆ. – ಸಂ. ]

# ಪ್ರಾಮಾಣಿಕತೆಯ ಪ್ರತಿಮೂರ್ತಿ

● ಬಸವರಾಜ ಕಟ್ಟಿಮನಿ

● [ ಯಾರನ್ನಾದರೂ ಮೆಚ್ಚಿಸಬಹುದು; ನ್ಯಾಯ ನಿಷ್ಠುರಿ ದಾಕ್ಷಿಣ್ಯಪರನಲ್ಲದ ಶ್ರೀ ಬಸವರಾಜ ಕಟ್ಟಿಮನಿಯವರನ್ನು ಮೆಚ್ಚಿಸುವುದು ಬಹಳ ಕಷ್ಟವಾದುದು. ಶ್ರೀ ಕಟ್ಟಿಮನಿಯವರು ಶ್ರೀ ಬಿ. ಡಿ. ಜತ್ತಿಯವರ ಬಗ್ಗೆ ಹೃದಯತುಂಬಿ ಬರೆದಿದ್ದಾರೆಂದರೆ ಶ್ರೀ ಜತ್ತಿ ಅವರಲ್ಲಿ ಅಸಾಮಾನ್ಯ ವ್ಯಕ್ತಿತ್ವ ಇದೆಯೆಂದೇ ಭಾವಿಸಬೇಕಾಗುತ್ತದೆ. ಇತರ ರಾಜಕಾರಣಿಗಳಿಗೂ ಶ್ರೀ ಜತ್ತಿ ಅವರಿಗೂ ಹೋಲಿಸಿ ಶ್ರೀ ಬಸವರಾಜ ಕಟ್ಟಿಮನಿಯವರು ಬಹಳ ಸುಂದರವಾದ ಲೇಖನವನ್ನು ಬರೆದಿದ್ದಾರೆ. – ಸಂ. ]

" ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ, "
—ಎಂಬುದು ಬಸವಣ್ಣನವರ ಒಂದು ವಚನ.

ಉಪರಾಷ್ಟ್ರಪತಿ ಶ್ರೀ ಬಸವಪ್ಪ ದಾನಪ್ಪ ಜತ್ತಿಯವರ ನೆನಪು ಬಂದಾಗಲೆಲ್ಲ, ಬಸವಣ್ಣನವರ ಈ ವಚನವೂ ಥಟ್ಟನೆ ನೆನಪಿಗೆ ಬರುತ್ತದೆ.

" ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, " ಎಂಬುದು ಬಸವಣ್ಣನವರ ಇನ್ನೊಂದು ವಚನ.

ಶ್ರೀ ಜತ್ತಿಯವರನ್ನು ನೆನೆದಾಗಲೆಲ್ಲ ಬಸವಣ್ಣನವರ ಈ ವಚನವೂ ನೆನಪಿಗೆ ಬರುತ್ತದೆ.

ಶ್ರೀ ಜತ್ತಿಯವರ ನಡೆ–ನುಡಿಗಳನ್ನು ಕಂಡಾಗ, ಕೇಳಿದಾಗ ಬಸವಣ್ಣನವರ ಅನೇಕ ವಚನಗಳು ನೆನಪಿಗೆ ಬರುತ್ತವೆ.

ಬಸವಣ್ಣನವರ, ಹಾಗೂ ಇನ್ನಿತರ ಶರಣ–ಶರಣೆಯರ ವಚನಗಳನ್ನು ಕಂಠಪಾಠ ಮಾಡಿದವರು ಅನೇಕರಿರಬಹುದು, ಅವರ ಬಗೆಗೆ ಗಂಟೆಗಳಕಾಲ

ಭಾಷಣ ಮಾಡಬಲ್ಲವರು ಅನೇಕರಿರಬಹುದು, ಕುಳಿತಾಗ, ನಿಂತಾಗ, ನಡೆದಾಗ ಉಂಡಾಗ, ಕೊಂಡಾಗ, "ಬಸವಾ! ಬಸವಾ" ಎಂದು ಜಪಿಸುವವರೂ ಅನೇಕರಿರಬಹುದು.

ಆದರೆ, ಬಸವಣ್ಣನವರ ವಚನಗಳನ್ನು ಅರಿತು, ಅರಗಿಸಿಕೊಂಡು, ಅನುದಿನದ ವ್ಯವಹಾರದಲ್ಲೂ ಸಹ ಅಣ್ಣನವರ ಆದೇಶದಂತೆ ನಡೆದುಕೊಂಡ ಬರುವವರು ವಿರಳ. ಅಂಥ ಕೆಲವೇ ವಿರಳ ವ್ಯಕ್ತಿಗಳಲ್ಲಿ ನಮ್ಮ ಜತ್ತಿಯವರೂ ಒಬ್ಬರು.

೧೯೩೦-೩೧ ರಿಂದಲೂ ನಾನು ಅವರನ್ನು ಸಮೀಪದಿಂದ ನೋಡುತ್ತ ಬಂದಿದ್ದೇನೆ. ಅವರು ಸಾಧಾರಣ ಶಾಸಕರಾಗಿದ್ದಾಗ, ಪಾರ್ಲಿಮೆಂಟರಿ ಸೆಕ್ರೆಟರಿಯಾಗಿದ್ದಾಗ, ಮುಖ್ಯಮಂತ್ರಿಯಾಗಿದ್ದಾಗ, ಮಂತ್ರಿಯಾಗಿದ್ದಾಗ, ರಾಜ್ಯಪಾಲರಾಗಿದ್ದಾಗ ನೋಡುತ್ತ ಬಂದಿದ್ದೇನೆ. ಅವರು ಏರುತ್ತ-ಏರುತ್ತ ಹೋಗಿರುವರಲ್ಲದೆ ಇಳಿಯುತ್ತ-ಇಳಿಯುತ್ತ ಹೋಗಿಲ್ಲ. ಕಿರಿಯವರಾಗಿದ್ದುಕೊಂಡೇ ಅವರು ಹಿರಿಯರಾಗಿದ್ದಾರೆ. ಎಂಥ ಎತ್ತರದ ಸ್ಥಾನಕ್ಕೇರಿದರೂ ತಮ್ಮ ಮೂಲಗುಣವಾದ ಸದ್ವಿನಯವನ್ನು ಅವರು ತ್ಯಜಿಸಿಲ್ಲ.

ಈಗ ಅವರು ಉಪರಾಷ್ಟ್ರಪತಿ! ಅದು, ರಾಷ್ಟ್ರದ ದ್ವಿತೀಯ ಅತ್ಯುಚ್ಚ ಪದ! ಅವರನ್ನು ನೋಡಿದರೆ ಎಲ್ಲರಿಗೂ ಕೈಮುಗಿಯಬೇಕು, ಗೌರವಿಸಬೇಕು ಆದರೆ, ಜತ್ತಿಯವರು ಮಾತ್ರ ಈಗಲೂ ಜತ್ತಿಯವರೇ! ಅವರನ್ನು ನೋಡಿ ನಾವು ಕೈ ಜೋಡಿಸುವ ಮುನ್ನವೇ ಅವರೇ ಕೈಜೋಡಿಸುತ್ತಾರೆ! ಕುಶಲ ವಿಚಾರಿಸುತ್ತಾರೆ! ನೂರಾರು ಜನರ ನೆರವಿಯಲ್ಲಿದ್ದ ಗೆಳೆಯರನ್ನೂ ಥಟ್ಟನೆ ಗುರುತಿಸಿ, ತಾನೇ ಅವರ ಹತ್ತಿರ ಹೋಗಿ ಮಾತನಾಡಿಸುತ್ತಾರೆ.

ಇದೀಗ ಬಸವಪಥ! ಬಸಪ್ಪ ಜತ್ತೀ ಪಥ!

"ಇದು ಪಕ್ಕಾ ರಾಜಕಾರಣಿಯ ತಂತ್ರ!" ಎಂದು ಕುಹಕಾಡುವವರೂ ಇಲ್ಲದಿಲ್ಲ. ಆದರೆ, ಇಂಥ ಅಪೂರ್ವದ ನಡವಳಿಕೆ "ತಂತ್ರ"ವಾಗಿ ಬರಲು ಶಕ್ಯವೇ ಇಲ್ಲ.

ನಾನು ಅನೇಕ ರಾಜಕಾರಣಿಗಳನ್ನು ಸಮೀಪದಿಂದ, ದೂರದಿಂದ ನೋಡಿದ್ದೇನೆ; ಅವರ ವ್ಯಕ್ತಿತ್ವಗಳ ವಿಷಯಗಳನ್ನು ಅಭ್ಯಸಿಸಿದ್ದೇನೆ. ಹಲವರು 'ಅತಿ ವಿನಯ' ಪ್ರದರ್ಶಿಸುವುದೂ ಇದೆ. ಅದು 'ತಂತ್ರ'ವೆಂಬುದು ಸಹಜ

ವಾಗಿ ತಿಳಿಯುತ್ತದೆ. ಬಾಯಿಯನ್ನು ಪೂರ್ತಿಯಾಗಿ ತೆರೆದ, ಮೂವತ್ತೆರಡೂ ಹಲ್ಲು ತೋರಿಸುತ್ತ ವಿಶಾಲವಾಗಿ ನಗುವುದನ್ನು ಅಭ್ಯಾಸ ಮಾಡಿಕೊಂಡವರೂ ಇದ್ದಾರೆ. ಮಾತುಮಾತಿಗೊಮ್ಮೆ ಹುಸಿನಗೆ ಬೀರುವವರೂ ಇದ್ದಾರೆ. ಅವರ ನಗೆಮೊಗದಿಂದ ಯಾರೂ ಮೋಸ ಹೋಗುವುದಿಲ್ಲ. ಅದೆಲ್ಲ ಕಪಟ ನಾಟಕವೆನ್ನುವುದು ಎಂಥ ಧಡ್ಡರಿಗೂ ತಿಳಿದುಹೋಗುತ್ತದೆ.

ಜತ್ತಿಯವರಿಗೆ ಮಾತ್ರ ಹೀಗೆ, ಕೃತ್ರಿಮವಾಗಿ ನಗುವುದಕ್ಕೆ ಬರುವುದಿಲ್ಲ. ಅವರೂ ನಗುತ್ತಾರೆ, ನಿಜ. ಹಿತವಾಗಿ, ಮಿತವಾಗಿ. ಅಹಹಾ ! ಎಂದು ಬಾಯಿ ತೆರೆದು, ಹೊಹೊಹೋ ಎಂದ ನಕ್ಕು, ಜನರನ್ನಾಕರ್ಷಿಸುವ ಅಗ್ಗತನಕ್ಕೆ ಅವರು ಎಂದೂ ಇಳಿದಿಲ್ಲ. ಅವರು ಏರುತ್ತ ಏರುತ್ತ ಹೋಗಲು, ಅವರ ಈ ಅಕೃತ್ರಿಮ ಸ್ವಭಾವವೂ ಕಾರಣ; ಮುಖ್ಯಕಾರಣ.

ರಾಷ್ಟ್ರದ ಶ್ರೇಷ್ಠ ನಾಯಕರು ಶ್ರೀ ಜತ್ತಿಯವರನ್ನು ಪೂರ್ತಿಯಾಗಿ ನಂಬಿಕೊಂಡಿದ್ದಾರೆ. ಶ್ರೀ ಜತ್ತಿಯವರ ಸರಳತೆ, ಸಹಜತೆ, ನಿಷ್ಕಪಟತೆಗಳೇ ಇದಕ್ಕೆ ಕಾರಣ. ತಮ್ಮನ್ನು ನಂಬಿದವರಿಗೆ ಅವರೆಂದೂ ಎರಡುಬಗೆಯುವವರಲ್ಲ; ಸ್ವಾರ್ಥಕ್ಕಾಗಿ ಕೀಳು ರಾಜಕೀಯ ನಡೆಸುವವರಲ್ಲ.

* * * * *

೧೯೫೦ ನೆಯ ವರ್ಷವಿರಬಹುದು.

'ವಿಶಾಲ ಮೈಸೂರಿನ' ರಚನೆಯಾಗಿ ಇನ್ನೂ ವರ್ಷವಾಗಿರಲಿಲ್ಲ.

ಶ್ರೀ ಜತ್ತಿಯವರು ಆಗ ಸಾಮಾನ್ಯ ಎಂ. ಎಲ್. ಎ. ಶ್ರೀ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಅವರಿಗೆ ಸ್ಥಾನ ಲಭಿಸಿರಲಿಲ್ಲ. ಮಂತ್ರಿಪದಕ್ಕಾಗಿ ಪ್ರಯತ್ನಿಸಿ ನಿರಾಶರಾಗಿದ್ದ ಹಳ್ಳಿಕೇರಿ ಗುದ್ಲೆಪ್ಪನವರು ಘಟಪ್ರಭಾದಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ನನಗೂ ಒಂದು ಶಸ್ತ್ರ ಚಿಕಿತ್ಸೆಯಾಗಬೇಕಿದ್ದಿತಾದುದರಿಂದ ನಾನೂ ಅಲ್ಲಿಗೆ ಹೋಗಿರುತ್ತಿದ್ದೆ. ಅಂಥ ಒಂದು ಸಂದರ್ಭದಲ್ಲಿ, ಘಟಪ್ರಭಾ ರೈಲುನಿಲ್ದಾಣದ ಮೇಲೆ ಶ್ರೀ ಜತ್ತಿಯವರ ಭೆಟ್ಟಿಯಾಗಿದ್ದಿತು.

ಅದಕ್ಕೆ ಮೊದಲು ನಾನು ಅವರನ್ನು ನೋಡಿದ್ದೆನು ಒಂದೇ ಒಂದು ಬಾರಿ. ಶ್ರೀ ಜತ್ತಿಯವರನ್ನು ಒಮ್ಮೆ ನೋಡಿದವರು ಅನಂತರ ಅವರನ್ನು ಮರೆಯುವುದಿಲ್ಲ. ಅವರ ವ್ಯಕ್ತಿತ್ವವೇ ಹಾಗಿದೆ.

ಆದರೆ, ಒಂದುಬಾರಿ ಮಾತ್ರ ನೋಡಿದ ನನ್ನನ್ನು ಅವರು ಗುರುತಿಸುವರೋ ಇಲ್ಲವೋ ಎಂದು ಅನುಮಾನಕ್ಕೊಳಗಾಗಿದ್ದ ನನ್ನನ್ನು ಅವರು ಗುರುತಿಸಿಯೇ ಬಿಟ್ಟರು !

ಅವರು ಒಂದೆರಡುದಿನ ಮುಖಕ್ಷೌರ ಮಾಡಿಕೊಂಡಿರಲಿಲ್ಲವೋ ಏನೋ ? ಗಡ್ಡ ಹುಲುಸಾಗಿ ಬೆಳೆದಿತ್ತು. ಅವರು ರೈಲಿನಿಂದಿಳಿದು ಬರುತ್ತಲೂ—

" ನಮಸ್ಕಾರರೀ, " ಎಂದು ಹೇಳಿದೆ.

" ನಮಸ್ಕಾರ. ನಮಸ್ಕಾರ ! " ಎಂದು ಎರಡು ಬಾರಿ ನಮಸ್ಕರಿಸಿದರು ಜತ್ತಿಯವರು ! ಅದೂ ಬಸವಣ್ಣನವರ ರೀತಿಯೇ !

" ನನ್ನ ಗುರುತಾಯಿತೇ ? " ಎಂದು ಕೇಳಿದೆ.

ಅವರು ಮೆಲ್ಲಗೆ ನಕ್ಕರು. ಬಸವರಾಜ ಕಟ್ಟಿಮನಿಯವರಲ್ಲವೇ ? ಎಂದರು. ನಾನು ಥಣ್ಣಗಾದೆ ! ಜತ್ತಿಯವರ ವಿಶಿಷ್ಟ ಗುಣಗಳ ಪರಿಚಯವಾಗತೊಡಗಿದುದು ಅಂದಿನಿಂದ.

## ಅಜ್ಞಾನದ ಫಲ

ಮುಂಬಯಿ ರಾಜ್ಯದ ಮಂತ್ರಿಮಂಡಲದಲ್ಲಿ ಉಪಮಂತ್ರಿಯೋ ಇನ್ನೇನೋ ಆಗಿದ್ದವರೊಬ್ಬರ ( ಅವರೀಗ ಕೈಲಾಸ ( ? ) ವಾಸಿಗಳು ! ) ಅಹಂಕಾರದ ವರ್ತನೆಯನ್ನೂ ಜತ್ತಿಯವರ ಸರಳತೆಯನ್ನೂ ಹೋಲಿಸಿ ನೋಡಿದಾಗ, ಜತ್ತಿಯವರ ಬಗೆಗೆ ಆದರ ಬೆಳೆಯುತ್ತ ಹೋಯಿತು. ಈ " ಕೈಲಾಸವಾಸಿ "ಗಳು ನಿಜಲಿಂಗಪ್ಪ ಸಂಪುಟದಲ್ಲಿ ಮಂತ್ರಿಯಾಗಿದ್ದರು. ೧೯೫೧ ರಿಂದಲೂ ಅವರಿಗೂ ನನಗೂ ಚೆನ್ನಾಗಿ ಪರಿಚಯ. ಆದರೆ, ಮಂತ್ರಿಯಾದ ಮೇಲೊಮ್ಮೆ ಅವರು ಬೆಳಗಾವಿಗೆ ಬಂದಿದ್ದಾಗ, ನನ್ನನ್ನು ನೋಡಿ—

" ನೀವು ? ನೀವು ? ನಿಮ್ಮನ್ನೆಲ್ಲೋ ನೋಡಿದ ಹಾಗೆ ನೆನಪು.... ಎಲ್ಲಿ ಅಂತ ಗೊತ್ತಾಗುತ್ತಾ ಇಲ್ಲ........ ! ! " ಎಂದು ರಾಗ ಎಳೆದಿದ್ದರು.

" ಹಿಂದಿನ ಜನ್ಮದಲ್ಲಿ ನೋಡಿರಬೇಕು ಬಿಡಿ! " ಎಂದು ನಾನು ನಗುತ್ತಲೆ ಹೇಳಿದ್ದೆ !

ಮಂತ್ರಿಗಳಾಗುವವರಲ್ಲಿ ಇಂಥ ದುರಹಂಕಾರದ ಮೂರ್ತಿಗಳೇ ಹೆಚ್ಚುಜನರು. ಅವರ ಆ ಅಹಂಕಾರವೂ ಸಹ ಅಜ್ಞಾನದ ಫಲ. ಮಂತ್ರಿಪದ ಶಾಶ್ವತವಲ್ಲ ಎಂಬ ಜ್ಞಾನವಿದ್ದವರು ಆ ರೀತಿ ವರ್ತಿಸುವುದಿಲ್ಲ.

ಇದಾವುದೂ ಶಾಶ್ವತವಲ್ಲ ಎಂಬುದು ಚೆನ್ನಾಗಿಯೇ ಗೊತ್ತು ಜತ್ತಿಯವರಿಗೆ. ಎಂತಲೇ, ಅವರ ಹತ್ತಿರ ಅಹಂಕಾರ–ಮಮಕಾರ ಸುಳಿಯುವುದಿಲ್ಲ.

* * * * *

ಶ್ರೀ ಜತ್ತಿಯವರು ಮುಖ್ಯ ಮಂತ್ರಿಯಾಗಿದ್ದಾಗ, ಕೆಲವು ಸ್ನೇಹಿತರ ಜೊತೆಯಲ್ಲಿ "ಬಾಲಬ್ರೂಯಿ" ಗೆ ಹೋಗಿದ್ದೆ.

ಬೆಳಗಿನ ಒಂಬತ್ತು ಗಂಟೆಯ ಸಮಯ. ದಿವಾನಖಾನೆಯಲ್ಲಿ ಮೂವತ್ತು ನಲವತ್ತು ಜನ ತುಂಬಿಕೊಂಡಿದ್ದರು. ಉತ್ತರದ ಮೂಲೆಯಲ್ಲಿದ್ದ ಸೋಫದಲ್ಲಿ ಕುಳಿತಿದ್ದ ಮುಖ್ಯಮಂತ್ರಿ ಶ್ರೀ ಜತ್ತಿಯವರು, ಭೆಟ್ಟಿಗೆ ಬಂದವರನ್ನು ಸ್ವಾಗತಿಸುವುದಕ್ಕಾಗಿ ಮತ್ತೆ ಮತ್ತೆ ಮೇಲಕ್ಕೇಳುತ್ತಿದ್ದರು, ಕೈ ಮುಗಿಯುತ್ತಿದ್ದರು, ಕೂಡ್ರುತ್ತಿದ್ದರು, ಮತ್ತೆ ಏಳುತ್ತಿದ್ದರು, ಮತ್ತೆ ಕೂಡ್ರುತ್ತಿದ್ದರು. ಆಗಾಗ, ಅತ್ತ ಇತ್ತ ಓಡಾಡುತ್ತಿದ್ದರು.

ಜನ ಹಾಗೇ ಬರುತ್ತಿದ್ದರು; ಹೋಗುತ್ತಿದ್ದರು ಜಂಗಮರಂತೆ. ಮೊದಲೇ ಸಮಯ ಗೊತ್ತುಪಡಿಸಿಕೊಂಡು ( by appointment ) ಬಂದವರು ಇಲ್ಲವೇ ಇಲ್ಲ. ಮುಖ್ಯ ಮಂತ್ರಿಯೆಂದಮೇಲೆ ರಾಜ್ಯದ ಪ್ರಥಮ ಭಕ್ತ–ಇನ್ನುಳಿದವರೆಲ್ಲರೂ ಕೂಡಲ ಸಂಗನ ಅಂಶಗಳು ! ಎಂದು ಶ್ರೀ ಜತ್ತಿಯವರ ನಂಬುಗೆ. ಅವರು ಮುಖ್ಯ ಮಂತ್ರಿಯಾಗಿರುವವರೆಗೂ ಅದೇ ಭಾವನೆಯಿಂದ ನಡೆದುಕೊಂಡರು. ಆ ದಿನಗಳಲ್ಲಿ ಅವರಿಗೆ ಸ್ನಾನಕ್ಕೆ ಸಹ ಬಿಡುವು ಸಿಗುತ್ತಿರಲಿಲ್ಲ. ಅವರು ಯಾವಾಗ ಊಟ ಮಾಡುತ್ತಿದ್ದರೋ? ಯಾವಾಗ ಮಲಗುತ್ತಿದ್ದರೋ ? ಎಷ್ಟು ತಾಸು ನಿದ್ರಿಸುತ್ತಿದ್ದರೋ ಅವರಿಗೂ ತಿಳಿದಿರಲಾರದು. ಅವರ ನಿವಾಸಕ್ಕಾಗಲಿ, ಕಚೇರಿಗಾಗಲಿ ನಾವು ಹೋದಾಗಲೆಲ್ಲ. ಜನ ಜಂಗುಳಿ ತುಂಬಿರುತ್ತಿದ್ದರು. ಅವರ ಯಾವುದಾದರೊಂದು ಸಾರ್ವಜನಿಕ ಸಭೆಗೆ ಹೋದರೆ, ಅಲ್ಲೂ ಹಾಗೆಯೇ ವಿಧಾನಸಭೆ, ವಿಧಾನ, ಪರಿಷತ್ತು, ಪತ್ರಿಕಾಗೊಷ್ಟಿ, ಎಲ್ಲಕಡೆಗಳಲ್ಲೂ ಹಾಗೆಯೇ ! ಮುಖ್ಯ ಮಂತ್ರಿಯಾಗುವ ಮೊದಲು ತಕ್ಕ ಮಟ್ಟಿಗೆ ಮೈ ತುಂಬಿಕೊಂಡು ದುಂಡಗಿದ್ದ ಶ್ರೀ ಜತ್ತಿಯವರು ಆ ಸ್ಥಾನದಿಂದ ನಿವೃತ್ತರಾಗುವುದರೊಳಗಾಗಿ ಕಡ್ಡಿ ಕಡ್ಡಿಯಾಗಿ ಹೋಗಿದ್ದರು. ಮುಖವೆಲ್ಲ ಬಿಳಿಚಿಕೊಂಡಿದ್ದಿತು.

## ಎಲ್ಲ ಶುದ್ಧ

ಮುಖ್ಯ ಮಂತ್ರಿಗಳಾಗಿ ಮೆರೆದವರು, "ಏನೇನೋ ಮಾಡಿದರು, ಎಷ್ಟೋ ಷ್ಟೋಮಾಡಿದರು" ಎನ್ನುವ ವದಂತಿಗಳುಂಟು. ಶ್ರೀ ಜತ್ತಿಯವರ ಬಗೆಗೆ ಮಾತ್ರ ಅವರ ವೈರಿಗಳೂ ಸಹ ಇಂಥ ಮಾತು ಆಡುವುದಿಲ್ಲ. ಅವರ ಕೈ ಬಾಯಿ, ಮನಸ್ಸು, ಹೃದಯ – ಎಲ್ಲ ಶುದ್ಧ.

ವೈಯಕ್ತಿಕ ಚಾರಿತ್ರ್ಯದ ವಿಚಾರದಲ್ಲಿ ದಿವಂಗತ ಲಾಲಬಹದ್ದೂರ್ ಶಾಸ್ತ್ರಿಯವರಿಗೂ ಶ್ರೀ ಜತ್ತಿಯವರಿಗೂ ತುಂಬಾ ಹೋಲಿಕೆಯಿದೆ.

ಅವರು ಮುಖ್ಯ ಮಂತ್ರಿಪದ ತ್ಯಜಿಸಿದ ಮೇಲೊಂದು ಬಾರಿ ಅವರ ಮನೆಗೆ ಹೋಗಿದ್ದೆ. ಬಾಗಿಲಿನಲ್ಲಿ, ಹರಿದ ನೆಲಗಂಬಳಿ. ಅದನ್ನೆಡವಿ, ಬೀಳುವುದರಲ್ಲಿದ್ದ ನನ್ನನ್ನು ಜತ್ತಿಯವರೇ ಬಂದು ಹಿಡಿದುಕೊಂಡರು.

ಇನ್ನು ಹಲವರು ಮಾಜೀ ಮಂತ್ರಿಗಳ, ಮಾಜೀ ಮುಖ್ಯಮಂತ್ರಿಗಳ ಇಂದಿನ ವೈಭವದ ಜೀವನವನ್ನು ನೋಡಿದ್ದೇನೆ; ನೋಡಿ ದಂಗಾಗಿ ಹೋಗಿದ್ದೇನೆ! ಒಬ್ಬ ಮಾಜೀ ಮುಖ್ಯಮಂತ್ರಿಯ ಇಂದಿನ ವಾಸಸ್ಥಾನದ ಅಲಂಕರಣಕ್ಕೇ ಲಕ್ಷಾಂತರ ರೂಪಾಯಿ ಖರ್ಚಾಗಿರಬಹುದು........

ಆದರೆ, ಜತ್ತಿಯವರ ಮನೆಯೋ........

ಅವರಂತೆಯೇ ಸಾದಾ.... ಅವರಂತೆಯೇ....

ಬಸವ ಸಮಿತಿ.... ಬಸವ ಭವನ....ಸರಳ....

## ದಿವ್ಯ ಕಲಾಕೃತಿ

ಶ್ರೀ ಜತ್ತಿಯವರು ಧೃಢನಿರ್ಧಾರ ಮಾಡಿ, ಮುಂದಾಗಿ ನಿಲ್ಲದಿದ್ದರೆ ಇಂದು ಬಸವ ಸಮಿತಿಯೂ ಇರುತ್ತಿರಲಿಲ್ಲ, ಬಸವ ಭವನವೂ ಇರುತ್ತಿರಲಿಲ್ಲ. ಆ ಭವ್ಯ ಭವನವಂತೂ ಸಂಪೂರ್ಣವಾಗಿ ಜತ್ತಿಯವರ ನಿರ್ಮಾಣ. ಹನ್ನೆರಡನೆಯ ಶತಮಾನದ ಆ ಸಮಾಜವಾದಿಯ ಸ್ಮಾರಕವಾಗಿ ಕರ್ನಾಟಕದ ರಾಜಧಾನಿಯಲ್ಲಿ ಇಪ್ಪತ್ತನೆಯ ಶತಮಾನದ ಸಮಾಜವಾದಿ ರೂಪಿಸಿದ ದಿವ್ಯ ಕಲಾಕೃತಿ ಬಸವಭವನ !

ಜತ್ತಿಯವರು ಸಮಾಜವಾದಿಯೆ ?

ಸಮಾಜವಾದಿಯಲ್ಲವಾದರೆ ಇನ್ನೇನು ?

ಬಸವಣ್ಣನವರು ಮಹಾಭಕ್ತರು, ಮಹಾ ಶರಣರು : ನಿಜ–ಆದರೆ, ಅವರ ಹೆಸರು ಉಳಿದದ್ದು, ಉಳಿಯುವುದು ಅವರ ಕ್ರಾಂತಿಕಾರಿ ಕಾರ್ಯಗಳಿಂದ. ಆಧ್ಯಾತ್ಮಿಕ ಅಂಶವೊಂದನ್ನು ಬಿಟ್ಟರೆ ಕಾರ್ಲ್‌ಮಾರ್ಕ್ಸ್‌ನಿಗೂ ಬಸವಣ್ಣನವರಿಗೂ ಬೇರಾವ ವ್ಯತ್ಯಾಸವೂ ಇಲ್ಲ. ಯೇಸುಕ್ರಿಸ್ತ, ಗೌತಮ ಬುದ್ಧರಂತೆ ಬಸವಣ್ಣ

ನವರೂ ಮಾನವತಾವಾದಿ, ಅರ್ಥಾತ್ – ಸಮಾಜವಾದಿ. ಅವರು ಹಮ್ಮಿದ್ದ ಕ್ರಾಂತಿ ಅವರನ್ನೇ ಬಲಿತೆಗೆದುಕೊಂಡಿತು, ಆ ಮಾತು ಬೇರೆ.

ಬಸವಣ್ಣನವರಂತೆ ಜತ್ತಿಯವರೂ ನಿಯಮಿತವಾಗಿ ಲಿಂಗಪೂಜೆ ಮಾಡುತ್ತಾರೆ, ವಿಭೂತಿ ಧರಿಸುತ್ತಾರೆ. ರುದ್ರಾಕ್ಷಿಮಾಲೆಯನ್ನು ಧರಿಸುವರೋ ಏನೋ ? ತಿಳಿಯದು. ಅದೆಲ್ಲವೂ ಅವರ ವೈಯಕ್ತಿಕ ವಿಷಯ. ಸಾಮಾಜಿಕವಾಗಿ, ಅವರು ಏನಿರುವರೆಂಬುದು ನಮಗೆ ಮುಖ್ಯ. ಶ್ರೀ ಜತ್ತಿಯವರ ಸಾಮಾಜಿಕ ಪ್ರತಿಮೆಗೂ ಬಸವಣ್ಣನವರ ಸಾಮಾಜಿಕ ಪ್ರತಿಮೆಗೂ ಅಂಥ ಹೆಚ್ಚಿನ ಭೇದವೇನೂ ಕಾಣುವುದಿಲ್ಲ.

“ ಅವರು ಬಸವಣ್ಣನವರ ಆಧುನಿಕ ಅವತಾರ ” ಎಂದುಹೊಗಳುವವರೂ ಇದ್ದಾರೆ. ನಾನು ಆರೀತಿ ಹೇಳಲಾರೆ.

ಬಸವಣ್ಣನವರ ವ್ಯಕ್ತಿತ್ವವೇ ಬೇರೆ ರೀತಿಯದು. ಹನ್ನೆರಡನೆಯ ಶತಮಾನದ ಆ ವ್ಯಕ್ತಿತ್ವ ಇಂದಿನ ಈ ಇಪ್ಪತ್ತನೆಯ ಶತಮಾನದಲ್ಲಿ ಯಾರಿಗೂ ಬರಲಾರದು.

ಆದರಿಷ್ಟು ಸತ್ಯ : ಬಸವಣ್ಣನವರ ನಡೆ–ನುಡಿಗಳಿಂದ ಶ್ರೀ ಜತ್ತಿಯವರು ತುಂಬಾ ಪ್ರಭಾವಿತರಾಗಿದ್ದಾರೆ; ಅವರ ಆದರ್ಶಗಳ ಬೆಳಕಿನಲ್ಲಿ ತಮ್ಮ ಜೀವನ ರೂಪಿಸಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ. ಅವರ ಪ್ರಾಮಾಣಿಕತೆಯೇ ಅವರನ್ನು ಮೇಲಕ್ಕೇರಿಸಿದೆ, ಇನ್ನೂ ಮೇಲಕ್ಕೇರಿಸುತ್ತದೆ.



# ಶ್ರೀ ಬಿ. ಡಿ. ಜತ್ತಿಯವರ ಬಗ್ಗೆ

● ಡಾ. ಎಂ. ಚಿದಾನಂದಮೂರ್ತಿ

● [ ಡಾ. ಎಂ. ಚಿದಾನಂದಮೂರ್ತಿ ಅವರು ಪ್ರತ್ಯಕ್ಷ ಪ್ರಮಾಣೀಕರಿಸಿಕೊಳ್ಳುವವರೆಗೆ ಯಾವುದನ್ನೂ ಸುಲಭವಾಗಿ ಒಪ್ಪಿಕೊಳ್ಳುವವರಲ್ಲ. ಸಂಶೋಧನೆಗೊಂದು ಅಳತೆಗೋಲು; ಜೀವನಕ್ಕೊಂದು ಅಳತೆಗೋಲು–ಪ್ರತ್ಯೇಕವಾಗಿ ಇಟ್ಟುಕೊಂಡೇ ಇಲ್ಲ. ಶ್ರೀ ಜತ್ತಿ ಅವರನ್ನು ಕುರಿತು ಹೊನ್ನಶೂಲದಲ್ಲಿರುವಷ್ಟು ಹೊಗಳದೆ ಸೀಮಿತ ಅಭಿಪ್ರಾಯಗಳಲ್ಲಿಯೇ ಶ್ರೀ ಜತ್ತಿ ಅವರ ಸ್ಪಷ್ಟ ಚಿತ್ರ ಒಡಮೂಡಿಸಿದ್ದಾರೆ. ಸಂ. ]

ನನಗೆ ಶ್ರೀ ಬಿ. ಡಿ. ಜತ್ತಿಯವರ ವೈಯಕ್ತಿಕ ಪರಿಚಯವಿಲ್ಲ. ಅವರನ್ನು ಸಭೆಗಳಲ್ಲಿ ನೋಡಿದ್ದೇನೆ. ಒಮ್ಮೆ ಅವರು ಭಾಗವಹಿಸಿದ್ದ ಸಭೆಯಲ್ಲಿ ಭಾಗವಹಿಸಿದ್ದೆ. ಇನ್ನೊಮ್ಮೆ ತಮ್ಮ ಕಾರ್ಯ ನಿಮಿತ್ತ ಅವರ ಮನೆಗೆ ಹೋಗಿದ್ದ ನನ್ನ ಸ್ನೇಹಿತರೊಬ್ಬರ ಜೊತೆ ನಾನೂ ಹೋಗಿದ್ದೆ.

ಅವರು ಸಭೆಗಳಲ್ಲಿ ಮಾತನಾಡುವಾಗ ತೋರುವ ಸಂಯಮ ತೀರಾ ಅಪೂರ್ವದ್ದು. ತಾನು ಏನು ಮಾತನಾಡಬೇಕೆಂಬುದನ್ನು ಪೂರ್ವಭಾವಿಯಾಗಿ ಆಲೋಚಿಸಿರುತ್ತಾರೆ : ಅಷ್ಟನ್ನು ಮಾತ್ರ, ನಿರುದ್ವೇಗದಿಂದ ಸ್ಪಷ್ಟವಾಗಿ ಹೇಳುತ್ತಾರೆ. ಅಲ್ಲಿ ಆರ್ಭಟವಿಲ್ಲ, ಅಪಕ್ವತೆಯಿಲ್ಲ, ಸಮಯ ಸ್ಫೂರ್ತಿಯಿಲ್ಲ. ಅಲ್ಲೇ ಸುಳ್ಳು ಆಶ್ವಾಸನೆಗಳನ್ನು ಕೊಡುವುದಾಗಲಿ, ಭಾವುಕವಾಗಿ ಮಾತನಾಡುವುದಾಗಲಿ ಇಲ್ಲ. ಇದು ನಿಜವಾದ ಮುತ್ಸದ್ದಿತನ ( Statesmanship ). ತಾವು ಆಡಿದ ಮಾತಿಗೆ ಬೆಲೆಯಿದೆ, ಬೆಲೆಯಿರಬೇಕು ಎಂದು ನಂಬಿ ಮಾತನಾಡುವ ವ್ಯಕ್ತಿ ಮಾತಿನಲ್ಲಿ ತೀರಾ ಎಚ್ಚರಿಕೆಯಿಂದಿರಬೇಕಾಗುತ್ತದೆ. ಶ್ರೀ ಜತ್ತಿಯವರ ಮೇಲ್ನೋಟದ ತಾಳ್ಮೆ, ಸಂಯಮಗಳು ಒಳಗಿನ ದೃಢತೆಯ ಸಂಕೇತ.

ಅವರ ಸೌಜನ್ಯದ ಸ್ವಲ್ಪ ಅನುಭವ ನನಗೆ ಉಂಟು. ಅವರ ಮನೆಗೆ ಹೋಗಿದ್ದಾಗ ಅವರು ಹಳೆಯ ಮೈಸೂರಿನ ಮುಖ್ಯ ಮಂತ್ರಿಗಳಾಗಿದ್ದರು;

ಸಭೆಯಲ್ಲಿ ಭಾಗವಹಿಸಿದ್ದಾಗ ಪಾಂಡಿಚೇರಿಯ ಗವರ್ನರರಾಗಿದ್ದರು. ಸ್ಥಾನ, ಅಧಿಕಾರಗಳ ಬಗ್ಗೆ ಅವರಿಗೆ ಯಾವುದೇ ಭ್ರಮೆಯೂ ಇದ್ದಂತೆ ಕಾಣಲಿಲ್ಲ. ಪಾಂಡಿಚೇರಿಯ ಅರವಿಂದಾಶ್ರಮದ ಬಗ್ಗೆ ಮಾತನಾಡುವಾಗಲೂ ಅವರು ಬಸವಣ್ಣನವರ ಬಗ್ಗೆ ತಮಗಿರುವ ಭಕ್ತಿ ಗೌರವಗಳನ್ನೇ ವ್ಯಕ್ತಪಡಿಸುತ್ತಿದ್ದರು. ಅಲ್ಲಿಯ ಆಶ್ರಮದಂತೆ ಬೆಂಗಳೂರಿನ ಬಸವ ಭವನವೂ ಒಂದು ಅಂತರ ರಾಷ್ಟ್ರೀಯ ಕೇಂದ್ರವಾಗಬೇಕೆಂಬುದು ಅವರ ಕನಸು. ಅವರಿಗೆ ಬಸವ ಎಂದರೆ ಒಂದು ಬಗೆಯ ವ್ಯಾಮೋಹ; ಹುಚ್ಚು ಎಂದರೂ ಸರಿಯೇ. ಆದರೆ ಅವರಿಗೆ ಇರುವ ಈ ಹುಚ್ಚು ಬರಿಯ ಪರಂಪರಾಗತವಾಗಿ ಬಂದಿರುವ ಶ್ರದ್ಧೆಯ ಫಲವಲ್ಲ; ಬಸವಣ್ಣ ನವರನ್ನು ಅರ್ಥಮಾಡಿಕೊಂಡು ಬೆಳಸಿಕೊಂಡಿರುವ ಭಕ್ತಿಯ ಫಲ. ಅವರಿಗೆ ಬಸವಣ್ಣ ಒಬ್ಬ ವಿಶ್ವ ಮಾನವನ ಪ್ರತೀಕ. ಅವರಿಗೆ ವೀರಶೈವ ಧರ್ಮವೆಂಬುದು ಬರಿಯ ಮತವಲ್ಲ, ಅದೊಂದು ಜೀವನ ವಿಧಾನ.

## ಪ್ರಶಂಸೆಯ ಮಾತು

ಈ ರೀತಿ ಮತ, ಮತಾಚಾರ್ಯರ ಬಗ್ಗೆ ಅರ್ಥ ಮಾಡಿಕೊಂಡು ಶ್ರದ್ಧೆ ಯನ್ನು ಬೆಳಸಿಕೊಂಡಿರುವ ಅವರಿಗೆ ತಾವು ವೀರಶೈವರೆಂಬುವನ್ನು ಹೇಳಿ ಕೊಳ್ಳಲು, ಅದರ ಲಾಂಛನವನ್ನು ಧರಿಸಲು ಯಾವುದೇ ಸಂಕೋಚವೂ ಇಲ್ಲ. ಜನ ಏನೆಂದುಕೊಳ್ಳುವರೋ ಎಂಬ ಭೀತಿ ಅವರಿಗಿಲ್ಲ, ಜನ ಏನೂ ಅಂದು ಕೊಂಡಿಲ್ಲ. ಅನ್ನುವವರು ಉಂಟು. ಆದರೆ ಅದು ಪ್ರಶಂಸೆಯ ಮಾತಾಗಿ ರುತ್ತದೆಯೇ ಹೊರತು, ಯಾರೂ ಅದನ್ನು ಪ್ರಶ್ನಿಸಿಲ್ಲ. ಯಾವ ವ್ಯಕ್ತಿ ಒಳಗೂ ಹೊರಗೂ ಒಂದೇ ಆಗಿರುತ್ತಾನೆಯೋ ಅವನಿಗೆ ಸಾಮಾನ್ಯವಾಗಿ ಭಯವೆಂಬು ದಿರುವುದಿಲ್ಲ. ಜನ ಅಂಥವರನ್ನು ಮೆಚ್ಚುತ್ತಾರೆ.

ಶ್ರೀ ಜತ್ತಿಯವರು ಇಂದು ಉಪರಾಷ್ಟ್ರಪತಿಯಾಗಿದ್ದಾರೆ. ಕರ್ನಾಟಕಕ್ಕೆ ಒಂದು ಸ್ಥಾನವನ್ನು ಗೆದ್ದುಕೊಟ್ಟಿದ್ದಾರೆ. ತಮ್ಮ ನೆಲದಲ್ಲಿ ಭದ್ರವಾಗಿ ಬೇರೂರಿ ದೆಹಲಿಯಲ್ಲಿ ಅರಳಿದ್ದಾರೆ. ಅವರಿಗೆ ಶುಭವನ್ನು, ಜಯವನ್ನು ಕೋರುವುದರಲ್ಲಿ ನಮಗೆಲ್ಲ ಸಂತೋಷವುಂಟು.



# ಪ್ರಾತಃಸ್ಮರಣೀಯ ವ್ಯಕ್ತಿ ಶ್ರೀ ಜತ್ತಿ

● ಮೋಹನಚಂದ ಕಿರಣಗಿ

[ ಕನ್ನಡ ಸಾಹಿತ್ಯಾರಾಧನೆ ಕಾಲೇಜ್ ಶಿಕ್ಷಕರ ಗುತ್ತಿಗೆಯಾಗಿದೆಯೇ ? ಪ್ರಾಥಮಿಕ ಶಿಕ್ಷಕರೂ ಶ್ರೇಷ್ಠ ಸಾಹಿತಿಗಳೆಂದೆನಿಸಿಕೊಂಡುದುಂಟು ಎಂದು ಹೇಳಿ ಮಿತ್ರರೊಬ್ಬರು "ಪ್ರಾಥಮಿಕ ಶಿಕ್ಷಕ ಸಾಹಿತಿಗಳು" ಎಂಬ ಗ್ರಂಥ ಬರೆಯಲಪೇಕ್ಷಿಸಿರುವುದಾಗಿ ತಿಳಿಸಿದ್ದರು. ಅವರೇನಾದರೂ ಆ ಸಾಹಸ ಕಾರ್ಯ ಕೈಕೊಂಡರೆ ಮೊದಲಿನ ಮೂರು ಜನರಲ್ಲಿಯೇ ಶ್ರೀ ಮೋಹನಚಂದರು ಬಂದು ಬಿಡುತ್ತಾರೆ. ಮಕ್ಕಳಿಗೆ ರ, ತ, ಈ, ಕ ಕಲಿಸುತ್ತ ಶ್ರೀ ಮೋಹನಚಂದ ಕಿರಣಗಿ ಅವರು ಉತ್ತಮ ನಾಟಕಕಾರರೂ, ಪ್ರಬಂಧಕಾರರೂ ಎಂದು ಖ್ಯಾತಿ ಪೆತ್ತಿದ್ದಾರೆ. ಶ್ರೀ ಜತ್ತಿ ಅವರನ್ನು ಕುರಿತ ಈ ಲೇಖನ ಪಾಂಡಿತ್ಯಪೂರ್ಣವಾಗಿದೆ. – ಸಂ. ]

ಕನ್ನಡ ಕುಲಕೋಟಿಯ ಪ್ರೀತ್ಯಾದರಗಳ ದ್ಯೋತಕರೂ, ಭಾವೀ ಜೀವನದ ಸಮೀಕ್ಷಕರೂ, ಆದರ್ಶದ ನಿರೀಕ್ಷಕರೂ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧಕರೂ ಆದ– ಒರೆದಷ್ಟು ಮೆರಗು ಕೊಡುವ, ತೇದಷ್ಟು ಸುಗಂಧ ನೀಡುವ ಹಿಂಡಿದಷ್ಟು ಸವಿಜೇನು ಸುರಿಸುವ ಘನ ವ್ಯಕ್ತಿತ್ವ ಸಂಪನ್ನರಾದ ಮಾನ್ಯಶ್ರೀ ಜತ್ತಿಯವರ ನಿಸ್ಪೃಹ ಹಾಗೂ ನಿರ್ಮಲ ಸೇವೆಯನ್ನು ಗುರುತಿಸಿದ ಹೈದರಾಬಾದ ಕರ್ನಾಟಕದ ಜನತೆ ಅವರನ್ನು ಸತ್ಕರಿಸಿ, ಆ ಸಂದರ್ಭದ ಸವಿಸ್ಮೃತಿಗೆಂದು ಸಂಭಾವನಾ ಗ್ರಂಥವೊಂದನ್ನು ಪ್ರಕಟಿಸಿ ಸಮರ್ಪಿಸುವ ಕಾರ್ಯ ನಿಜಕ್ಕೂ ಸ್ತುತ್ಯವಾದುದು ! ಸ್ವಾಗತಾರ್ಹವಾದುದು !!

ಪುಣ್ಯದ ಬೀಡಾದ ಕನ್ನಡನಾಡಿನ ಜಿಲ್ಲೆಗಳಲ್ಲೊಂದಾದ ವಿಜಾಪುರ ಜಿಲ್ಲೆಯ ಸಾವಳಗಿ ಗ್ರಾಮದ ಜತ್ತಿ ಮನೆತನದವರ ನಡೆಚೆನ್ನ, ನುಡಿಚೆನ್ನ, ವೇಷ ಭೂಷಣ ಚೆನ್ನ– ಸಹೃದಯತೆ, ಸರಳತೆ, ನಿರಾಡಂಬರತೆಗಳು ಆ ಮನೆತನಕ್ಕೆ ದೈವದತ್ತವಾದ ಕೊಡುಗೆಗಳು. ಇಂಥ ಸುಸಂಸ್ಕೃತ ಮನೆತನದ ಶ್ರೀ ದಾನಪ್ಪ ದಂಪತಿಗಳ ಶುದ್ಧ ಸಾತ್ವಿಕವಾದ ದಾಂಪತ್ಯವಲ್ಲರಿಯಲ್ಲಿ ೧೯೧೨ ನೆ ಇಸ್ವಿಯ ಸಪ್ಟಂಬರ್ ತಿಂಗಳ ೧೦ ನೆಯ ದಿನಾಂಕದಂದು ಶ್ರೀ ಬಸಪ್ಪ

ಸಭೆಯಲ್ಲಿ ಭಾಗವಹಿಸಿದ್ದಾಗ ಪಾಂಡಿಚೇರಿಯ ಗವರ್ನರರಾಗಿದ್ದರು. ಸ್ಥಾನ, ಅಧಿಕಾರಗಳ ಒಗ್ಗೆ ಅವರಿಗೆ ಯಾವುದೇ ಭ್ರಮೆಯೂ ಇದ್ದಂತೆ ಕಾಣಲಿಲ್ಲ. ಪಾಂಡಿಚೇರಿಯ ಅರವಿಂದಾಶ್ರಮದ ಬಗ್ಗೆ ಮಾತನಾಡುವಾಗಲೂ ಅವರು ಬಸವಣ್ಣನವರ ಬಗ್ಗೆ ತಮಗಿರುವ ಭಕ್ತಿ ಗೌರವಗಳನ್ನೇ ವ್ಯಕ್ತಪಡಿಸುತ್ತಿದ್ದರು. ಅಲ್ಲಿಯ ಆಶ್ರಮದಂತೆ ಬೆಂಗಳೂರಿನ ಬಸವ ಭವನವೂ ಒಂದು ಅಂತರ ರಾಷ್ಟ್ರೀಯ ಕೇಂದ್ರವಾಗಬೇಕೆಂಬುದು ಅವರ ಕನಸು. ಅವರಿಗೆ ಬಸವ ಎಂದರೆ ಒಂದು ಬಗೆಯ ವ್ಯಾಮೋಹ; ಹುಚ್ಚು ಎಂದರೂ ಸರಿಯೇ. ಆದರೆ ಅವರಿಗೆ ಇರುವ ಈ ಹುಚ್ಚು ಬರಿಯ ಪರಂಪರಾಗತವಾಗಿ ಬಂದಿರುವ ಶ್ರದ್ಧೆಯ ಫಲವಲ್ಲ; ಬಸವಣ್ಣನವರನ್ನು ಅರ್ಥಮಾಡಿಕೊಂಡು ಬೆಳಸಿಕೊಂಡಿರುವ ಭಕ್ತಿಯ ಫಲ. ಅವರಿಗೆ ಬಸವಣ್ಣ ಒಬ್ಬ ವಿಶ್ವ ಮಾನವನ ಪ್ರತೀಕ. ಅವರಿಗೆ ವೀರಶೈವ ಧರ್ಮವೆಂಬುದು ಬರಿಯ ಮತವಲ್ಲ, ಅದೊಂದು ಜೀವನ ವಿಧಾನ.

## ಪ್ರಶಂಸೆಯ ಮಾತು

ಈ ರೀತಿ ಮತ, ಮತಾಚಾರ್ಯರ ಬಗ್ಗೆ ಅರ್ಥ ಮಾಡಿಕೊಂಡು ಶ್ರದ್ಧೆಯನ್ನು ಬೆಳಸಿಕೊಂಡಿರುವ ಅವರಿಗೆ ತಾವು ವೀರಶೈವರೆಂಬುವನ್ನು ಹೇಳಿಕೊಳ್ಳಲು, ಅದರ ಲಾಂಛನವನ್ನು ಧರಿಸಲು ಯಾವುದೇ ಸಂಕೋಚವೂ ಇಲ್ಲ. ಜನ ಏನೆಂದುಕೊಳ್ಳುವರೋ ಎಂಬ ಭೀತಿ ಅವರಿಗಿಲ್ಲ, ಜನ ಏನೂ ಅಂದುಕೊಂಡಿಲ್ಲ. ಅನ್ನುವವರು ಉಂಟು. ಆದರೆ ಅದು ಪ್ರಶಂಸೆಯ ಮಾತಾಗಿರುತ್ತದೆಯೇ ಹೊರತು, ಯಾರೂ ಅದನ್ನು ಪ್ರಶ್ನಿಸಿಲ್ಲ. ಯಾವ ವ್ಯಕ್ತಿ ಒಳಗೂ ಹೊರಗೂ ಒಂದೇ ಆಗಿರುತ್ತಾನೆಯೋ ಅವನಿಗೆ ಸಾಮಾನ್ಯವಾಗಿ ಭಯವೆಂಬುದಿರುವುದಿಲ್ಲ. ಜನ ಅಂಥವರನ್ನು ಮೆಚ್ಚುತ್ತಾರೆ.

ಶ್ರೀ ಜತ್ತಿಯವರು ಇಂದು ಉಪರಾಷ್ಟ್ರಪತಿಯಾಗಿದ್ದಾರೆ. ಕರ್ನಾಟಕಕ್ಕೆ ಒಂದು ಸ್ಥಾನವನ್ನು ಗೆದ್ದುಕೊಟ್ಟಿದ್ದಾರೆ. ತಮ್ಮ ನೆಲದಲ್ಲಿ ಭದ್ರವಾಗಿ ಬೇರೂರಿ ದೆಹಲಿಯಲ್ಲಿ ಅರಳಿದ್ದಾರೆ. ಅವರಿಗೆ ಶುಭವನ್ನು, ಜಯವನ್ನು ಕೋರುವುದರಲ್ಲಿ ನಮಗೆಲ್ಲ ಸಂತೋಷವುಂಟು.



# ಪ್ರಾತಃಸ್ಮರಣೀಯ ವ್ಯಕ್ತಿ ಶ್ರೀ ಜತ್ತಿ

● ಮೋಹನಚಂದ ಕಿರಣಗಿ

● [ ಕನ್ನಡ ಸಾಹಿತ್ಯಾರಾಧನೆ ಕಾಲೇಜ್ ಶಿಕ್ಷಕರ ಗುತ್ತಿಗೆಯಾಗಿದೆಯೇ ? ಪ್ರಾಥಮಿಕ ಶಿಕ್ಷಕರೂ ಶ್ರೇಷ್ಠ ಸಾಹಿತಿಗಳೆಂದೆನಿಸಿಕೊಂಡುದುಂಟು ಎಂದು ಹೇಳಿ ಮಿತ್ರರೊಬ್ಬರು "ಪ್ರಾಥಮಿಕ ಶಿಕ್ಷಕ ಸಾಹಿತಿಗಳು" ಎಂಬ ಗ್ರಂಥ ಬರೆಯಲಪೇಕ್ಷಿಸಿರುವುದಾಗಿ ತಿಳಿಸಿದ್ದರು. ಅವರೇನಾದರೂ ಆ ಸಾಹಸ ಕಾರ್ಯ ಕೈಕೊಂಡರೆ ಮೊದಲಿನ ಮೂರು ಜನರಲ್ಲಿಯೇ ಶ್ರೀ ಮೋಹನಚಂದರು ಬಂದು ಬಿಡುತ್ತಾರೆ. ಮಕ್ಕಳಿಗೆ ರ, ತ, ಈ, ಕ ಕಲಿಸುತ್ತ ಶ್ರೀ ಮೋಹನಚಂದ ಕಿರಣಗಿ ಅವರು ಉತ್ತಮ ನಾಟಕಕಾರರೂ, ಪ್ರಬಂಧಕಾರರೂ ಎಂದು ಖ್ಯಾತಿ ಪೆತ್ತಿದ್ದಾರೆ. ಶ್ರೀ ಜತ್ತಿ ಅವರನ್ನು ಕುರಿತ ಈ ಲೇಖನ ಪಾಂಡಿತ್ಯಪೂರ್ಣವಾಗಿದೆ. — ಸಂ. ]

ಕನ್ನಡ ಕುಲಕೋಟಿಯ ಪ್ರೀತ್ಯಾದರಗಳ ದ್ಯೋತಕರೂ, ಭಾವೀ ಜೀವನದ ಸಮೀಕ್ಷಕರೂ, ಆದರ್ಶದ ನಿರೀಕ್ಷಕರೂ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧಕರೂ ಆದ– ಒರೆದಷ್ಟು ಮೆರಗು ಕೊಡುವ, ತೇದಷ್ಟು ಸುಗಂಧ ನೀಡುವ ಹಿಂಡಿದಷ್ಟು ಸವಿಜೇನು ಸುರಿಸುವ ಘನ ವ್ಯಕ್ತಿತ್ವ ಸಂಪನ್ನರಾದ ಮಾನ್ಯಶ್ರೀ ಜತ್ತಿಯವರ ನಿಸ್ಪೃಹ ಹಾಗೂ ನಿರ್ಮಲ ಸೇವೆಯನ್ನು ಗುರುತಿಸಿದ ಹೈದರಾಬಾದ ಕರ್ನಾಟಕದ ಜನತೆ ಅವರನ್ನು ಸತ್ಕರಿಸಿ, ಆ ಸಂದರ್ಭದ ಸವಿಸ್ಮೃತಿಗೆಂದು ಸಂಭಾವನಾ ಗ್ರಂಥವೊಂದನ್ನು ಪ್ರಕಟಿಸಿ ಸಮರ್ಪಿಸುವ ಕಾರ್ಯ ನಿಜಕ್ಕೂ ಸ್ತುತ್ಯವಾದುದು ! ಸ್ವಾಗತಾರ್ಹವಾದುದು !!

ಪುಣ್ಯದ ಬೀಡಾದ ಕನ್ನಡನಾಡಿನ ಜಿಲ್ಲೆಗಳಲ್ಲೊಂದಾದ ವಿಜಾಪುರ ಜಿಲ್ಲೆಯ ಸಾವಳಗಿ ಗ್ರಾಮದ ಜತ್ತಿ ಮನೆತನದವರ ನಡೆಚೆನ್ನ, ನುಡಿಚೆನ್ನ, ವೇಷ ಭೂಷಣ ಚೆನ್ನ– ಸಹೃದಯತೆ, ಸರಳತೆ, ನಿರಾಡಂಬರತೆಗಳು ಆ ಮನೆತನಕ್ಕೆ ದೈವದತ್ತವಾದ ಕೊಡುಗೆಗಳು. ಇಂಥ ಸುಸಂಸ್ಕೃತ ಮನೆತನದ ಶ್ರೀ ದಾನಪ್ಪ ದಂಪತಿಗಳ ಶುದ್ಧ ಸಾತ್ವಿಕವಾದ ದಾಂಪತ್ಯವಲ್ಲರಿಯಲ್ಲಿ ೧೯೧೨ ನೆ ಇಸ್ವಿಯ ಸಪ್ಟಂಬರ್ ತಿಂಗಳ ೧೦ ನೆಯ ದಿನಾಂಕದಂದು ಶ್ರೀ ಬಸಪ್ಪ

ಜತ್ತಿಯವರು ಹೂವಾಗಿ ಅರಳಿದರು. ಹೂವಾದರೂ ಬೆಡಗಿನ ಗುಲಾಬಿಯಲ್ಲ, ಮುಗ್ಧ ಮಲ್ಲಿಗೆ ಹೂವು.

ಕಷ್ಟಸಹಿಷ್ಣು, ಪ್ರಾಮಾಣಿಕ, ಸ್ಮಿತವದನ, ಅಜಾತ ಶತ್ರು, ಮಹಾ ಮೇಧಾವಿ ಹಾಗೂ ಅಪ್ರತಿಮ ರಾಷ್ಟ್ರ ಭಕ್ತಿಯುಳ್ಳ ಕುವರನನ್ನು ಹೆತ್ತು, ನಾಡಿನ ಹಿತಚಿಂತನೆಗಾಗಿ ಧಾರೆಯೆರೆದು ಕೊಟ್ಟ ತಂದೆ ದಾನಪ್ಪ, ತಾಯಿ ಭಾಗವ್ವ ದಂಪತಿಗಳು ನಿಜಕ್ಕೂ ಭಾಗ್ಯಶಾಲಿಗಳು.

"ಈ ಬಟ್ಟ ಬಯಲೆಲ್ಲ ಘಟ್ಟಗೊಂಡರೆ ಸ್ವರ್ಗ ಮರ್ತ್ಯ ಪಾತಾಳಕ್ಕೆ
ಠಾವಿನ್ನೆಲ್ಲಿಯದು ?
ಮೇಘಜಲವೆಲ್ಲ ಮುತ್ತಾದರೆ ಈ ಸಪ್ತ ಸಾಗರಕ್ಕೆ ಉದಕವಿನ್ನೆಲ್ಲಿಯದು ?
ಈ ಲೋಕದ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದರೆ ಈ ಭವದ
ಬಳ್ಳಿಗೆ ಬೀಜ ಇನ್ನೆಲ್ಲಿಯದು ?
ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕೊಬ್ಬ
ಭಕ್ತ, ಕೋಟಿಗೊಬ್ಬ ಶರಣ"

—ಎಂದು ಶರಣರ ಸಂದೇಶ ಸಾರುತ್ತಿರುವಾಗ ಕೋಟಿಯಲ್ಲಿ ಒಬ್ಬರಾಗಿ ಶ್ರೀ ಜತ್ತಿ ಅವರು ಹುಟ್ಟಿ ಬಂದಿದ್ದಾರೆ. ಕನ್ನಡ ಕುಲಕೋಟಿಗೆ ಕಿರೀಟಪ್ರಾಯರಾದ ಶ್ರೀ ಜತ್ತಿಯವರು ಇಷ್ಟೊಂದು ಘನತೆ ಗೌರವ ಹೊಂದಲು ಅವರ ನಿರಪೇಕ್ಷ ಸೇವೆಯ ಹಂಬಲಕ್ಕೆ ದೈವೀ ಕೃಪೆಯ ಬೆಂಬಲವಿರಲೇಬೇಕು. ಮನುಷ್ಯನು ಪ್ರಯತ್ನಶೀಲನಾದರೆ ದೈವ ಅವನ ನೆರಳಿನಂತೆ ಬೆಂಬತ್ತಿಬರುವುದು ಎಂಬ ಮಾತಿಗೆ ಶ್ರೀ ಜತ್ತಿಯವರು ನಿದರ್ಶನವಾಗಿದ್ದಾರೆ.

ಅದೊಂದು ದಿನ– ಶ್ರೀ ದಾನಪ್ಪನವರು ಬಾಲಕ ಬಸಪ್ಪನನ್ನು ಕರೆದುಕೊಂಡು ಅಥಣಿಯ ಮಹಾಶಿವಯೋಗಿಗಳಾದ ಶ್ರೀ ಮುರುಘೇಂದ್ರ ಮಹಾಸ್ವಾಮಿಗಳ ದರ್ಶನಕ್ಕೆಂದು ಬಂದಾಗ ಶ್ರೀ ಶಿವಯೋಗಿಗಳ ಪರುಷ ದೃಷ್ಟಿ ಬಾಲಕ ಬಸಪ್ಪನ ಮೇಲೆ ಬಿದ್ದೊಡನೆಯೇ– "ದಾನಪ್ಪನವರೆ, ನಿಮ್ಮ ಈ ಮಗನು ರಾಜನಾಗುತ್ತಾನೆ" ಎಂದು ಶಿವಯೋಗಿಗಳ ಪ್ರಸಾದವಾಣಿಯಾಯಿತು. ಮಹಾಮಹಿಮರಾದ ಶಿವಯೋಗಿಗಳ ನುಡಿ ಸುಳ್ಳಾಗುವದುಂಟೆ ? ಇಂದು ಶ್ರೀ ಜತ್ತಿಯವರು ಪ್ರಜಾರಾಜ್ಯದ ಐವತ್ತಾರು ಕೋಟಿ ಜನತೆಯ ಹೃದಯ ಸಿಂಹಾಸನಕ್ಕೆ ದೊರೆಯಾಗಿದ್ದಾರೆ.

ಜನ್ಮಸ್ಥಳವಾದ ಸಾವಳಗಿಯಲ್ಲಿ ಪ್ರಾಥಮಿಕ ಶಿಕ್ಷಣ. ವಿಜಾಪುರದ ಸರಕಾರಿ ಪ್ರೌಢಶಾಲೆಯಲ್ಲಿ ಮಾಧ್ಯಮಿಕ ಶಿಕ್ಷಣ. ಕೊಲ್ಲಾಪುರದ ರಾಜಾರಾಮ ಕಲಾ ಮತ್ತು ಕಾಯ್ದೆ ಮಹಾವಿದ್ಯಾಲಯದಿಂದ ಪದವಿಶಿಕ್ಷಣ. ಚಾಣಾಕ್ಷ ವಿದ್ಯಾರ್ಥಿಯಾಗಿ, ಶ್ರೇಷ್ಠಮಟ್ಟದ ವಾಗ್ಮಿಯಾಗಿ, ಬರಹಗಾರರಾಗಿ ಪ್ರಾಧ್ಯಾಪಕವೃಂದಕ್ಕೆಲ್ಲ ನೆಚ್ಚಿನ ಶಿಷ್ಯರೆನಿಸಿದರು. ವಿದ್ಯಾರ್ಥಿದೆಸೆಯಲ್ಲಿಯೇ ಅವರ ಧಮನಿ ಧಮನಿಗಳಲ್ಲಿ ರಾಷ್ಟ್ರಸೇವಾಭಾವನೆಯು ಪ್ರವಹಿಸುತ್ತಿತ್ತು. ತತ್‌ಪರಿಣಾಮವಾಗಿ ಸ್ವಾತಂತ್ರ್ಯಾಂದೋಲನದಲ್ಲಿ ಭಾಗವಹಿಸಿದರು. ೧೯೪೦ ರಲ್ಲಿ ಕಾಯ್ದೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಜಮಖಂಡಿಯಲ್ಲಿಯೇ ವಕೀಲಿವೃತ್ತಿ ಕೈಕೊಂಡು ಆದರ್ಶ ಹಾಗೂ ಪ್ರಾಮಾಣಿಕ ವಕೀಲರೆಂದು ಖ್ಯಾತಿ ಪಡೆದರು.

## ಬಾಗಿದ ತಲೆ—ಮುಗಿದ ಕೈ

" ರಾಜಕೀಯತೆಗೆ ಧರ್ಮ ಬೆರೆತರೆ ಅದರ ಅಂತಸ್ಸತ್ವ ಉದ್ದೀಪನಗೊಳ್ಳುತ್ತದೆ, ಭಾವೈಕ್ಯತೆಗೆ ದಾರಿದೀಪವಾಗುತ್ತದೆ " ಎಂಬುದನ್ನರಿತ ಶ್ರೀ ಜತ್ತಿಯವರು ಧರ್ಮವನ್ನು ಬೆನ್ನುಮೂಳೆಯಾಗಿರಿಸಿಕೊಂಡು ರಾಜಕೀಯ ಕ್ಷೇತ್ರದಲ್ಲಿ ಕಾಲಿರಿಸಿ ಯಶಸ್ವಿಯಾದರು. ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿ ಮುಂಬೈ ಸರಕಾರದಲ್ಲಿ ಪಾರ್ಲಿಮೆಂಟರಿ ಕಾರ್ಯದರ್ಶಿಗಳಾಗಿ, ಉಪಮಂತ್ರಿಗಳಾಗಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿ, ಮಂತ್ರಿಗಳಾಗಿ, ಪಾಂಡಿಚೇರಿಯ ಉಪರಾಜ್ಯಪಾಲರಾಗಿ, ಓರಿಸ್ಸಾದ ರಾಜ್ಯಪಾಲರಾಗಿ ಇಂದು ಭಾರತದ ಉಪರಾಷ್ಟ್ರಪತಿಗಳಾದ ಶ್ರೀ ಜತ್ತಿಯವರು ಮನಸ್ಸು ಮಾಡಿದರೆ ಪ್ರತಿ ಕುಬೇರರೇ ಆಗಬಹುದಾಗಿತ್ತು. ಆದರೆ " ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ತನ್ನ ಒಡಲಿಂಗೆ ತನ್ನ ಒಡವೆಗೆ ತನ್ನ ಮಡದಿ ಮಕ್ಕಳಿಗೆಂದು ಕುದಿಯದ, " "ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಎನ್ನದ " ಶರಣ ಶ್ರೇಷ್ಠ ಶ್ರೀ ಜತ್ತಿಯವರು ಎಂದಿಗೂ ವಾಮ ಮಾರ್ಗಕ್ಕಿಳಿದವರಲ್ಲ. " ಮಣಿದಿರಲಿ ಮುಡಿ, ಮುಗಿದಿರಲಿ ಕೈ, ಮಡಿಯಾಗಿರಲಿ ಬಾಳ್ವೆ " ಎಂಬುದನ್ನು ಅರ್ಥೈಸಿಕೊಂಡ ಶ್ರೀ ಜತ್ತಿಯವರು ತಮ್ಮ ವೃತ್ತಿ ಪಾವಿತ್ರ್ಯತೆಯನ್ನು ನಿತ್ಯ ಜೀವಮಸಿರನ್ನಾಗಿರಿಸಿಕೊಂಡವರು. " ಬಾಗಿದ ತಲೆಯ, ಮುಗಿದ ಕೈಯಾಗಿರಿಸು ಕೂಡಲ ಸಂಗಮದೇವಾ " ಎಂಬಂತೆ ಬಾಳಿದವರು.

ಕನ್ನಡಾಂಬೆಯ ವರಪುತ್ರರಾದ ಶ್ರೀ ಜತ್ತಿಯವರಿಂದ ಜರುಗಿದ ಇನ್ನೊಂದು ಮಹಾಮಣಿಹವೆಂದರೆ ಕನ್ನಡ ನಾಡಿನ ಶಿವಶರಣರ ಅಮರ ಸಂದೇಶವನ್ನು

ವಿಶ್ವ ವ್ಯಾಪಕವಾಗುವಂತೆ ಮಾಡುವ ಮಂಗಲಪ್ರದವಾದ ಕಾರ್ಯವನ್ನು ಕೈಕೊಂಡಿಪು. ೧೯೬೪ರಲ್ಲಿ ಬಸವಸಮಿತಿಯನ್ನು ಸ್ಥಾಪಿಸಿ, ತನ್ಮೂಲಕ ಅದ್ವಿತೀಯವೆನಿಸುವಂತೆ ನಾಡು–ಹೊರನಾಡುಗಳಲ್ಲಿ ಶ್ರೀ ಜಗಜ್ಯೋತಿ ಬಸವೇಶ್ವರರ ಅಷ್ಟ ಶತಮಾನೋತ್ಸವವನ್ನು ನೆರವೇರಿಸಿದರು. ಶರಣರ ಜಾಗ್ರೃತ ಸ್ಥಳಗಳನ್ನು ಜೀರ್ಣೋದ್ಧಾರಗೊಳಿಸಿದರು. ಶ್ರೀ ಜತ್ತಿಯವರು ಯಾವ ಕ್ಷೇತ್ರದಲ್ಲಿಯೇ ಸೇವೆಸಲ್ಲಿಸಿರಲಿ ಅಲ್ಲಿ ಅವರದು ಎಂದಿಗೂ ಮಾಸದ ಕೀರ್ತಿ.

**ಕಾಯಕಯೋಗಿ**

ಇಂದು ಕಾಯಕವೆ ಲಾಸ್ ಆಗಿರುವಾಗ ಅಥವಾ ಕಾಯಕ ವಿಲಾಸವಾಗಿರುವಾಗ ಕಾಯಕವೇ ಕೈಲಾಸವೆಂದು ನುಡಿದು, ಕಾಯಕದಲ್ಲಿ ನಿರತರಾದೊಡೆ ಗುರುದರ್ಶನವಾದರೂ ಮರೆಯುುವ, ಲಿಂಗಪೂಜೆಯಾದರೂ ಬಿಡುವ, ಅತಿವಿರಳ ವ್ಯಕ್ತಿಗಳಲ್ಲಿ ಶ್ರೀ ಜತ್ತಿಯವರೂ ಒಬ್ಬರು. “ ನಿನ್ನ ಹುಬ್ಬಿನ ಮೇಲೆ ಬಿಸಿ ಬೆವರ ಬಿಂದುಗಳು ಮೂಡಿದಾಗಲೇ ನಿನ್ನ ನಿತ್ಯದ ರೊಟ್ಟಿ ಕಚ್ಚು ” ಎಂಬ ಬೈಬಲ್ಲಿನ ಉಕ್ತಿಯನ್ನು ಜ್ಞಾಪಿಸುವಂತೆ ಶ್ರೀ ಜತ್ತಿಯವರು ದಿನವಿಡೀ ಬೀಸುವ ಮಾರುತನಂತೆ ಕಾರ್ಯತತ್ಪರರು. ತಮ್ಮ ಅಹರ್ನಿಶ ಕಾಯಕ ತತ್ಪರತೆಯಿಂದ ತಾವು ದುಡಿವ ಕ್ಷೇತ್ರಕ್ಕೆ ಹೂವು ತರುವವರು. ಅವರ ಕಾಯಕ ತತ್ಪರತೆ ಕರ್ತವ್ಯದಕ್ಷತೆ ಕುರಿತು ಅವರ ಆಪ್ತ ಕಾರ್ಯದರ್ಶಿಗಳಾಗಿ ಸುಮಾರು ಇಪ್ಪತ್ತೈದು ವರ್ಷ ಸೇವೆಸಲ್ಲಿಸಿದ ಶ್ರೀ ವೈ. ಕೆ. ಹೆಬ್ಬಳ್ಳಿಯವರು ಹೇಳಿದ ಮಾತುಗಳಿವು–– “ ಯಾವ ಕಾಗದವನ್ನೂ ಮೊದಲಿನಿಂದ ತುದಿಯವರೆಗೂ ಓದಿ, ಸಂಶಯಬಂದರೆ ಮತ್ತೊಂದುಸಲ ನಿರೀಕ್ಷಿಸಿ ಕಾನೂನಿಗೆ ಸರಿಯಾಗಿ ನಿರ್ಣಯಕೊಡುವ ಬುದ್ಧಿಶಾಲಿಗಳವರು. ಒಂದು ಸಲ ಡ್ರಾಫ್ಟ್ ಒಪ್ಪಿಗೆಯಾಗಿ ಟಾಯಿಪ್ ಮಾಡಲ್ಪಟ್ಟ ಕಾಗದ ಪುನಃ ನಾಮಾಂಕಿತಕ್ಕಾಗಿ ಬಂದಾಗ ಮತ್ತೊಂದು ಸಲ ಮೊದಲಿನಿಂದ ಕೊನೆಯವರೆಗೂ ಓದಿದಮೇಲೆ ಸಹಿಮಾಡುವವರು– ಬಹುಶಃ ಇವರೊಬ್ಬರೆ. ” ಇಷ್ಟು ಸಾಕಲ್ಲವೆ ಅವರನ್ನು ಕಾಯಕ ಯೋಗಿಗಳೆಂದು ಕರೆಯಲು.

* * * * *

‘ ನಿಮ್ಮ ಹೆಸರೇನು ? ’

‘ ಮೋಹನಚಂದ ಕೀರಣಗಿ. ’

‘ ಯಾವ ಕೆಲಸದಲ್ಲಿದ್ದೀರಿ ? ’

‘ ಇಲ್ಲಿಯ ಕನ್ನಡ ಶಾಲೆಯಲ್ಲಿ ಶಿಕ್ಷಕನಾಗಿದ್ದೇನೆ.

'ಅಭ್ಯಾಸ.'

'ಮ್ಯಾಟ್ರಿಕ್ಯುಲೇಶನ್'

ಈ ಸಂಭಾಷಣೆ ನಡೆದುದು ನನ್ನ ಹಾಗೂ ಪೂಜ್ಯ ಶ್ರೀ ಬಿ. ಡಿ. ಜತ್ತಿಯವರ ಮಧ್ಯೆ ಸುಮಾರು ಹದಿನಾಲ್ಕು ವರ್ಷಗಳ ಹಿಂದೆ. ಸಂದರ್ಭ: ರಾಯಚೂರ ಜಿಲ್ಲೆಯ ಕೊಪ್ಪಳ ತಾಲೂಕಿನ ಹಿಟ್ನಾಳ ಗ್ರಾಮದ ಪಂಚಾಯತ ಭವನದ ಪ್ರಾರಂಭೋತ್ಸವ. ಆ ಕಾರ್ಯ ನೆರವೇರಿಸಲು ಆಗಮಿಸಿದ್ದ (ಆಗ ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದರು) ಶ್ರೀ ಜತ್ತಿಯವರಿಗೆ ಗ್ರಾಮಸ್ತರ ಪರವಾಗಿ ನಾನೇ ಬರೆದ ಸನ್ಮಾನ ಪತ್ರವೊಂದನ್ನು– ಪ್ರಾಸ್ತಾವಿಕವಾಗಿ ಒಂದೆರಡು ಮಾತುಗಳಾಡಿ ಅರ್ಪಿಸಿದಾಗ– ನನ್ನನ್ನು ತಮ್ಮ ಹತ್ತಿರ ಕರೆದು ಬೆನ್ನು ತಟ್ಟಿ ಆ ತುಂಬಿದ ಸಭೆಯಲ್ಲಿ ಸುಮಾರು ಐದು ನಿಮಿಷದವರೆಗೆ ನನ್ನ ಅಲ್ಪ ಪಾಂಡಿತ್ಯವನ್ನೇ ಎತ್ತಿ ಮಾತನಾಡುತ್ತ "ಇಂಥ ಕನ್ನಡ ಬರೆಯುವ ಶಿಕ್ಷಕರು ಹೆಚ್ಚಿದಷ್ಟೂ ನಾಡಿಗೆ ಶ್ರೇಯಸ್ಕರ" ಎಂದು ಹೃದಯ ತುಂಬಿ ನುಡಿದರು. ಚಿಗುರುವ ಸಸಿಗೆ ಉಗುರು ಹಚ್ಚುವ ಇಂದಿನಕಾಲದಲ್ಲಿ ಬೆನ್ನು ತಟ್ಟಿ ಪ್ರೋತ್ಸಾಹಿಸುವ ಶ್ರೀ ಜತ್ತಿಯವರಂಥ ವ್ಯಕ್ತಿಗಳು ದೊರಕುವದು ಅಪರೂಪ. ಅವರ "ದೇಹ ಕಿರಿದು ಹೃದಯ ಹಿರಿದು." ಒಳ್ಳೆಯದನ್ನು ಕಂಡಾಗ ಮಲ್ಲಿಗೆದಂಡೆಗಳಾಗಿ ಬರುವ ಅವರ ಮಾತುಗಳು ಅನ್ಯಾಯವನ್ನು ಕಂಡಾಗ ಕೆಂಡದುಂಡೆಗಳಾಗಿ ಸಿಡಿದು ಬರುವವು.

## ಅನಿರ್ವಚನೀಯ

ಮೇಲಿನ ಪ್ರಸಂಗ ಜರುಗಿದಂದಿನಿಂದ ಶ್ರೀ ಜತ್ತಿಯವರ ಸರಳತೆಯ ಬಗ್ಗೆ ನನಗೆ ಎಲ್ಲಿಲ್ಲದ ಅಭಿಮಾನ. ಅವ್ಯಕ್ತವಾದ ಅನಿರ್ವಚನೀಯವಾದ ಪೂಜ್ಯ ಭಾವನೆ. ನನ್ನನ್ನು ಆಕರ್ಷಿಸಿದ ವ್ಯಕ್ತಿಗಳಲ್ಲಿ ಪ್ರಮುಖರೆಂದರೆ, ಅನ್ನದಾನ, ಅನುಭವದಾನ, ಸಂಸ್ಕೃತಿದಾನವನ್ನು ನಾಡ ಜನತೆಗೆ ನೀಡಿ ಲಿಂಗೈಕ್ಯರಾದ ಪೂಜ್ಯ ಶ್ರೀ ಮೃತ್ಯುಂಜಯ ಅಪ್ಪಗಳವರು, ಇನ್ನೊಬ್ಬರು ಶ್ರೀ ಜತ್ತಿಯವರು. ಇಂದು ಅವರು ಉಪರಾಷ್ಟ್ರಪತಿ ಸ್ಥಾನದಲ್ಲಿದ್ದರೂ, ನನ್ನ ಪತ್ರಕ್ಕೆ, ಒಂದು ವಾರದೊಳಗಾಗಿ ಅವರಿಂದ ಉತ್ತರ ಪಡೆದಿದ್ದೇನೆ. ನನ್ನ ದುಃಖದುಮ್ಮಾನಗಳಿಗೆ ಸಾಂತ್ವನಪರ ಸುಖ ಸಂತೋಷಗಳಿಗೆ ಶ್ರೇಯೋಭಿಲಾಷೆಯ ಪತ್ರಗಳನ್ನವರು ಬರೆದಿದ್ದಾರೆ. ಪ್ರತಿ ಪತ್ರದಲ್ಲಿರುವ ಅವರ ಹರಕೆಯ ಮಾತುಗಳು ನನ್ನ ಬದುಕಿನ ಬೆನ್ನೆಲುವುಗಳು.

ನಾಡಿನೆದೆ ಬಯಲಿನಲ್ಲಿ ಬೆಳೆದು ನಿಂತಿದ್ದ ದುಷ್ಟವೃತ್ತಿಯ ಕಳೆಯನ್ನು ಕಿತ್ತಿ, ನಿಷ್ಠೆಯ ಹಲದಿಂದ ಉತ್ತು, ಅರವತ್ತು ವರ್ಷದ ಅನುಭವದ ಝುರಿ ಹರಿಸಿ ಅಲ್ಲಿ ಬಸವ ತತ್ವದ ಆದರ್ಶ ಬೀಜಗಳನ್ನು ಮತ್ತೊಮ್ಮೆ ನಾಡಿನುದ್ದಗಲಕ್ಕೂ ಬಿತ್ತಿದ ಶ್ರೀ ಜತ್ತಿ, ನನಗಂತೂ ಪ್ರಾತಃ ಸ್ಮರಣೀಯ ವ್ಯಕ್ತಿ.



## ಮನೆ — ಮನ

ಮನೆ ನೋಡಾ, ಬಡವರು : ಮನ ನೋಡಾ ಸಂಪನ್ನರು !
ಧನ ನೋಡಾ, ಬಡವರು : ಘನಮನ ಸಂಪನ್ನರು
ಕೂಡಲಸಂಗನ ಶರಣರು, ಕರುಳಿಲ್ಲದ ಕಲಿಗಳು
ಆರಿಗೂ ಉಪಮಿಸಬಾರದು.

— ಬಸವಣ್ಣನವರು

# ದಾಸೋಹ ಶಕ್ತಿ

೧

ಆಳೀತ ನೀಳಲ್ಲ; ಆಳ ನೀಳವ ಬಲ್ಲ;
ಏಳು ಬೀಳುಗಳಲ್ಲಿ ತಾಳ್ಮೆಯಿಂದಿರಬಲ್ಲ.
ಕಾಳು ಬಾಳಿಗೆ ಸಲ್ಲ; ಮೇಲು ಬಾಳಿನ ಮಲ್ಲ;
ನಾಳಿನಡಕಿಲಿನಲ್ಲಿ ಮೇಲೆರುವಾ ಕುಳ್ಳ.

೨

ಕಾಲ ತೂಗುವ ಶೆಟ್ಟಿ, ವ್ಯವಹಾರದಲಿ ಗಟ್ಟಿ,
ಕಲಿತ ನೀತಿಯ ದಿಟ್ಟ, ರಾಜಕೀಯದಿ ಪುಷ್ಟಿ,
ನೆಲೆಯರಿತ ದೇಶ ಜನ ಸೇವೆಯಲಿ ಬಲುತುಷ್ಟಿ
ಸೋಲರಿಯದಾ ಜಟ್ಟಿ, ಗೆಲುವ ಜನಕೀವ ದತ್ತಿ.

೩

ಎತ್ತಿ ಕಲ್ಯಾಣವನು ಮತ್ತೆ ತಾ ಬೆಳಗಿದನು
ಭಕ್ತಿಯಾ ಬೀಜವನು ನಾಡಿನಲಿ ಬಿತ್ತಿದನು.
ನಿತ್ಯ ಕಾಯಕರತನು, ಶರಣ ಸಂಭಾವಿತನು,
ಉತ್ತಮುಪರಾಷ್ಟ್ರಪತಿ ಬಸವನಂತೆಸೆಯುವನು.

೪

ಬಲು ಜತನ ಜನಶಕ್ತಿ, ಕಾರ್ಯಕೌಶಲಯುಕ್ತಿ,
ದಲಿತ ಜನರನುರಕ್ತಿ ಶರಣ ಧರ್ಮಾನುವರ್ತಿ
ಲಲಿತ ಸಜ್ಜನಭಕ್ತಿ ದಾಸೋಹದ ವೃತ್ತಿ
ಚೆಲುವೆತ್ತ ಜಸವೆತ್ತ ಬಸವಪ್ಪ ದಾನಪ್ಪ ಜತ್ತಿ.

೫

ಇರಲಿರಲಿ ನಾಡಿನಲಿ ಚಿರವಾಗಿ ಬಾಳಿರಲಿ
ಶರಣದನುಭಾವ ಚಿಂತನದಿ ಶಿರಬಾಗಿರಲಿ
ಶರಣ ಕಾಯಕ ಧರ್ಮ ವಚನ ಪ್ರಚಾರದಲಿ
ನೆರತ ತನುಮನಧನವು ಸುಪ್ರಸಾದದಿ ಬೆಳಗಲಿ

● ಕೆ. ದೊಡ್ಡನಗೌಡ

● [ ಶ್ರೀ ಕೆ. ದೊಡ್ಡನಗೌಡ ಜೋಳದರಾಶಿ ಅವರು ಸ್ವತಃ ಶರಣ ಜೀವಿಗಳು. ನಟನೆಯನ್ನು ಒಂದು ಕಲೆಯಾಗಿ ಕರಗತ ಮಾಡಿಕೊಂಡ ಅವರಿಗೆ ತೋರಿಕೆಯ ಸಜ್ಜನಿಕೆ ಯಾರದು ? ಸಹಜ ಸಜ್ಜನಿಕೆ ಯಾರದು ? – ಚೆನ್ನಾಗಿ ಗೊತ್ತು. ಶ್ರೇಷ್ಠ ಗಮಕಿ–ಕವಿಗಳಾಗಿರುವ ಅವರು ಜಾನಪದ ಶಬ್ದಗಳಲ್ಲಿಯೇ ಶ್ರೀ ಜತ್ತಿ ಅವರ ವ್ಯಕ್ತಿತ್ವವನ್ನು ಅರ್ಥಪೂರ್ಣವಾಗಿ ಸೆರೆ ಹಿಡಿದಿದ್ದಾರೆ. " ಆಳೀತ ನೀಳಲ್ಲ; ಆಳ ನೀಳವ ಬಲ್ಲ " ಎಂಬ ಒಂದು ಪಾದವೇ ಸಾಕು. ಶ್ರೀ ಜತ್ತಿ ಅವರ ಹೊರವ್ಮೈ–ಒಳವ್ಮೈ ತೋರಿಸಲು – ಸಂ. ]



# ' ವೀರನಾದರೆ ವೈರಿಗಳು ಮೆಚ್ಚಬೇಕು '

● ಚೆನ್ನಬಸವಪ್ಪ ಬೆಟ್ಟದೂರು

● [ ಶ್ರೀ ಚೆನ್ನಬಸವಪ್ಪ ಬೆಟ್ಟದೂರರನ್ನು ಬಹಳ ಜನರು ವಕೀಲರೆಂದು ಸಂಬೋಧಿಸುತ್ತಾರೆ. ಆದರೆ ಅವರು ವಕಾಲತ್ತು ಮಾಡಿದುದನ್ನು ನಾನು ನೋಡಲಿಲ್ಲ. ಅವರು ವೃತ್ತಿಯಿಂದ ನ್ಯಾಯವಾದಿಗಳು ಹೌದೋ ಅಲ್ಲವೋ; ಪ್ರವೃತ್ತಿಯಿಂದ ಮಾತ್ರ ನಿಷ್ಠುರವಾದಿಗಳು. " ಬಾರಕೋಲು " ಗುಪ್ತನಾಮದಿಂದ ಬರೆಯುವ ಶ್ರೀ ಚೆನ್ನಬಸವಪ್ಪನವರು. ಶ್ರೀ ಜತ್ತಿ ಅವರನ್ನು ಇಷ್ಟು ಮೆಚ್ಚಿಕೊಂಡಿದ್ದಾರೆಂದು ನಾನು ನಿರೀಕ್ಷಿಸಿರಲಿಲ್ಲ. ಲೇಖಕರೇ ಹೇಳುವಂತೆ ಇದೇ ಶ್ರೀ ಜತ್ತಿ ಅವರ ವೈಶಿಷ್ಟ್ಯ – ಸಂ. ]

ಯಾವುದೇ ವ್ಯಕ್ತಿ ರಾಷ್ಟ್ರದ ಉನ್ನತ ಸ್ಥಾನವನ್ನಲಂಕರಿಸಿದಾಗ ಸಹಜವಾಗಿಯೇ ಜನರು ಗೌರವ ತೋರಿಸುತ್ತಾರೆ; ತೋರಿಸಲೇ ಬೇಕಾಗುತ್ತದೆ. ಕೆಲವೊಮ್ಮೆ ಇದು ಅನಿವಾರ್ಯ. ಸ್ಥಾನ ಬಲದಿಂದ ಅವರು ಗೌರವಕ್ಕೆ ಅರ್ಹರಾಗಿರುತ್ತಾರೆ ಅಷ್ಟೆ. ಆದರೆ ಶ್ರೀ ಬಸಪ್ಪ ದಾನಪ್ಪ ಜತ್ತಿಯವರು ಮಾತ್ರ ಭಾರತದ ಉಪರಾಷ್ಟ್ರಪತಿಗಳಾಗಿರುವರೆಂಬ ಕಾರಣದಿಂದ ರಾಷ್ಟ್ರ ಗೌರವಕ್ಕೆ ಪಾತ್ರರಾಗಿಲ್ಲ; ಅವರು ತಮ್ಮ ಸಹಜ ನಡೆ–ನುಡಿಯಿಂದ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ. ಬಹಳ ದಿನಗಳ ಹಿಂದೆ– ಅಂದರೆ ಶ್ರೀ ಜತ್ತಿಯವರು ಮುಖ್ಯಮಂತ್ರಿಗಳಾಗಿದ್ದಾಗ ನಡೆದ ಘಟನೆ:

ಒಮ್ಮೆ ನಾನು ಮಾನ್ವಿಗೆ ಹೋಗುವಾಗ ಕಂಡಕ್ಟರನೊಬ್ಬನು ಹಣ ಪಡೆದುಕೊಂಡು ಟಿಕೇಟು ಕೊಡದೆ " ಕುಳಿತು ಕೊಳ್ಳಿರಿ. ಟಿಕೇಟು ನಿಮ್ಮನ್ನು ಮಾನ್ವಿಗೆ ಕರೆದು ಕೊಂಡು ಹೋಗಲಾರದು. ಕರೆದು ಕೊಂಡು ಹೋಗುವವನು ನಾನು. " ಎಂದು ಉದ್ಧಟತನದ ಉತ್ತರ ನೀಡಿದನಷ್ಟೇ ಅಲ್ಲ– ಮಾತಿಗೆ ಮಾತು ಬೆಳೆದು ಕಡೆಗೆ ನನ್ನನ್ನು ಹೊಡೆಯುವಷ್ಟರ ಮಟ್ಟಿಗೆ ಮುಂದುವರೆದಿದ್ದನು. ಇಂಥ ಘಟನೆ ಅದೇ ಮೊದಲನೆಯ ಸಲವಾಗಿರಲಿಲ್ಲ. ಬಸ್ ಪ್ರಯಾಣ ಮಾಡಿ

ದಾಗಲೆಲ್ಲ ಟಿಕೆಟ್ಟಿಗಾಗಿ ಕಂಡಕ್ಟರರೊಡನೆ ಕಾದಾಡುವುದೂ ಮೇಲಿನ ಅಧಿಕಾರಿಗಳಿಗೆ ದೂರುವುದೂ, ನಮ್ಮ ದೂರುಗಳು ಕವಣೆಗಲ್ಲಿನಂತೆ ಅತ್ತಲೇ ಹೋಗುವುದೂ ಸರ್ವೇ ಸಾಮಾನ್ಯವಾಗಿತ್ತು.

ನಾನು "ಈ ರೀತಿ ಪ್ರತಿದಿನ ಎಲ್ಲ ಕಂಡಕ್ಟರರು ಮಾಡಿದರೆ, ನಾಳೆ ಸರಕಾರಕ್ಕೆ ಹಾನಿಯಾಗಿ, ಸರಕಾರ ಮತ್ತಷ್ಟು ಪ್ರಯಾಣದ ದರಗಳನ್ನು ಏರಿಸುತ್ತದೆ. ಆಗ ಹೆಚ್ಚಿಗೆ ಹಣಕೊಡಬೇಕಾದವರು ನಾವು; ನೀನಲ್ಲ." ಎಂದಾಗ ಆತ "ಓಹೋ! ದೊಡ್ಡ ದೇಶ ಭಕ್ತರು! ದೇಶೋದ್ಧಾರ ಮಾಡಲು ಹೊರಟಿದ್ದಾರೆ. ನಿಮ್ಮಂಥವರನ್ನು ನಾನು ಬಹಳ ಜನರನ್ನು ನೋಡಿದ್ದೇನೆ." ಎಂದು ನುಡಿದುದನ್ನು ಕೇಳಿ ನಾನು ಬಸ್ ಇಳಿದವನೇ ಅಂಚೆ ಮನೆಗೆ ಹೋಗಿ ಅದೇ ಸಿಟ್ಟಿನಲ್ಲಿ ನಡೆದ ಘಟನೆಯನ್ನು ಯಥಾವತ್ತಾಗಿ ವಿವರಿಸಿ ಆಗ ಮುಖ್ಯ ಮಂತ್ರಿಗಳಾಗಿದ್ದ— ಈಗಿನ ಉಪರಾಷ್ಟ್ರಾಧ್ಯಕ್ಷರಾದ ಶ್ರೀ ಬಿ. ಡಿ. ಜತ್ತಿಯರಿವಗೆ ಅರ್ಜಿಯನ್ನು ಕಳುಹಿದೆ. ಒಂದು ವಾರ ದೊಳಗಾಗಿ ಇಲಾಖೆಯ ಮುಖ್ಯಾಧಿಕಾರಿಗಳಿಂದ "................ಕಂಡಕ್ಟರನ ವಿಚಾರಣೆಗಾಗಿ ಅಧಿಕಾರಿಗಳನ್ನು ನೇಮಿಸಲಾಗುವುದು. ದಯವಿಟ್ಟು ಸ್ಥಳ, ದಿನಾಂಕ ಮತ್ತು ಸಮಯವನ್ನು ತಿಳಿಸಬೇಕಾಗಿ ವಿನಂತಿ." ಎಂದು ಬರೆದು ಬಂದ ಓಲೆಯನ್ನು ನೋಡಿದಾಗ,ನನಗೆ ಅಚ್ಚರಿಯಾಯಿತು. ಒಂದು ವಾರದೊಳಗಾಗಿ ನನ್ನಿಂದ ಮುಖ್ಯ ಮಂತ್ರಿಗಳಿಗೆ, ಮುಖ್ಯ ಮಂತ್ರಿಗಳಿಂದ ಇಲಾಖೆಯ ಮುಖ್ಯಾಧಿಕಾರಿಗಳಿಗೆ, ಇಲಾಖೆಯ ಮುಖ್ಯಾಧಿಕಾರಿಗಳಿಂದ ಮತ್ತೆ ನನಗೆ. ಇಷ್ಟು ಸುತ್ತು; ಇಷ್ಟು ಶೀಘ್ರ !! ಅದು ಸರಕಾರಿ ಯಂತ್ರದಿಂದ !!! ಇದಕ್ಕೇನೇ ದಕ್ಷ ಆಡಳಿತವೆಂದು ಕರೆಯುವುದು. ನಾನು ಸರಕಾರದಿಂದ ಇಷ್ಟು ತೀವ್ರ ದಕ್ಷತೆಯನ್ನು ಕಂಡದ್ದು ಅದೇ ಮೊದಲನೆಯ ಸಾರೆಯಾಗಿತ್ತು. ಶ್ರೀ ಜತ್ತಿಯವರು ದಕ್ಷ ಆಡಳಿತಗಾರರೆಂಬುದನ್ನು ಮನಗಂಡೆ. ಸರಕಾರದ ವಿಳಂಬವನ್ನು ಕಂಡಾಗಲೆಲ್ಲ ಶ್ರೀ ಜತ್ತಿಯವರ ದಕ್ಷತೆಯು ನನ್ನ ಕಣ್ಣ ಮುಂದೆ ಸುಳಿದು ಹೋಗದೆ ಇರುವುದಿಲ್ಲ.

## ಸಾಮಾನ್ಯ ಭಾವನೆ

ರಾಜಕಾರಣಿಗಳೆಂದರೆ ಆಡುವುದಕ್ಕೂ ಮಾಡುವುದಕ್ಕೂ ತಾಳ– ಮೇಳವಿಲ್ಲದವರೆಂದೇ ಸಾಮಾನ್ಯ ಭಾವನೆಯಾಗಿದೆ. ಆದರೆ ಶ್ರೀ ಜತ್ತಿಯವರು ಮಾತಿಗೂ ಮಾಟಕ್ಕೂ ಅಂತರವನ್ನು ಕಾಣದವರಾಗಿದ್ದಾರೆ. ಒಮ್ಮೆ ಆಹಾರಮಂತ್ರಿಗಳಾಗಿದ್ದ ಶ್ರೀ ಜತ್ತಿಯವರನ್ನು ಕಾಣುವ ಪ್ರಸಂಗ ಬಂದಿದ್ದಿತು. ಹಲವರು ಹಲವಾರು

ಪ್ರಶ್ನೆಗಳನ್ನು ಕೇಳಿದರು. ಅವರ ಉತ್ತರ "ವಿಚಾರ ಮಾಡುತ್ತೇವೆ, ಪರಿಶೀಲಿಸುತ್ತೇವೆ," ಎಂದಿರದೆ ನೇರವಾಗಿರುತ್ತಿತ್ತು. ಕೆಲಸ ಆಗುವುದಿದ್ದರೆ ಆಗುತ್ತದೆ; ಆಗದಿದ್ದರೆ ಅದಕ್ಕೆ ಸೂಕ್ತ ಕಾರಣಗಳನ್ನು ವಿವರಿಸುತ್ತಿದ್ದುದರಿಂದ ಪ್ರಶ್ನೆ ಕೇಳಿದವರಿಗೆ ಸಮಾಧಾನದೊಡನೆ ಸಂತೋಷವೆನಿಸುತ್ತಿತ್ತು. ಸಜ್ಜೆ ಹೊರ ರಾಜ್ಯಗಳಿಗೆ ಸಾಗಿಸಲು ಸರಕಾರದ ನಿರ್ಬಂಧವಿರುವುದರಿಂದ ಕಲ್ಬುರ್ಗಿಯಲ್ಲಿ ಸಜ್ಜೆಯ ಧಾರಣೆ ಕುಸಿದು, ಕೇಳುವವರಿಲ್ಲದಂತಾಗಿದೆ. – ಎಂದು ನುಡಿದವರಿಗೆ "ಸಜ್ಜೆ ಸಾಗಿಸಲು ನಿರ್ಬಂಧವಿಲ್ಲ. ಬೇಕಾದರೆ ಇಲ್ಲೇ ಅಪ್ಪಣೆಕೊಡುತ್ತೇನೆ." ಎಂದಾಗ ನನ್ನ ಮನಸ್ಸಿನಲ್ಲಿ ಸಂತೋಷವುಕ್ಕಿತು.

ಮತ್ತಾರೋ ಬೆಲ್ಲ ತಯಾರಿಸುವುದರ ಬಗ್ಗೆ ಸರಕಾರದ ನಿರ್ಬಂಧವಿರುವುದನು ಶ್ರೀ ಜತ್ತಿಯವರ ಗಮನಕ್ಕೆ ತಂದಾಗ ಅವರ ಉತ್ತರ ಕೇಳಿ, ನಾನು ಆಶ್ಚರ್ಯ ಚಕಿತನಾದೆ: "ಸರಕಾರವು ಹೊರಡಿಸಿದ (ಆ) ಸುತ್ತೋಲೆಯನ್ನು ಪ್ರಶ್ನಿಸಿ ಯಾರಾದರು ನ್ಯಾಯಲಯಕ್ಕೆ ಹೋದರೆ ಇದರಲ್ಲಿ ಸರಕಾರಕ್ಕೆ ಸೋಲಾಗುವುದು." ಒಂದು ರೀತಿಯಲ್ಲಿ ಅವರ ಉತ್ತರವು ಸರಕಾರದ (ತಮ್ಮ ಖಾತೆಯ) ತಪ್ಪನ್ನು ಒಪ್ಪಿ, ಮುಂದೆ ಜನರು ಮಾಡಬೇಕೇನೆಂಬುದನ್ನು ನಿರ್ದೇಶಿಸಿದ್ದಿತು.

## ಪಾದಯಾತ್ರೆ

ಸಾಮಾನ್ಯವಾಗಿ ಆಹಾರ ಮಂತ್ರಿಗಳಾದವರು ಜನರ ಅಪ್ರಿಯತೆಯನ್ನು ಗಳಿಸಿದವರೇ ಹೆಚ್ಚು. ಆದರೆ ಶ್ರೀ ಬಿ. ಡಿ. ಜತ್ತಿಯವರು ತಮ್ಮ ಸ್ಪಷ್ಟ– ಅನುಮಾನಕ್ಕೆಡೆಇಲ್ಲದ– ಉತ್ತರಗಳಿಂದ ಜನರ ಮನ್ನಣೆಯನ್ನು ಗಳಿಸಿದ್ದರು.

ವಿಜಯ (ನಗರ)ದಿಂದ ಕಲ್ಯಾಣದೆಡೆಗೆ (ಹಂಪೆಯಿಂದ ಬಸವ ಕಲ್ಯಾಣಕ್ಕೆ) ನಡೆದ ಪಾದ ಯಾತ್ರೆಯಲ್ಲಿ ಕೆಲವು ದಿನಗಳು ಅವರೊಂದಿಗೆ ಭಾಗವಹಿಸುವ ಸುಯೋಗವು ನನಗೂ ಒದಗಿತ್ತು. ಪಾದಯಾತ್ರೆಯು ಯಾದಗಿರಿಯ ಶ್ರೀ ವಿಶ್ವನಾಥರೆಡ್ಡಿಯವರ ಕಟ್ಟು– ನಿಟ್ಟಾದ ಶಿಸ್ತಿನ ನಾಯಕತ್ವದಲ್ಲಿ ನಡೆದಿತ್ತು. ಪಾದಯಾತ್ರೆಗೆ ಜನಮನದಲ್ಲಿ ಗೌರವದ ಭಾವನೆ ಮೂಡಲು ಶ್ರೀ ಜತ್ತಿಯವರು ಮುಖ್ಯಕಾರಣರಾಗಿದ್ದರೆಂದರೆ ಯಾರೂ ಆಕ್ಷೇಪಿಸಲಾರರೆಂದೇ ನನ್ನ ಭಾವನೆ. ದಾರಿಯಲ್ಲಿ ಬರುವ ಊರುಗಳಲ್ಲಿ ಶ್ರೀ ಜತ್ತಿಯವರು ಮಹಾನುಭಾವ ಬಸವಣ್ಣನವರ ಬಗ್ಗೆ, ಕಾಯಕದ ಬಗ್ಗೆ, ಷಟ್‌ಸ್ಥಲ ಸಿದ್ಧಾಂತ ಬಗ್ಗೆ, ವಿಶ್ವಕಲ್ಯಾಣದ ಬಗ್ಗೆ ಮಾತಾಡುತ್ತಿದ್ದರು. ಅವರ ಮಾತುಗಳನ್ನು ಕೇಳು

ತ್ತಿದ್ದ ನಮಗೆ ಇಷ್ಟೆಲ್ಲ ತತ್ವ, ಸಿದ್ಧಾಂತಗಳನ್ನು ಆಳವಾಗಿ ಅಭ್ಯಸಿಸಲು ಇವರಿಗೆ ಸಮಯವಾದರೂ ಯಾವಾಗ ಸಿಕ್ಕಿತು— ಎಂದು ಅಚ್ಚರಿಯಾಗುತ್ತಿದ್ದಿತು.

ಪಾದಯಾತ್ರೆಯಲ್ಲಿ ನಡೆದು ರೂಢಿಯಿಲ್ಲದ ಶ್ರೀ ಜತ್ತಿಯವರ ಕಾಲುಗಳೂ ಬೊಬ್ಬೆ ಹೋಯ್ದು, ಒಡೆದುದ್ದರಿಂದ ಕಾಲಿಗೆ ಬಟ್ಟೆ ಕಟ್ಟಿ ಕೊಂಡರೂ ನಡೆಯುವುದನ್ನು ನಿಲ್ಲಿಸಿರಲಿಲ್ಲ; ಮುಖದಲ್ಲಿ ನೋವಿನ ಛಾಯೆಸುಳಿಯದಂತೆ ಹಸನ್ಮುಖರಾಗಿಯೇ ಇದ್ದರು. ಬಸವ ಕಲ್ಯಾಣ ತಲುಪಿ ವಿಶ್ರಮಿಸಿದಾಗ, ಸಹ ಯಾತ್ರಿಕರೊಬ್ಬರು "............ಅಂತೂ ಬಹಳ ದಣಿವಿಕೆಯಾಯಿತು. ಕಾಲುಗಳಿಗೆ ಬಹಳ ನೋವಾದಂತೆ ತೋರುತ್ತದೆ." —ಎಂದು ಶ್ರೀ ಜತ್ತಿಯವರ ಬಗ್ಗೆ ಅನುತಾಪ ವ್ಯಕ್ತಗೊಳಿಸಿ, ಸಹಾನು ಭೂತಿಯಿಂದ ನುಡಿದರು. ಆಗ ಶ್ರೀ ಜತ್ತಿಯವರು ಆಡಿದ ಮಾತುಗಳು ಅವರ ಅಂತರಂಗವನ್ನು ಬಹಿರಂಗ ಗೊಳಿಸುತ್ತವೆ: "ಈ ಕಾಲು ಬೇನೆ ಒಂದು ದಿನ ಇದ್ದೀತು; ಎರಡು ದಿನ ಇದ್ದೀತು. ಆ ಮೇಲೆ ತಾನಾಗಿಯೇ ಹೋಗುತ್ತದೆ. ಆದರೆ ಕಲ್ಯಾಣದ ಕಾರ್ಯ ನಿರಂತರ ನಡೆಯಬೇಕಾದುದು. ಅದರ ಮುಂದೆ ನ(ಮ)ನಗಾದ ಕಾಲು ಬೇನೆ ಎಷ್ಟರದು ! ಶರಣರಿಗಾದ ಕಷ್ಟ (ಹಿಂಸೆ)— ತೊಂದರೆಯೇನು ನಮಗಾಗಿಲ್ಲ. ಇಷ್ಟು ಕೂಡ ಸಹಿಸುವುದು ನಮ್ಮಿಂದಾಗದಿದ್ದರೆ ಬಸವಣ್ಣನವರ, ಶರಣರ ಹೆಸರಾದರೂ ಏಕೆ ಹೇಳಿ ಕೊಳ್ಳಬೇಕು ?" ಜನತೆಯ ಕಲ್ಯಾಣದಲ್ಲಿ ತಮ್ಮ ನೋವನ್ನು ಮರೆಯುವ ಶ್ರೀ ಜತ್ತಿಯವರ ಮಹೋನ್ನತ ಭಾವನೆಯನ್ನು ಮನದಂದು ಯಾರೂ ತಲೆಬಾಗಲೇ ಬೇಕು.

## ಹಣದ ಸದುಪಯೋಗ

ರಾಯಾಚೂರಿನ ಕಿಲ್ಲೇದ ಮಠದಲ್ಲಿ ಮಾನ್ವಿ ತಾಲೂಕಿನ ಗೋರ್ಕಲ್ಲು ಗ್ರಾಮದ ಶ್ರೀ ಕರಿಬಸವ ಕವಿಗಳ ಶ್ರೀ ಅಮರೇಶ್ವರ ಪುರಾಣವನ್ನು ಉದ್ಘಾಟಿಸುತ್ತ "...............ಕುರ್ಡಿಯ ಗೋರ್ಕಲ್ಲು ಈಶ್ವರಪ್ಪನವರಂತೆ ಉದಾರ ಹೃದಯದಿಂದ ಸಹಾಯಮಾಡಿದರೆ ಶ್ರೀ ಅಮರೇಶ್ವರ ಪುರಾಣದಂತಹ ಒಳ್ಳೆಯ ಕೃತಿಗಳು ಬೆಳಕಿಗೆ ಬರುತ್ತವೆ. ಯಾವುದೊಂದು ಸಂಸ್ಥೆಗೆ— ವ್ಯಕ್ತಿಗೆ ಹಣ ಕೊಡುವುದಕ್ಕಿಂತ, ಯಾವುದಕ್ಕಾಗಿ ನಾವು ಸಹಾಯ ಮಾಡಬೇಕೆನ್ನುತ್ತೇವೆಯೋ ಅದನ್ನೇ ನಾವು ಮಾಡಿ ಆ ಸಂಸ್ಥೆಗೆ, ವ್ಯಕ್ತಿಗೆ ವಹಿಸಿ ಕೊಟ್ಟರೆ ಹಣದ ದುರುಪಯೋಗವಾಗುವುದು ತಪ್ಪುತ್ತದೆ. ಶ್ರೀ ಈಶ್ವರಪ್ಪನವರು ಹಾಗೆ ಮಾಡಿದುದು ಶ್ಲಾಘನೀಯ. ನಾವು ಬಸವ ಸಮಿತಿಯಿಂದ ಪ್ರಕಟವಾದ ಬೇರೆ

ಬೇರೆ ಭಾಷೆಯ ಬಸವಣ್ಣನವರ ವಚನಗಳನ್ನು ಬಬ್ಬೊಬ್ಬರಿಗೆ ಇಂತಿಷ್ಟು ಪ್ರತಿಗಳನ್ನು ಅಚ್ಚು ಮಾಡಿಸಿಕೊಡಬೇಕೆಂದು ಕೇಳಿಕೊಂಡು ಮಾಡಿಸಿದ್ದೇವೆ. ಹಣದ ಸದುಪಯೋಗವಾಯಿತು. ಲೆಕ್ಕ ಆಡಿಟ್ ಮಾಡುವ ಕಷ್ಟ ತಪ್ಪಿತು. ಹೀಗಾದರೆ ಕೆಲಸ ಎಷ್ಟು ಹಗುರ." ಈ ಮಾತುಗಳನ್ನು ದಾನಿಗಳೂ ದಾನ ಪಡೆಯುವವರಿಬ್ಬರೂ ನೆನಪಿನಲ್ಲಿಡ ಬೇಕಾದುದು ಅತ್ಯಗತ್ಯ.

## ಸುಳ್ಳು ವರದಿ

ಎಲ್ಲಿಯೇ ಹೋದರೂ ಬೇರೆ ಮಹಾ ಪುರುಷರೊಡನೆ, ಅವರ ತತ್ವಗಳೊಡನೆ ಬಸವಣ್ಣನವರನ್ನು, ಅವರ ತತ್ವಗಳನ್ನು ಹೋಲಿಸಿ ಮಾತಾಡುವುದು ಶ್ರೀಜತ್ತಿಯವರ ಅಭ್ಯಾಸವಾದರೂ ಅವರು ಮಾತಾಡದ ವಿಷಯವನ್ನು "ಭಗವದ್ಗೀತೆಗಿಂತ ಬಸವ ಗೀತೆ (ವಚನ) ಮೇಲು" – ಎಂದು ಮಾತಾಡಿದರು ಎಂದು ಅವರ ಉತ್ಕರ್ಷವನ್ನು ಸಹಿಸದ ಪತ್ರಿಕೆಯೊಂದು ಸುಳ್ಳು ವರದಿಯನ್ನು ಮಾಡಿ, ವಿನಾ ಕಾರಣ ಅವರ ವಿರುದ್ಧ ಒಂದುವರ್ಗದ ಜನರನ್ನು ಎತ್ತಿ ಕಟ್ಟಲು ಹವಣಿಸಿತು. ಕೂಡಲೇ ಶ್ರೀ ಜತ್ತಿಯವರು ಪ್ರಾಂಜಲ ಮನಸ್ಸಿನಿಂದ ತಾವು ಆ ರೀತಿ ಆಡಿಲ್ಲವೆಂದು ಸ್ಪಷ್ಟೀಕರಣ ನೀಡಿದರು. ಪತ್ರಿಕೆಯ ಉದ್ದೇಶ ಶ್ರೀ ಜತ್ತಿಯವರ ವಿರುದ್ಧ ಜನರನ್ನು ಎತ್ತಿ ಕಟ್ಟುವುದು ಈಡೇರಲಿಲ್ಲ. ಆಮೇಲೆ ನಾನು, ಪತ್ರಿಕೆ ಹುಟ್ಟಿಸಿ ಹೇಳಿದ ವಿಷಯವನ್ನೇ ಎಂದರೆ ಬಸವಗೀತೆ, ಭಗವದ್ಗೀತೆಗಿಂತ ದೊಡ್ಡದು ಎಂಬುದನ್ನೇ ವಿಷಯವನ್ನಾಗಿ ಮಾಡಿಕೊಂಡು ಲೇಖನವನ್ನು ಪ್ರಕಟಿಸಿದ ಪುಸ್ತಕವನ್ನು ಆ ಪತ್ರಿಕೆಗೆ ಕಳಿಸಿದೆ. ಶ್ರೀ ಜತ್ತಿಯವರಬಗ್ಗೆ ಕೋಲಾಹಲವೆಬ್ಬಿಸಿದ ಆ ಪತ್ರಿಕೆ ಬಾಯಿ ಮುಚ್ಚಿಕೊಂಡು ಸುಮ್ಮನಾಯಿತು. ಉತ್ತರಿಸುವ ಗೊಡವೆಗೇ ಹೋಗಲಿಲ್ಲ. ಕಾರಣವಿಷ್ಟೇ: ಶ್ರೀ ಜತ್ತಿಯವರು ರಾಜಕಾರಣಿಗಳು. ಈ ರೀತಿ ಅಪ ಪ್ರಚಾರದಿಂದ ಅವರ ಜನಪ್ರಿಯತೆಯನ್ನು ಕಡಿಮೆ ಮಾಡಬೇಕೆಂಬ ಹೀನ ಆಸೆ.

ಶ್ರೀ ಜತ್ತಿಯವರಿಗೆ ಆಗದವರು (ಶತೃಗಳೆನ್ನೋಣವೇ ?) ಅಡೆ–ತಡೆಗಳನ್ನೊಡ್ಡಿದರೂ ಅವುಗಳ ಬಗ್ಗೆ ಅವರು ಎಂದೂ ಮನಸ್ಸು ಕಹಿ ಮಾಡಿಕೊಂಡು ಮೋರೆ ತಿರುವಿದವರಲ್ಲ; ಅದಕ್ಕೆ ಬದಲಾಗಿ ಬಂದ ಅಡೆ–ತಡೆ, ತೊಡಕು–ತೊಂದರೆಗಳನ್ನು ಮೆಟ್ಟಲುಗಳನ್ನಾಗಿ ಮಾಡಿಕೊಂಡು ಮೇಲೇರಿದವರು. ಇವರ ಈ ನಡತೆ ನಮ್ಮ ತರುಣರಿಗೆ ಅನುಕರಣೀಯವಾಗಿದೆ; ದಾರಿ ದೀಪವಾಗಿದೆ.

ಶ್ರೀ ಜತ್ತಿಯವರ ಆಚರಣೆ ಅವರ ವೈರಿಗಳನ್ನು ಕೂಡ ಮೂಕರನ್ನಾಗಿ ಮಾಡಿದೆ. ಇದಕ್ಕೆ ಕಾರಣವಿಷ್ಟೇ: ಅವರು ಸದಾ ರಾಜಕಾರಣವೆಂದು ಸಂಕು

ಚಿತ ದೃಷ್ಟಿಯುಳ್ಳವರಾಗಿಲ್ಲ. ಜನಹಿತ – ಕಲ್ಯಾಣದ ಕಾರ್ಯಗಳಿಗಾಗಿ ಪ್ರತಿ-ಪಕ್ಷದವರೊಂದಿಗೂ ಕೂಡಿ ನಡೆಯುವ ಧೀರೋದಾತ್ತತೆ ಅವರಲ್ಲಿ ಮನೆಮಾಡಿದೆ. ಲೋಕ ಸೇವಕ ಸಂಘದೊಡನೆ ವಿಶೇಷ ಸಂಭಂಧವನ್ನು ಹೊಂದಿದ ಶ್ರೀ ವಿಶ್ವನಾಥರೆಡ್ಡಿ ಮುದ್ನಾಳ, ಯಾದಗಿರಿ ಇವರೊಡನೆ ಕಲ್ಯಾಣದ ಪಾದಯಾತ್ರೆ, ಬಸವ ಸಮಿತಿ — ಮೊದಲಾದ ಕಾರ್ಯಕ್ರಮಗಳಲ್ಲಿ ಕೂಡಿ ಕೆಲಸಮಾಡಿದ್ದಾರೆ; ಮಾಡುತ್ತಿದ್ದಾರೆ. ಅಂತೆಯೇ ಶ್ರೀ ಜತ್ತಿಯವರನ್ನು ಎಲ್ಲರೂ (ಎಲ್ಲ ರಾಜಕೀಯ ಪಕ್ಷಗಳವರೂ) ತಮ್ಮವನೆಂದು ಭಾವಿಸಿದ್ದಾರೆ. ಭಾವೈಕ್ಯತೆಯನ್ನು ಇದಕ್ಕಿಂತ ಸಮರ್ಥವಾಗಿ ಸಾಧಿಸಿ ತೋರಿಸುವುದು ಶ್ರೀ ಜತ್ತಿಯವರಿಗಲ್ಲದೆ ಇನ್ನಾರಿಗೆ ಸಾಧ್ಯ! "ವೀರನಾದರೆ ವೈರಿಗಳು ಮೆಚ್ಚಬೇಕು" ಎಂಬ ಮಹಾನುಭಾವ ಬಸವಣ್ಣನವರ ವಚನ ಶ್ರೀ ಜತ್ತಿಯವರನ್ನು ನೆನೆದಾಗಲೆಲ್ಲ ನೆನಪಾಗುತ್ತದೆ.

## ಬಚ್ಚ ಬರಿಯ ಬಸವ

ಯಾವ ಸ್ಥಾನದಲ್ಲೇ ಇರಲಿ – ಉಪಮಂತ್ರಿಯಾಗಿರಲಿ, ಮಂತ್ರಿಯಾಗಿರಲಿ, ಮುಖ್ಯ ಮಂತ್ರಿಯಾಗಿರಲಿ, ಲೆಫ್ಟನೆಂಟ್ ಗೌರ್ನರ್‌ರಾಗಿರಲಿ, ರಾಜ್ಯಪಾಲರಾಗಿರಲಿ, ಉಪರಾಷ್ಟ್ರಪತಿಯಾಗಿರಲಿ – ಅಂತರಂಗದಲ್ಲಿ ಮಾತ್ರ ಬಸವಣ್ಣನವರಂತೆ ("ಬಚ್ಚ ಬರಿಯ ಬಸವನೆನಿಸಯ್ಯ!") ಬರಿಯ 'ಜತ್ತಿಯವರೇ'. ಅಷ್ಟು ನಿರಹಂಕಾರಿ. (ಅಜೇಯ ಜಟ್ಟಿ) ಶ್ರೀ ಜತ್ತಿಯವರು ತಮ್ಮನ್ನು ತಾವು ನಿಗ್ರಹಿಸಿಕೊಂಡವರು; ತತ್ವನಿಷ್ಠರು; ಬಸವಣ್ಣನವರ ತತ್ವ ಆಚರಣೆಗಳು ವಿಶ್ವಕಲ್ಯಾಣಕ್ಕೆ ಸಾಧನಗಳು ಎಂದು ನೆರೆನಂಬಿದವರು; ವಿಶ್ವದ ಮಹಾ ಪುರುಷರು ಭೋಧಿಸಿದ ತತ್ವಗಳು ಬಸವಣ್ಣನವರ ವಚನಗಳಲ್ಲಿ ನಿಚ್ಚಳವಾಗಿ ಮೂಡಿಬಂದಿವೆ – ಎಂದು ಪ್ರತಿಪಾದಿಸುವ ಎಂಟೆದೆಗಾರರು.

ಯಾವ ಪದವಿಗೇರಿದರೂ ಆ ಪದವಿಗಿಂತಲೂ ಶ್ರೀ ಜತ್ತಿಯವರು ಮೇಲೆ ಎದ್ದು ಕಾಣುತ್ತಾರೆ. ಇದೇ ಇವರ ವೈಶಿಷ್ಟ್ಯ!





ಮುಂಬೈರಾಜ್ಯ ಶ್ರೀ ಬಿ. ಜಿ. ಖೇರರ ಸಂಪುಟದಲ್ಲಿ ಪಾರ್ಲಿಮೆಂಟರಿ ಕಾರ್ಯದರ್ಶಿಗಳಾಗಿದ್ದ ಶ್ರೀ ಬಿ. ಡಿ. ಜತ್ತಿ ಅವರು (೧೯೪೮–೪೯)



ಸಾಧ್ವಿ ಶಿರೋಮಣಿ ಸರಳತೆಯಗಣಿ ಶ್ರೀಮತಿ ಸಂಗವ್ವ ಜತ್ತಿ ಅವರು

# ಹಳ್ಳಿಯಿಂದ ದಿಳ್ಳಿವರೆಗೆ

● ಜಿ. ಎಸ್. ಬಾಗಲಕೋಟಿ ವಕೀಲರು, ಜಮಖಂಡಿ

● [ ಶ್ರೀ ಜತ್ತಿ ಅವರ ಸ್ವತಾಲೂಕಿನವರಾದ ಶ್ರೀ ಜಿ. ಎಸ್. ಬಾಗಲಕೋಟಿ ವಕೀಲರು ಶ್ರೀ ಜತ್ತಿ ಅವರನ್ನು ಸಮೀಪ ದಿಂದ ಅಭ್ಯಸಿಸಿ ತಮ್ಮ ಪ್ರೀತಿಯ ನುಡಿಮುತ್ತುಗಳನ್ನು ಕೋದಿದ್ದಾರೆ. ಹಳ್ಳಿಯಿಂದ ದಿಳ್ಳಿವರೆಗೆ ಶ್ರೀ ಜತ್ತಿ ಅವರು ಒಂದೊಂದೇ ಮೆಟ್ಟಲನ್ನು ಹೇಗೆ ಹತ್ತಿದರು ಎಂಬುದನ್ನು ವಿವರಿಸಿದ್ದಾರೆ. — ಸಂ. ]

೧೯೭೪ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲ್ಪ ಡುವಂಥ ವರುಷ. ಅಂದು ಕನ್ನಡಾಂಬೆಯ ಸುಪುತ್ರನೊಬ್ಬ ದೇಶದ ಉನ್ನತ ಹುದ್ದೆಯನ್ನು ವಹಿಸಿಕೊಂಡ. ಕನ್ನಡ ನಾಡಿನ ಜನ ಸಂತೃಪ್ತ ಭಾವನೆಯಿಂದ ತಣಿಯಿತು. ಅಂದು ಜನನಾಯಕ ಶ್ರೀ ಬಿ. ಡಿ. ಜತ್ತಿಯವರು ಭಾರತದ ಉಪರಾಷ್ಟ್ರಪತಿಗಳಾಗಿ ಅಧಿಕಾರ ವಹಿಸಿಕೊಂಡರು.

ಬಾಗಿದ ತಲೆ, ಮುಗಿದ ಕೈ, ಎಂಥವರನ್ನು ಆಕರ್ಷಿಸುವ ನಗೆ ಮುಖದ ಸ್ವಾಗತ. ನಮ್ರತೆಯೇ ಮೈವೆತ್ತಿದಂತೆ "ಎನಗಿಂತ ಕಿರಿಯರಿಲ್ಲ" ಎಂಬ ಭಾವ. ಇದರ ಜೊತೆ ಪ್ರಮಾಣಿಕತೆ, ಸಾತ್ವಿಕ ಸರಳ ಜೀವನ, ಕಾಯಕ ನಿಷ್ಠೆ, ಹಿಡಿದ ಕಾರ್ಯವನ್ನು ಯಶಸ್ವಿಯಾಗಿ ಮುಗಿಸುವ ಛಲ, ಇವು ಶ್ರೀ ಬಿ. ಡಿ. ಜತ್ತಿ ಯವರ ಗೆಲುವಿನ ರಹಸ್ಯ.

ಹಳ್ಳಿಯಿಂದ ದಿಲ್ಲಿಗೆ ಎಂಬ ಗಾಂಧೀಜಿಯವರ ಕನಸು ಶ್ರೀ ಬಿ. ಡಿ. ಜತ್ತಿ ಯವರ ವಿಷಯದಲ್ಲಿ ನನಸಾಗಿದೆ. ಶ್ರೀ ಜತ್ತಿಯವರು ಸಾವಳಗಿಯ ಪಂಚಾ ಯತ ಚೇಯರಮನ್ ಪದವಿಯಿಂದ ಹಿಡಿದು ಜಮಖಂಡಿ ಪುರಸಭೆಯ ಸದ ಸ್ಯತ್ವ, ಪ್ರಜಾ ಪರಿಷತ್ತಿನ ಕಾರ್ಯದರ್ಶಿತ್ವ, ಮುಖ್ಯಮಂತ್ರಿ ಪದವಿ; ನಂತರ ವಿಲೀನ ಜಮಖಂಡಿ ಪ್ರತಿನಿಧಿಯಾಗಿ ಮುಂಬಯಿ ವಿಧಾನ ಸಭೆಗೆ ನಾಮ ಕರಣ. ಶ್ರೀ ಬಿ. ಜಿ. ಖೇರರ ಸಂಸತ್ ಕಾರ್ಯದರ್ಶಿ, ಆ ಮೇಲೆ ಶ್ರೀ ಮೊರಾರಜಿ ಸಚಿವ ಸಂಪುಟದಲ್ಲಿ ಉಪ ಸಚಿವ, ನಂತರ ಸಚಿವ ಸ್ಥಾನ.

೧೯೫೬ ಬಂದಿತು. ವಿಶಾಲ ಮೈಸೂರಾಯಿತು. ಶ್ರೀ ಬಿ. ಡಿ. ಜತ್ತಿಯವರಿಗೆ ಮಂತ್ರಿತ್ವವಿಲ್ಲದಾಯಿತು. ಆದರೆ ರಾಜ್ಯ ಭೂಸುಧಾರಣೆ ಆಯೋಗದ ಅಧ್ಯಕ್ಷರಾಗಿ ಐದೇ ತಿಂಗಳಲ್ಲಿ ವರದಿ ಒಪ್ಪಿಸಿದ ಶ್ರೀ ಬಿ. ಡಿ. ಜತ್ತಿಯವರಿಗೆ ಮೈಸೂರಿನ ಮುಖ್ಯ ಮಂತ್ರಿತ್ವವೇ ಕಾದಿತ್ತು. ಮುಖ್ಯ ಮಂತ್ರಿಯಾಗಿ ದಕ್ಷ ಮತ್ತು ಪ್ರಾಮಾಣಿಕ ಆಳಿಕೆಯನ್ನು ರಾಜ್ಯಕ್ಕೆ ಒದಗಿಸಿಕೊಟ್ಟ ಶ್ರೇಯಸ್ಸು ಅವರಿಗೇನೇ ಸಲ್ಲುತ್ತದೆ. ಮುಂದೆ ಆರ್ಥಿಕಮಂತ್ರಿ, ಆಹಾರ ಮಂತ್ರಿಯಾಗಿಯೂ ಸಮರ್ಪಕವಾಗಿ ಸೇವೆ ಸಲ್ಲಿಸಿದರು.

ಆಮೇಲೆ ರಾಜ್ಯದ ರಾಜಕೀಯದಲ್ಲಿ ಬದಲಾವಣೆ. ಹಲವರ ಊಹೆಗೂ ಮೀರಿ ಶ್ರೀ ಬಿ. ಡಿ. ಜತ್ತಿಯವರು ಪಾಂಡಿಚೇರಿಯ ಲೆಫ್ಟಿನೆಂಟ ಗವ್ಹರ್ನರರಾದರು. ಶ್ರೀ ಬಸವ ಕೃಪೆ, ಮಾತಾಜಿಯವರ ಆಶೀರ್ವಾದದಿಂದ ಅವರು ಓರಿಸ್ಸಾದ ರಾಜ್ಯಪಾಲರೂ ಆದರು. ಸ್ವಶಕ್ತಿಯಿಂದ ಎತ್ತರದ ನಾಯಕತ್ವಕ್ಕೆ ಏರಿದ ಶ್ರೀ ಬಿ. ಡಿ. ಜತ್ತಿಯವರು ರಾಜಕೀಯ ಕಲೆಯನ್ನು ಚೆನ್ನಾಗಿ ಬಲ್ಲ ಚತುರ ರಾಜಕಾರಣಿ. ಎಂಥ ಸಂದಿಗ್ಧ ಪರಿಸ್ಥಿತಿಯನ್ನು ಯಶಸ್ವಿಯಾಗಿ ಎದುರಿಸುವ ಶಕ್ತಿಯನ್ನು, ಚಾಣಾಕ್ಷತೆಯನ್ನು, ಅನುಭವವನ್ನೂ ಪಡೆದಿದ್ದಾರೆ. ರಾಜಕೀಯ ಅಸ್ಥಿರತೆಯಿಂದ ತೊಳಲುತಿದ್ದ ಓರಿಸ್ಸಾಕ್ಕೆ ಸ್ಥಿರ ಸರಕಾರವನ್ನು ಒದಗಿಸಿದ ರಾಜಕೀಯ ಪಟುತ್ವ ಶ್ರೀ ಜತ್ತಿ ಅವರದು

ಶ್ರೀ ಬಿ. ಡಿ. ಜತ್ತಿಯವರ ಬಹುಮುಖದ ಸೇವೆ ಅವರ ದಕ್ಷತೆಗೆ ಒಂದು ನಿದರ್ಶನ. "ಕಾಯಕವೇ ಕೈಲಾಸ" ವೆಂದು ಮನಃಪೂರ್ವಕವಾಗಿ ನಂಬಿದ ಅವರು ಸದಾ ಕಾಯಕ ನಿರತರು, ಅಪ್ರತಿಮ ಶ್ರೀ ಬಸವ ಭಕ್ತರು. ಶ್ರೀ ಬಸವೇಶ್ವರರ ಅಷ್ಟ ಶತಮಾನೋತ್ಸವ, ಬೆಂಗಳೂರಿನ ಬಸವ ಭವನ ನಿರ್ಮಾಣ, ಶರಣ ಸಾಹಿತ್ಯ ಪ್ರಸಾರದ ಬಹುಪಾಲು ಶ್ರೇಯಸ್ಸು ಶ್ರೀ ಬಿ. ಡಿ. ಜತ್ತಿಯವರಿಗೆ ಸಲ್ಲುತ್ತದೆ. ಅವರು ಬಸವ ಸಮಿತಿಯ ಮತ್ತು ವಿಜಾಪೂರ ಜಿಲ್ಲೆಯ ಪ್ರಸಿದ್ಧ ವಿದ್ಯಾ ಸಂಸ್ಥೆಯಾದ ಬಿ. ಎಲ್. ಡಿ. ಇ. ಅಸೋಸಿಯೇಶನ್‌ದ ಅಧ್ಯಕ್ಷರೂ ಆಗಿದ್ದಾರೆ.

ಇಂಥ ವ್ಯಕ್ತಿ ಉಪರಾಷ್ಟ್ರಪತಿಯಾದುದು ನಮ್ಮೆಲ್ಲರ ನಾಡಿನ ಭಾಗ್ಯ. ಎಂಥ ಕಾರ್ಯವನ್ನೂ ಯಶಸ್ವಿಯಾಗಿ ನಿರ್ವಹಿಸುವ ಕಲೆಯನ್ನು ಬಲ್ಲ ಶ್ರೀ ಬಿ. ಡಿ. ಜತ್ತಿಯವರು ಭಾರತದ ಜನಪ್ರಿಯ ಉಪರಾಷ್ಟ್ರಪತಿಗಳಾಗಿದ್ದಾರೆ. ಚತುರ ರಾಜಕಾರಣಿಗಳೂ, ಕಾಯಕನಿಷ್ಠರೂ, ಧರ್ಮ ನಿರಪೇಕ್ಷ ಬುದ್ಧಿಯುಳ್ಳವರೂ ಆದ ಅವರಿಗೆ ಉಜ್ವಲ ಭವಿಷ್ಯ ಕಾದಿದೆ.

# ಬಸವಣ್ಣನವರ ಅಪರಾವತಾರ ಶ್ರೀ ಜತ್ತಿ

● ಗುರುಲಿಂಗಪ್ಪ ತಳ್ಳಳ್ಳಿ ಸೇಡಂ,
ಎಂ. ಎ. ಬಿ. ಎಡ್.

● [ ಶ್ರೀ ಗುರುಲಿಂಗಪ್ಪ ತಳ್ಳಳ್ಳಿ ಅವರು ವಿದ್ಯಾರ್ಥಿ ದೆಸೆಯಿಂದಲೂ ಉತ್ತಮ ಲೇಖಕರು. ಆದರೆ ಅವರಿಗೆ ಲೇಖನ ಒರೆಯುವ ಹಂಬಲ ಮಾತ್ರ ಇಲ್ಲ. ಹುಮ್ನಾಬಾದ ಜ್ಯೂನಿಯರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಅವರು ಶ್ರೀ ಜತ್ತಿ ಅವರ ಮೇಲಿನ ಅಭಿಮಾನದಿಂದಲೋ, ನನ್ನ ಮೇಲಿನ ಸ್ನೇಹದಿಂದಲೂ ಈಗ ಮಾತ್ರ ಉತ್ತಮ ಲೇಖನ ಬರೆದು ಕಳಿಸಿದ್ದಾರೆ. ಶ್ರೀ ಗುರುಲಿಂಗಪ್ಪನವರ ತಲೆಯೊಳಗಿನ ವಿಚಾರಗಳೆಲ್ಲ ಕಾಗದದ ಮೇಲೆ ಮೂಡಿದರೆ ಅವರೊಬ್ಬರು ಚಿಂತನಶೀಲ ಲೇಖಕರೆನಿಸಿಕೊಳ್ಳುತ್ತಾರೆ. ಆದರೆ ಅವರಿಗೆ ಬರೆಯುವ ಹಂಬಲದೇ ಕೊರತೆ. – ಸಂ. ]

“ ಕನ್ನಡಿಯ ನೋಡುವಣ್ಣಗಳಿರಾ ಜಂಗಮವ ನೋಡಿರೇ
ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ
ಸ್ಥಾವರ ಜಂಗಮ ಒಂದೇ ಎಂದುದು ಕೂಡಲಸಂಗನ ವಚನ ”

.................................................

ಜಗದಣ್ಣ ಬಸವಣ್ಣನವರ ಮಹಾನ್ ನೇತೃತ್ವದಲ್ಲಿ ಜರುಗಿದ ಹನ್ನೆರಡನೆಯ ಶತಮಾನದ ಧಾರ್ಮಿಕ, ಸಾಮಾಜಿಕ ಕ್ರಾಂತಿಯ ಇತಿಹಾಸವನ್ನು ಓದಿದಾಗ, ಅದರಲ್ಲಿ ಭಾಗಿಗಳಾದ ಶಿವಶರಣರ–ಶರಣೆಯರ ಅದ್ವಿತೀಯ ಅನುಭಾವಿ ಜೀವನಗಳನ್ನು ಅಭ್ಯಸಿಸಿದಾಗ, ‘ ಅಯ್ಯೋ ಆ ಕಾಲದಲ್ಲಿ ಬದುಕಿರುವ ಭಾಗ್ಯ ನಮ್ಮದಾಗಿರಲಿಲ್ಲವೆ ! ’ ಎಂಬ ಒಂದು ರೀತಿಯ ಕಳವಳ, ತಳಮಳ ಹೃದಯದಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಅಂಥದಕ್ಕೆಲ್ಲ ಕಾರಣವಿಲ್ಲೆಂಬ ವಿಷಯ ಇತ್ತೀಚೆಗೆ ನನ್ನ ಅನುಭವಕ್ಕೆ ಬರುತ್ತಿದ್ದುದು ಸಮಾಧಾನಕ್ಕೆ ಕಾರಣವಾಗಿದೆ

ಕರುಣಾಕರನಾದ ಪರಮಾತ್ಮನು ನಮಗೆ ಬೇಕಾದುದನ್ನೆಲ್ಲ ನಮ್ಮೆದುರಿನಲ್ಲಿಯೇ ಪಸರಿಸಿದ್ದಾನೆ. ಅದನ್ನು ಕಾಣುವಕಣ್ಣು, ಅನುಭವಿಸುವ ಹೃದಯ ಮತ್ತು ಅನುಸರಿಸುವ ಮನಸ್ಸುಗಳ ಅಗತ್ಯ ಮಾತ್ರವಿದೆ. ಜಗದಣ್ಣ ಬಸವಣ್ಣನವರೂ ಇದ್ದಾರೆ; ಮಹಾನುಭಾವರಾದ ಶಿವಶರಣ-ಶರಣೆಯರೂ ಇದ್ದಾರೆ; ಅನುಭಾವ ಮಂಟಪವೂ ಇದೆ. ಶರಣಬಳಗದಲ್ಲಿ ಒಂದಾಗಲು ಬಯಸುವ, ಆ ಕಾರಣ ಅದಕ್ಕೆ ತಕ್ಕ ಯೋಗ್ಯತೆಯನ್ನು ದೊರಕಿಸುವ ಪ್ರಾಮಾಣಿಕ ಪ್ರಯತ್ನದ ಅವಶ್ಯಕತೆಯುಂಟು. ಇಂಥ ಪ್ರಯತ್ನ ಫಲಪ್ರದವಾಗಲು ದೈವಾನುಗ್ರಹವು ಕೂಡಿ ಬರಬೇಕಾದರೂ, ಹಾಗೆಂದು ನಿರಾಶೆಗೆ ಕಾರಣವಿಲ್ಲ. ಮನವಿದ್ದಲ್ಲಿ ಮಹಾದೇವನಿದ್ದೇ ಇದ್ದಾನೆ.

## ಸುಯೋಗ

ಅಣ್ಣ ಬಸವಣ್ಣನನ್ನು ಕಾಣಬಯಸಿದ ನನ್ನ ಹಂಬಲ ಪ್ರಾಮಾಣಿಕವಾಗಿದ್ದಿತೆಂಬುದಕ್ಕೆ ದೈವಾನುಗ್ರಹದಿಂದಲೇ ಘಟಿಸಿದ ಕೆಲವು ಘಟನೆಗಳು ಸಾಕ್ಷಿಯಾಗಿವೆ. ಜಗದಾದ್ಯಂತ ಆಚರಿಸಲಾದ ಅಣ್ಣನವರ ಅಷ್ಟಶತಮಾನೋತ್ಸವದ ಮುಖ್ಯ ಕಾರ್ಯಕ್ರಮವನ್ನು ಬಸವಕಲ್ಯಾಣದಲ್ಲಿ ಕಾಣುವ ಸೌಭಾಗ್ಯ ನನ್ನದಾಯಿತು. ಹಿರಿಯರಾದ ಶ್ರೀ ವಿಶ್ವನಾಥರೆಡ್ಡಿ ಮುದ್ನಾಳ ಮತ್ತು ಶ್ರೀ ಬಿ. ಮಹಾದೇವಪ್ಪನವರ ಉಪಕಾರದಿಂದಾಗಿ ಸನ್ಮಾನ್ಯ ಶ್ರೀ ಜತ್ತಿಯವರನ್ನು ಸಮೀಪದಿಂದ ಕಾಣುವ ಸುಯೋಗ ಆಗಾಗ ಲಭಿಸುತ್ತಿತ್ತು. ನಂತರ ಯಾದಗಿರಿಯಲ್ಲಿ ಪರಿಣಾಮಕಾರಿಯಾಗಿ ಆಚರಿಸಲಾದ ಅಷ್ಟಶತಮಾನೋತ್ಸವದ ವಿವಿಧ ಕಾರ್ಯಕ್ರಮಗಳಲ್ಲಿ ಅಂತರಂಗದ ಅನಿಸಿಕೆ ಬಹಿರಂಗದಲ್ಲಿ ಪ್ರತ್ಯಕ್ಷ ದರ್ಶನಾನುಭವವನ್ನು ಪಡೆಯಿತು ಶ್ರೀ ಜತ್ತಿಯವರ ವ್ಯಕ್ತಿತ್ವದಲ್ಲಿ ಸಾಕ್ಷಾತ್ ಅಣ್ಣನನ್ನೇ ಕಂಡು ಧನ್ಯತೆಪಡೆದೆ. ದೈವ ನನ್ನ ವಿಷಯದಲ್ಲಿ ಇನ್ನೂ ಕರುಣಾಪೂರ್ಣವಾಗಿತ್ತು. ಆಧ್ಯಾತ್ಮ ಸಾಧನೆಯಲ್ಲಿ ನನ್ನ ಮೊದಲ ಗುರುಗಳಾದ ಶ್ರೀ ಐಲರೆಡ್ಡಿ ಪಾಟೀಲರು ಆಗಾಗ ಶಿವಶರಣರ ಆಧ್ಯಾತ್ಮ ಸಾಧನೆಯ ಹಿರಿಮೆ ಗರಿಮೆಗಳನ್ನು ಎತ್ತಿತೋರಿಸುತ್ತಿದ್ದರು. ಅವರ ಪ್ರೇರಣೆ ಪ್ರೋತ್ಸಾಹಗಳಿಂದಲೇ ನಾನು ಇತರ ಕೆಲವು ಗೆಳೆಯರೊಂದಿಗೆ ಕೂಡಿ ಕೈಕೊಂಡ ಹಲವಾರು ಕಾರ್ಯಕ್ರಮಗಳು ನಮ್ಮೂರಿನ (ಸೇಡಂ) ಧಾರ್ಮಿಕ ಸಾಮಾಜಿಕ ರಂಗದಲ್ಲಿ ಹೆಚ್ಚಿನ ಜಾಗೃತಿಯನ್ನು ತಂದವು. ಅದರ ಪರಿಣಾಮವಾಗಿ ೧೯೭೨ ರಲ್ಲಿ ಪ್ರಾರಂಭವಾದ ಶ್ರಾವಣಮಾಸದ ವಿಶೇಷ ಕಾರ್ಯಕ್ರಮವು ಅಣ್ಣನವರ ಅಷ್ಟಶತಮಾನೋತ್ಸವ ಸಮಾರಂಭವಾಗಿ ಸಮಾರೋಪಗೊಳ್ಳುವ ಸುಯೋಗಪಡೆಯಿತು. ಅಂದಿನ ಅಣ್ಣ

ನವರ ಹೆಸರಿನಲ್ಲಿ ನಡೆಯುವ ಸಮಾರಂಭಕ್ಕೆ ಇಂದಿನ ಅಣ್ಣನವರನ್ನೇ ಮುಖ್ಯ ಅತಿಥಿಗಳನ್ನಾಗಿ ಆಮಂತ್ರಿಸುವ ಬಯಕೆ ಸಹಜವಾಗಿಯೇ ತಲೆದೋರಿತು. ಶ್ರೀ ಜತ್ತಿಯವರಷ್ಟೇ ಬಸವಣ್ಣನವರ ಭಕ್ತರಾದ ಶ್ರೀ ವಿಶ್ವನಾಥರೆಡ್ಡಿಯವರ ಸಹಾಯನ್ನಪೇಕ್ಷಿಸಿದೆವು. ಅವರ ಪತ್ರವೊಂದನ್ನು ತೆಗೆದುಕೊಂಡು ಆಗ ಮದ್ರಾಸಿನಲ್ಲಿದ್ದ ನನ್ನ ಕಿರಿಯ ಸಹೋದರ ಚಿ॥ ಬಸವಣ್ಣಪ್ಪನು ಪಾಂಡಿಚೆರಿಯಲ್ಲಿ ಶ್ರೀ ಜತ್ತಿ ಅಣ್ಣನವರನ್ನು ಕಂಡು ಕಾರ್ಯಕ್ರಮಕ್ಕೆ ಬರಲು ಅವರ ಒಪ್ಪಿಗೆಯನ್ನು ಪಡೆದು ತಿಳಿಸಿದನು. ನಮ್ಮ ಆತ್ಮಗಳ ಕರೆಗೆ ಓಗೊಟ್ಟ ಅಣ್ಣನವರು ಪಾಂಡಿಚೆರಿಯಿಂದ ನೇರವಾಗಿ ಸೇಡಮಕ್ಕೆ ಆಗಮಿಸಿ ದೈವಯೋಗದಿಂದಲೆ ಕೂಡಿಬಂದ ಅಂದಿನ ಅಭೂತಪೂರ್ವ ಸಮಾರಂಭದಲ್ಲಿ ಒಂದು ತಾಸಿಗಿಂತಲೂ ಹೆಚ್ಚುಕಾಲ ಅಮೋಘವಾಗಿ ಮಾತನಾಡಿ ಅನುಗ್ರಹಿಸಿದರು. 'ತನ್ನ ತಾನರಿದೊಡೆ ನುಡಿಯೆಲ್ಲ ಪರತತ್ವ ನೋಡಾ' ಎಂಬ ಪ್ರಭುದೇವರವಚನ ನೆನಪಾಯಿತು.

ಐತಿಹಾಸಿಕ ಮಹತ್ವವನ್ನು ಪಡೆದ ಸೇಡಂ ನೆಲದ ಪುಣ್ಯ ಕೂಡಿಬಂದ ದಿನವದು. ಜಗದಗಲ ಮುಗಿಲಗಲವಾದ ವ್ಯಕ್ತಿತ್ವವನ್ನು ಪಡೆದ ಇಂದಿನ ಜಗದಣ್ಣ ಬಸವಣ್ಣನನ್ನು ಶರಣಸಮೂಹದ ಮಧ್ಯದಲ್ಲಿಯೇ ಕಂಡ ಅಗಣಿತ ಜನಸಮೂಹ ಹರ್ಷೋದ್ಗಾರಗೈದಿತು. ಸಾಕ್ಷಿಭೂತರಾಗಿ ಅಂದಿನ ಶೂನ್ಯಪೀಠದಲ್ಲಿದ್ದವರು ಸಿರಿಗೆರೆಯ ಪೂಜ್ಯ ಶ್ರೀಗಳವರು. ಹಿರಿಯ ಶರಣರ ಸ್ಥಾನಗಳನ್ನಲಂಕರಿಸಿದವರು ಶ್ರೀ ವಿಶ್ವನಾಥರೆಡ್ಡಿ, ಶ್ರೀ ಶಾಂತರಸ, ಶ್ರೀ ವಿದ್ಯಾಧರ ಗುರೂಜಿ, ಶ್ರೀ ಬಿ. ಮಹಾದೇವಪ್ಪ, ಶ್ರೀ ಘಂಟಾಚಾರ್ಯ, ಕು. ನೀಲಾಂಬಿಕೆ ಇತ್ಯಾದಿ· ಕಾಣಬೇಕು; ಕಾಣುವ ಪುಣ್ಯಬೇಕು ಎನಿಸಿತ್ತು ಆಗ.

## ಅಂತರಂಗ ಸಂಬಂಧ

ಅಂದಿನಿಂದ ಪತ್ರಗಳ ಮೂಲಕ ಅಣ್ಣನವರ ದಿವ್ಯ ಸಂಬಂಧವನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿರುವೆನಾದರೂ ಅಂತರಂಗದ ನೇರ ಸಂಪರ್ಕದಲ್ಲಿ ವಿಶ್ವಾಸವಿಟ್ಟಿರುವ ನಾನು ಮುಖ್ಯವಾಗಿ ಅಂತರಂಗದಲ್ಲಿ ಅನವರತವೂ ನೆನೆಯುತ್ತಿರುವೆ. ಹೀಗಿದ್ದೂ ಅಂದಿನ ಮತ್ತು ಇಂದಿನ ಅಣ್ಣನವರುಗಳ ವ್ಯಕ್ತಿತ್ವ, ಕಾರ್ಯಭಾರ ಮತ್ತು ಸಾಧನೆಗಳ ವಿಷಯದಲ್ಲಿ ವಿಮರ್ಶಾತ್ಮಕವಾದ ಮನಸ್ಸು ಹೋಲಿಕೆಯ ತಕ್ಕಡಿಯಲ್ಲಿಟ್ಟು ತೂಗಿನೋಡಲು ಪ್ರಯತ್ನಿಸುತ್ತಿರುತ್ತದೆ. ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶ ಸಮಸ್ಯೆಗಳು ಮೂಲಭೂತವಾಗಿ ಅಂದಿನಂತೆಯೇ ಇದ್ದರೂ ವೈಶಾಲ್ಯ ಮತ್ತು ಸಂಕೀರ್ಣತೆ ಹೆಚ್ಚಾಗಿದೆ. ಆದರೆ ಎಲ್ಲ ರಂಗಗಳಲ್ಲಿಯೂ ತಮ್ಮ ಪ್ರಭಾವ ಬೀರುತ್ತ ಕೆಸರಿನ

ಮಧ್ಯದಲ್ಲಿ ಕಮಲವು ಮೇಲೆದ್ದು ಕಂಗೊಳಿಸುವಂತೆ ಏಕರೀತಿಯಾಗಿ ಕಂಗೊಳಿಸುತ್ತಿವೆ ಅಣ್ಣನವರುಗಳ ವ್ಯಕ್ತಿತ್ವಗಳು. ಕೊಂಡಿಮಂಚಣ್ಣಗಳಿಗೆ ಅಂದೂ ಸೋಲು, ಇಂದೂ ಸೋಲು. ಎಂಥ ಕಲುಷಿತವಾತಾವರಣದಲ್ಲಿಯೂ ದೈವದ ಕೈವಾಡ ಮತ್ತು ಆತ್ಮಬಲಗಳಿಂದ ಸೇವಾವಕಾಶವನ್ನೂ, ಪ್ರಜಾನುರಾಗವನ್ನೂ ದೊರಕಿಸಿಕೊಂಡು ರಾರಾಜಿಸುತ್ತಿರುವವರು. ಕಾರ್ಯಭಾರಎಷ್ಟೇ ಇದ್ದರೂ ಯಾವ ಕಾರ್ಯವೂ ನಿಲ್ಲುವಂತಿಲ್ಲ. ಒಂದರಿಂದ ಒಂದಕ್ಕೆ ಅಡ್ಡಿಯಿಲ್ಲ. ಪಾಂಡಿಚೇರಿಯಲ್ಲಿರಲಿ, ಭುವನೇಶ್ವರದಲ್ಲಿರಲಿ ಅಥವಾ ದೆಹಲಿಯಿಲ್ಲೇ ಇರಲಿ ಬಸವಕಲ್ಯಾಣ ಮತ್ತು ಆ ಮೂಲಕ ಮಾನವಕಲ್ಯಾಣದ ಚಿಂತೆ ಬಿಟ್ಟಿದಿಲ್ಲ. ಕಾರ್ಯಕ್ಷೇತ್ರ ವಿಶಾಲವಾದಷ್ಟೂ ಕಾರ್ಯದಕ್ಷತೆ ಹೆಚ್ಚು. ಕೆಳಮಟ್ಟದ ರಾಜಕಾರಣವನ್ನು ಯಾವ ಕಾಲಕ್ಕೂ ಮೀರಿನಿಲ್ಲುವ, ಸಕಲ ಪ್ರಾಣಿಗಳಿಗೆ ಲೇಸನೇ ಬಯಸುವ, ಕಾಯಕದಲ್ಲಿಯೇ ಕೈಲಾಸವನ್ನು ಕಾಣುವ, ಅಕಳಂಕ ಗುರುವಾದರೂ, ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ ಎಂಬ ಮಾತೇ ಮೂರ್ತಿಯಾದಂತಿರುವರು ಅಂದೂ, ಇಂದೂ, ಎಂದೂ ಜಗದಣ್ಣನಾದ ಬಸವಣ್ಣನವರ ಇಂದಿನ ಅವತಾರಮೂರ್ತಿ ಪೂಜ್ಯ ಶ್ರೀ ಬಿ. ಡಿ. ಜತ್ತಿಯವರು.

" ಸತ್ತಬಳಿಕ ಮುಕ್ತಿಯ ಹಡೆದಿಹೆವೆಂದು
ಪೂಜಿಸ ಹೋದರೆ ಆ ದೇವರೇನ ಕೊಡುವರೋ ?
ಸಾಯದೆ, ನೋಯದೆ, ಸ್ವತಂತ್ರವಾಗಿ ಸಂದು
ಭೇದವಿಲ್ಲದಿರ್ಪ ಗುಹೇಶ್ವರಾ ನಿಮ್ಮ ಶರಣ "



# ಕರ್ನಾಟಕ ಭೂಷಣ ಶ್ರೀ ಬಿ. ಡಿ. ಜತ್ತಿ

● ರಂಗನಾಥ ದಿವಾಕರ

● [ ನಮ್ಮ ಭಾಗದ ಸುಪ್ರಸಿದ್ಧ ಪತ್ರಿಕೆ ಸಂಯುಕ್ತ ಕರ್ನಾಟಕದ ಸಂಸ್ಥಾಪಕ — ಸಂಪಾದಕರಾಗಿ ಶ್ರೀ ರಂಗನಾಥ ದಿವಾಕರರು ಕನ್ನಡಿಗರೆಲ್ಲರಿಗೂ ಸುಪರಿಚಿತರಾಗಿದ್ದಾರೆ. ಒರಿಸ್ಸದ ರಾಜ್ಯಪಾಲ ರಾಗಿದ್ದ ಶ್ರೀ ದಿವಾಕರರರು ರಾಜಕಾರಣಿಯೂ ಹೌದು, ಸಾಹಿ ತಿಗಳೂ ಹೌದು. ವೀರಶೈವ ಧರ್ಮದ ಬಗ್ಗೆ ಅವರಿಗೆ ಆಳ ವಾದ ಅಭ್ಯಾಸವೂ ಉಂಟು. ಶ್ರೀ ಜತ್ತಿ ಅವರ ಧರ್ಮ – ರಾಜಕಾರಣಗಳನ್ನು, ಧರ್ಮ – ರಾಜಕಾರಣಗಳನ್ನೂ ಚೆನ್ನಾಗಿ ಬಲ್ಲ ಶ್ರೀ ದಿವಾಕರರು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. — ಸಂ ]

ಜೀವನದಲ್ಲಿ, ಪ್ರಪಂಚದಲ್ಲಿ ಪರಸ್ಪರ ಪರಿಚಯ ಬಹಳ ಮಹತ್ವದ್ದು. ಯಾಕಂದರೆ ಬಾಹ್ಯಾಂತರದ ವ್ಯವಹಾರಗಳೆಲ್ಲ ಆ ಪರಿಚಯದ ಮೇಲೆಯೇ ಅವಲಂಬಿಸಿರುವವು. ಪರಿಚಯಗಳಲ್ಲಿ ಕೂಡ ಬಾಹ್ಯಪರಿಚಯ ಆಂತರಿಕ ಪರಿ ಚಯ ಹೀಗೆ ಎರಡು ವಿಧ. ಅವೆರಡೂ ಅಷ್ಟೇ ಮಹತ್ವದವುಗಳು, ಯಾಕಂದರೆ ಅವು ಒಂದಕ್ಕೊಂದು ಅತ್ಯಂತ ನಿಕಟ ಸಂಭಂಧವುಳ್ಳವುಗಳು.

ಶ್ರೀ ಬಿ. ಡಿ. ಜತ್ತಿಯವರ ಪ್ರಥಮ ಪರಿಚಯ ನನಗೆ ಆದುದು ಜಮ ಖಂಡಿ ಸಂಸ್ಥಾನದಲ್ಲಿ ನಡೆದ ಆಂದೋಲನದ ಕಾಲಕ್ಕೆ. ಸುಮಾರು ನಾಲ್ವತ್ತು ವರುಷಗಳಾಗಿ ಹೋಗಿವೆ. ಒಬ್ಬನ ಜೀವನದಲ್ಲಿ ನಾಲ್ವತ್ತು ವರುಷಗಳೆಂದರೆ ಸಣ್ಣ ಕಾಲಖಂಡವಲ್ಲ. ಅಷ್ಟು ವರುಷಗಳಲ್ಲಿ ಶ್ರೀ ಜತ್ತಿಯವರ ಜೀವನದಲ್ಲಿ ಹಲವು ಮಹತ್ವದ ಅನುಕೂಲವಾದ ಸ್ಥಿತ್ಯಂತರಗಳಾಗಿವೆ. ಬರೀ ವಕೀಲಿ, ಒಡನೆ ಸ್ವಲ್ಪ ಚಳವಳಿ, ಲೋಕಸೇವೆ, ನಂತರ ಮುಂಬೈ ವಿಧಾನ ಸಭೆಯಲ್ಲಿ ಪಾದಾ ರ್ಪಣ, ಅಲ್ಲಿ ಮಂತ್ರಿತ್ವಪದದ ಆಸ್ವಾದ, ಕರ್ನಾಟಕ ( ಏಕೀಕೃತ ) ವಿಧಾನ ಸಭೆಯ ಸದಸ್ಯತ್ವ, ಮುಖ್ಯ ಮಂತ್ರಿಪದ, ಆ ಮೇಲೆ ಲೆ. ಗವ್ಹರ್ನರ್ ಹುದ್ದೆ, ಬಳಿಕ ಈಗ ಉಪ ರಾಷ್ಟ್ರಪತಿಗಳು ! ಮುಂದಿನ ಹೆಜ್ಜೆ ಭವಿಷ್ಯದ ಗರ್ಭದಲ್ಲಿ.

ಇಷ್ಟೆಲ್ಲ ಇಷ್ಟಾನುಕೂಲ ಉಚ್ಚ – ಉಚ್ಚತರ ಸ್ಥಿತ್ಯಂತರಗಳು ನಡೆದುದು ಸಣ್ಣ ಮಾತಲ್ಲ. ಕರ್ನಾಟಕದಲ್ಲಿ, ಭಾರತದಲ್ಲಿ ಬುದ್ಧಿವಂತರೂ ಇದ್ದಾರೆ; ಮಹತ್ವಾಕಾಂಕ್ಷಿಗಳೂ ಇದ್ದಾರೆ; ನಾಮುಂದೆ ನೀಮುಂದೆ ಎಂದು ಗೋಣು ಚಾಚುತ್ತ ಎರಡನೇ ಸಹೋದ್ಯೋಗಿಗಳನ್ನು ಹಿಂದೆ ನೂಕುವವರೂ ಇದ್ದಾರೆ. ಆದರೆ ಶ್ರೀ ಜತ್ತಿಯವರ ಸಾತ್ವಿಕ ಗುಣಧರ್ಮ, ಸೌಜನ್ಯ, ಸರಳಸ್ವಭಾವ, ಇವೇ ಮುಂತಾದವುಗಳು ಸಹಾಯಕವಾಗಿ ಅವರಿಗೆ ದೈವಾನುಕೂಲತೆ ದೊರಕಿತು.

ಹೀಗೆ ಅವರು ಈಗ ಒಂದು ದೊಡ್ಡ ಸ್ಥಾನವನ್ನು ಭಾರತದಲ್ಲಿ ದೊರಕಿಸಿದ್ದಾರೆ. ತತ್ಪರಿಣಾಮಯಾಗಿ ಅವರು ಅನೇಕ ದೇಶ ದೇಶಾಂತರಗಳಿಗೆ ಹೋಗಿ ಅಲ್ಲಿ ಭಾರತದ ಸ್ಥಾನ ಮಾನ, ಸಂಸ್ಕೃತಿ – ಸಭ್ಯತೆ ಇವುಗಳ ರಾಯಭಾರಿತ್ವವನ್ನು ಮಾಡಬೇಕಾಗಿ ಬರುವದು.

ಇದೆಲ್ಲವನ್ನು ಅವರು ನಿರಾಡಂಬರದಿಂದ ನಡೆಸಿಕೊಂಡು ಹೋಗುವರು. ಇದು ಬಹು ಮಹತ್ವದ ಗುಣ. ಯಾಕಂದರೆ ಕವಿಗಳು ಧನದ ಮದ, ವನಿತೆಯ ಮದ, ಅಧಿಕಾರದ ಮದ, ಸ್ಥಾನಮಾನಗಳಮದ ಹೀಗೆ ಹಲವಾರು ಮದಗಳನ್ನು ವರ್ಣಿಸಿದ್ದಾರೆ. ಅವುಗಳಮುಂದೆ ಮದ್ಯ ಮಾದಕ ಪದಾರ್ಥಗಳ ಸೇವನೆಯಿಂದ ಬರುವ ಮದವು ಕಃಪದಾರ್ಥ ! ಹೀಗಿರಲು ಶ್ರೀ ಜತ್ತಿ ಅವರು ತಮ್ಮ ನಿರಾಡಂಬರತ್ವವನ್ನು ಕಾಯ್ದುಕೊಂಡದ್ದು ಒಂದು ತಪಸ್ಸೆಂದೇ ಹೇಳಬಹುದು.

**ಧರ್ಮ ಭಾವನೆ**

ಇನ್ನು ಈ ಅವರ ನಿಲವು ತನ್ನಿಂದ ತಾನೇ ಬಂದುದಲ್ಲ. ಬಾಹ್ಯ ಜೀವನದಲ್ಲಿಯ ಅವರ ಮುನ್ನಡೆಯೊಡನೆ ಅವರ ಅಂತರ್ ಜೀವನದಲ್ಲಿ ಉನ್ನತಿ ನಡೆದುದೇ ಈಗಿನ ಅವರ ಸೌಜನ್ಯ, ಕುಲೀನತೆ, ಸಹಜತೆ, ಸಾದಾತನ, ಎಲ್ಲರೊಡನೆ ಸಮ ಸಮಾನತೆಯಿಂದ ನಡೆದು ಕೊಳ್ಳುವ ಅವರ ನಡುವಳಿಕೆ ಇತ್ಯಾದಿಗಳಿಗೆ ಕಾರಣ. ಮೂಲತಃ ತಮ್ಮ ಜೀವನದತ್ತ ಧರ್ಮ ಭಾವನೆಯಿಂದ ನಡೆಯುತ್ತ ಹೋದುದರಿಂದ ಅವರಿಗೆ ಈಗಿನ ಸದ್ಗುಣಗಳು ಪ್ರಾಪ್ತವಾದವು. ಡಾ. ಡಿ. ಆರ್. ರಾನಡೆಯವರಂಥ ಸಹವಾಸ, ಗ್ರಂಥಾವಲೋಕನ, ನಿತ್ಯ ಆಧ್ಯಾತ್ಮಿಕ ಸಾಧನ, ಸಂತ – ಸಾಧು – ಸಜ್ಜನರ ಸಹವಾಸದ ಹಂಬಲ ಇವು ಅವರಿಗೆ ಅತ್ಯಂತ ಪ್ರೇರಕವಾಗಿವೆ ಎಂದು ಹೇಳಬಲ್ಲೆ.

ಈ ರೀತಿ ಅಂತರ್ಬಾಹ್ಯ ಜೀವನದ ಹೊಂದಿಕೆ ಒಂದೇ ವ್ಯಕ್ತಿಯಲ್ಲಿ ತೋರಿಬರುವದು ವಿರಳವೆಂದೇ ಹೇಳಬೇಕು. ರಾಜಕೀಯ ಜೀವನದಲ್ಲಿ ಶ್ರೀ

ಮುರಾರಜಿ ದೇಸಾಯಿಯಂಥ ಗಾಂಧಿ ಭಕ್ತರು ಶ್ರೀ ಜತ್ತಿಯವರ ಗುಣಧರ್ಮಗ ಳನ್ನು ನನ್ನೆದುರು ಹೇಳಿದ್ದುಂಟು. ಅಂಥವರ ನಂಬಿಕೆಯನ್ನು ಪಡೆಯುವದು ಸುಲಭ ಸಾಧ್ಯವಲ್ಲ.

ಶ್ರೀ ಬಿ. ಡಿ. ಜತ್ತಿಯವರು ಕರ್ನಾಟಕಕ್ಕೆ ಭೂಷಣರು. ಆದೇರೀತಿ – ಭಾರ ತಕ್ಕೆ ಪ್ರಶಂಸಾ ಪಾತ್ರರು. ಅವರಿಟ್ಟುಕೊಂಡ ಆದರ್ಶಗಳನ್ನಿಟ್ಟುಕೊಂಡು ನಡೆ ದರೆ ಸಾರ್ವಜನಿಕ ಜೀವನದಲ್ಲಿ ಸೇರಿಕೊಂಡ ಹಲವಾರು ದೋಷ – ತಾಪಗಳು ತಮ್ಮಷ್ಟಕ್ಕೆ ತಾವೇ ಮಾಯವಾಗುವವೆಂಬಲ್ಲಿ ಸಂಶಯವಿಲ್ಲ. ಅವರು ದೀರ್ಘಾ ಯುಃಗಳಾಗಲಿ, ಅವರಿಂದ ಅನೇಕಾನೇಕ ಶ್ರೇಷ್ಠ ಕಾರ್ಯಗಳು ನಡೆದು ಹೋಗಲಿ.

ಜಯ ಕರ್ನಾಟಕ, ಜಯ ಭಾರತ, ಜಯ ಜಗತ್.



## ಪ್ರಾಣಪೂಜೆ

ಎನ್ನ ಹೃದಯ ಕಮಲದಲ್ಲಿ ಮೂರ್ತಿಗೊಂಡಿಪ್ಪ ಎನ್ನ ಪ್ರಾಣೇಶ್ವರಂಗೆ,
ಎನ್ನ ಕ್ಷಮೆಯೇ ಅಭಿಷೇಕ, ಎನ್ನ ಪರಮ ವೈರಾಗ್ಯವೇ ಪುಷ್ಪದಮಾಲೆ,
ಎನ್ನ ಸಮಾಧಿ ಸಂಪತ್ತೇ ಗಂಧ, ಎನ್ನ ನಿರಹಂಕಾರವೇ ಅಕ್ಷತೆ,
ಎನ್ನ ಸದಸದ್ವಿವೇಕವೇ ವಸ್ತ್ರ, ಎನ್ನ ಸತ್ಯವೇ ದಿವ್ಯಾಭರಣ,
ಎನ್ನ ವಿಶ್ವಾಸವೇ ಧೂಪ, ಎನ್ನ ದಿವ್ಯಜ್ಞಾನವೇ ದೀಪ,
ಎನ್ನ ನಿಭ್ರಾಂತಿಯೇ ನೈವೇದ್ಯ, ಎನ್ನ ನಿರ್ವಿಷಯವೇ ತಾಂಬೂಲ,
ಎನ್ನ ಮೌನವೇ ಘಂಟೆ, ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ
ಎನ್ನ ಶುದ್ಧಿಯೇ ನಮಸ್ಕಾರ, ಎನ್ನ ಅಂತಃಕರಣದಿಂದ
ಮಾಡುವ ಸೇವೆಯೇ ಉಪಚಾರಂಗಳು ನೋಡಾ !
ಎಮ್ಮ ಗೋಹೇಶ್ವರ ಲಿಂಗಕ್ಕೆ ಈ ಪರಿ ಪ್ರಾಣ ಪೂಜೆಯ ಮಾಡಿ
ಬಾಹ್ಯಕ್ರಿಯೆ ಮರೆದೆನು ಸಂಗನ ಬಸವಣ್ಣಾ !

— ಅಲ್ಲಮಪ್ರಭುಗಳು

# ಸರ್ವ ವಿದ್ಯಾಮುಖದ ಜ್ಯೋತಿ – ಜತ್ತಿ

● ಸಿ. ಸಿದ್ಧಲಿಂಗಪ್ಪ

● [ ಕರ್ನಾಟಕದ ಜನಪ್ರಿಯ ದಿನಪತ್ರಿಕೆ "ಪ್ರಜಾವಾಣಿ" ಯ ಸಂಪಾದಕೀಯ ವಿಭಾಗದಲ್ಲಿ, ಲೇಖಕರಾದ ಶ್ರೀ ಸಿದ್ಧಲಿಂಗಪ್ಪನವರು, ಉಪಸಂಪಾದಕರಾಗಿದ್ದಾರೆ. "ಪ್ರಜಾವಾಣಿ" ಯ ಉದಯದ ಜತೆಯಲ್ಲೇ ಶ್ರೀಯುತರ ಪತ್ರಿಕೋದ್ಯಮವೂ ಆರಂಭವಾಗಿದೆ. ಸರಳ ಹಾಗೂ ಪರಿಣಾಮಕಾರಿ ನಿಟ್ಟಿನಲ್ಲಿ ಲೇಖನಿ ಓಡಿಸುವ ಶ್ರೀಯುತರ ಕಾವ್ಯನಾಮ ಬಸ್ರಾಳ್ಕರ್ –ಸಂ ]

ಮುಂಜಾವಿನಿಂದ ಮಧ್ಯರಾತ್ರಿಯವರೆಗೆ ಬಿಡುವಿಲ್ಲದ ದುಡಿಮೆ. ಈ ಅವಧಿಯಲ್ಲಿ ಶಿವಪೂಜೆ, ರಾಜಕಾರಣ, ಆಡಳಿತಯಂತ್ರದ ಚಾಲನೆ, ಅಧ್ಯಯನ, ಸಭೆ–ಸಮಾರಂಭಗಳಲ್ಲಿ ಭಾಗವಹಿಸುವುದು, ಸಾರ್ವಜನಿಕರೊಡನೆ ಭೇಟಿ, ಇತ್ಯಾದಿ ಹತ್ತು–ಹಲವು ಕಾರ್ಯಗಳ ಭಾರ. ಇಷ್ಟು ಭಾರಹೊತ್ತ ಬಳಲಿಕೆಯ ಸುಳುಹೇ ಮುಖದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಇಂಥ ಗುಣಗಳುಳ್ಳವರು ಅಪರೂಪ. ಆ ಅಪರೂಪ ವ್ಯಕ್ತಿಗಳಲ್ಲೊಬ್ಬರು–ಬಸಪ್ಪ ದಾನಪ್ಪ ಜತ್ತಿ ಅವರು.

ಜಮಖಂಡಿಯಲ್ಲಿ ಜನ್ಮತಾಳಿ, ದೆಹಲಿಯ ಮೂಲಕ ಬೆಳಕು ಚೆಲ್ಲುತ್ತಿರುವ ಉಪರಾಷ್ಟ್ರಪತಿ ಜತ್ತಿ ಅವರಿಗೆ ಈ ಕಾಯಕ ನಿಷ್ಠೆ ಇಂದು–ನೆನ್ನೆಯದಲ್ಲ. ಜಗಜ್ಯೋತಿ ಬಸವಣ್ಣನವರು ಲೋಕಕ್ಕೆ ಸಾರಿಹೋದ ಸಮತಾ ಸಮಾಜದ ಸ್ವರೂಪ, ಅಂಥ ಸಮಾಜ ನಿರ್ಮಾಣಕ್ಕೆ ಇರಬೇಕಾದ ಕಾಯಕನಿಷ್ಠೆಯನ್ನು ಬಸವಣ್ಣನವರ ತತ್ವದಿಂದ, ಜೀವನದಲ್ಲಿ ಸಾಧನೆಯಿಂದ ಸಿದ್ಧಿ ಪಡೆಯಲು ಬೇಕಾದ ಆಧ್ಯಾತ್ಮಿಕ ಚಿಂತನೆಯನ್ನು ಅರವಿಂದರ ಜೀವನವಿಧಾನದಿಂದ, ಪ್ರಭಾವಿತರಾಗಿ ಜತ್ತಿಯವರು ಈ ಗುಣಗಳನ್ನು ಮೈಗೂಡಿಸಿಕೊಂಡಿದ್ದಾರೆ. ಅವರ ಯಶಸ್ಸಿನ ಗುಟ್ಟೇ ಇವೆಂದರೆ ಉತ್ಪ್ರೇಕ್ಷೆ ಆಗಲಾರದು.

ಜತ್ತಿಯವರು ಎಂದೂ–ಏನನ್ನೂ ಬಯಸಿದವರಲ್ಲ. ಸಾರ್ವಜನಿಕ ಜೀವನದಲ್ಲಿ ಕಾಲಿಟ್ಟಲಾಗಾಯ್ತು, ಅವರ ಕಾಯಕನಿಷ್ಠೆ, ಸಮಾಜಸೇವಾಕಾಂಕ್ಷೆ ಅವ

ರನ್ನು ಇಂದು ಉನ್ನತಗದ್ದಿಗೆಯಲ್ಲಿ ಕೂರಿಸಿವೆ. ವಕೀಲರಾಗಿ ಜೀವನ ಆರಂಭಿಸಿ ಜಮಖಂಡಿಯ ಅರಸೊತ್ತಿಗೆಯಲ್ಲಿ ಅಮಾತ್ಯರಾಗಿ, ಸ್ವಾತಂತ್ರ್ಯ ನಂತರ ಮುಂಬೈ ಸರಕಾರದಲ್ಲಿ ಪಾರ್ಲಿಮೆಂಟರಿ ಕಾರ್ಯದರ್ಶಿಯಾಗಿ, ಮಹಾಮೈಸೂರಿನ ಮುಖ್ಯ ಮಂತ್ರಿಯಾಗಿ, ಹಾಗೂ ಅರ್ಥಮಂತ್ರಿಯಾಗಿ, ಆಹಾರ ಸಚಿವರಾಗಿ, ಪಾಂಡಿ ಚೆರಿಯ ಉಪರಾಜ್ಯಪಾಲರಾಗಿ, ಒರಿಸ್ಸಾದ ರಾಜ್ಯಪಾಲರಾಗಿ, ಇಂದು ಉಪ ರಾಷ್ಟ್ರಪತಿಯ ಸ್ಥಾನ ಅಲಂಕರಿಸಿರುವ ಜತ್ತಿ ಅವರು ಸರಳ–ಸೌಜನ್ಯ ಮೂರ್ತಿ. ಅವರು ಈ ಗುಣಗಳನ್ನು ಮೈಗೂಡಿಸಿಕೊಳ್ಳಲು ಅವರ ಸಹಧರ್ಮಿಣಿ ಸೌ. ಸಂಗವ್ವ ಜತ್ತಿ ಅವರು ಪ್ರೇರಕ ಶಕ್ತಿಯಾಗಿದ್ದಾರೆ.

೧೯೬೪ ರ ಡಿಸೆಂಬರ್ ತಿಂಗಳ ಚಳಿ. ಮಾನ್ಯ ಜತ್ತಿ ಅವರನ್ನು ಭೇಟಿ ಆಗಬೇಕಾಗಿತ್ತು. ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಆಶೀರ್ವಾದದೊಡನೆ ಶ್ರೀ ಜತ್ತಿ ಅವರೊಡನೆ ಸಂದರ್ಶನಕ್ಕೆ ಸಮಯ ನಿರ್ಧಾರವಾಗಿತ್ತು. ಸಂದರ್ಶನದಕಾಲ ಸೂರ್ಯೋದಯಕ್ಕೆ ಒಂದು ಗಂಟೆ ಮೊದಲು ಎಂದರೆ, ನಂಬುವುದು ಕಷ್ಟ ಅಲ್ಲವೆ !

## ಶ್ರಮದಾನ

ನಿಗದಿಯಾದ ಸಮಯಕ್ಕೆ ಸರಿಯಾಗಿ, ಬೆಂಗಳೂರಿನ ಸದಾಶಿವ ನಗರದ ಲ್ಲಿರುವ ಜತ್ತಿ ಅವರ ಸ್ವಂತಮನೆಗೆ, ಈ ಲೇಖಕ ಹೋದಾಗ ಮನೆಯತುಂಬಾ ಸಂದರ್ಶಕರ ಗುಂಪೇ ಇತ್ತು. ನಸುಕಿನಿಂದ ಹಿಡಿದು ಮಧ್ಯರಾತ್ರಿಯವರಿಗೆ ಜತ್ತಿಯವರ ಶ್ರಮದಾನ ಸಾಗೇ ಇರುತ್ತದೆಂಬುದು ಎಲ್ಲರಿಗೂ ತಿಳಿದ ಸಂಗತಿ.

ಭೇಟಿ ಮುಗಿದಮೇಲೆ ಮಾನ್ಯ ಜತ್ತಿ ಅವರು ಒಂದು ಮಾತು ಹೇಳಿ ದರು "ಎನ್ನೊಡನೆ ಒಂದೆರಡುನಿಮಿಷ ಮಾತನಾಡಬೇಕಾದರೆ ಇದೇ ಸಮಯ ನೋಡ್ರಿ. ಜ್ಞಾಪಕ ಇಟ್ಟುಕೊಳ್ರಿ" ಎಂದರು.

ಜತ್ತಿ ಅವರ ಆ ಮಾತು ಸದಾ ಜ್ಞಾಪಕದಲ್ಲೇ ಉಳಿದಿದೆ. ಜತ್ತಿ ಅವರು ಪಾಂಡಿಚೆರಿಯ ಲೆಫ್ಟಿನೆಂಟ್ ಗೌರ್ನರ್ ಆಗಿ ಅಧಿಕಾರ ಸ್ವೀಕರಿಸಲು ಹೊರಡುವ ಹಿಂದಿನದಿನ ನಸುಕಿನಲ್ಲೆ ನನ್ನ ಪತ್ನಿ ಸೌಭಾಗ್ಯ ಜತೆ ಜತ್ತಿ. ದಂಪತಿಗಳನ್ನು ಅಭಿನಂದಿಸಿ, ಶುಭಾಶಯಕೋರಲು ಅವರ ಮನೆಗೆ ಹೋದಾಗ, ಹಿಂದಿನ ಭೇಟಿಯಾಗಿದ್ದ ಪರಿಸರದ ನೆನಪಾಯ್ತು. ಆಗಲೂ ಆ ವೇಳೆಗೆ ತುಂಬಿದ್ದ ಜನರ ಮಧ್ಯೆ, ಮನೆಯ ಅಂಗಳಕ್ಕೆ ಬಂದ ಜತ್ತಿ ಅವರು ಮುಗುಳ್ನಕ್ಕು ನಮ್ಮ ಶುಭಾಶಯಗಳನ್ನು ಸ್ವೀಕರಿಸಿದರು.

ಅಲ್ಲಿದ್ದ ಶಾಸಕರಿಗೆ ನನ್ನ ಪರಿಚಯ ಮಾಡಿಕೊಟ್ಟು, " ನಿಮ್ಮ ಯಜಮಾನ್ರು, ವೆಂಕಟಸ್ವಾಮಿ, ಗುರುಸ್ವಾಮಿಯವರು ಚಲೋ ಅದರೇನ್ರಿ ? ನಿಮ್ಮ ರಾಯಚಂದ್ರರಾಮರ ' ಭೂಬಾಣ ' ಪಸಂದದೆ ಎಂದರು. ನಿಮಗೆ ಈಗ ಎಷ್ಟು ಸಂಬಳ ಎಂದು ಪ್ರಶ್ನಿಸಿದ ಜತ್ತಿ ಅವರು, ಸಂಬಳದ ಮೊತ್ತಕೇಳಿ, " ಮಂತ್ರಿ ಕೆಲ್ಸಕ್ಕಿಂತ ನಿಮ್ಮದ್ಡೇ ಛೇಷ್ ಅದೆ " ಎಂದರು.

ಮಾನ್ಯ ಜತ್ತಿ ಅವರನ್ನು ಸಮೀಪದಲ್ಲಿ ಕಂಡ ನನಗಾದ ಅನುಭವಗಳೇ ಎಲ್ಲರಿಗೂ ಆಗಿರುತ್ತವೆ ಎಂದು ನಂಬಬಹುದು.

ಶ್ರೀ ಜತ್ತಿ ಅವರು ಅಧ್ಯಯನಾಸಕ್ತರು. ಅಧ್ಯಯನ ಮಾಡಿದ್ದನ್ನು ಸರಳವಾಗಿ ಸೂಕ್ಷ್ಮವಾಗಿ ಹೇಳುವ ಕಲೆಯನ್ನು ಬೆಳೆಸಿಕೊಂಡಿದ್ದಾರೆ. ಆಡಳಿತದಲ್ಲಿ ಸೂಕ್ಷ್ಮತೆ, ಮಾತಿನಲ್ಲಿ ಮಿತಿ, ವ್ಯವಹಾರದಲ್ಲಿ ಚತುರರಾದ ಸರ್ವಜನಪ್ರಿಯ ಜತ್ತಿ ಅವರು ಅಲ್ಲಮಪ್ರಭುಗಳು ಹೇಳಿರುವಂತೆ " ಸರ್ವವಿದ್ಯಾಮುಖದ ಜ್ಯೋತಿ " ಯಾಗಿ, ದೆಹಲಿಯಿಂದ ಬೆಳಕಿನ ಕಿರಣಗಳನ್ನು ಚೆಲ್ಲುತ್ತಿರುವ " ಜ್ಯೋತಿ " ಯಾಗಿದ್ದಾರೆ.



## ಬೆಲ್ಲದ ಪುತ್ಥಳಿ

ಬೆಲ್ಲದ ಪುತ್ಥಳಿಯ ಕೈಯಲ್ಲಿ ಹಿಡಿದು
ಎಲ್ಲಿ ಚುಂಬಿಸಿದರೂ ಇನಿದಹುದು
ಒಳ್ಳೆಯ ಬೇವಿನ ಹಣ್ಣು ಮೆಲ್ಲನೆ
ಚುಂಬಿಸಿದರೆ ಇನಿದಹುದೇ ?

— ಅಲ್ಲಮಪ್ರಭುಗಳು



" ಮಕ್ಕಳಿರಲೆವ್ವ ಮನಿತುಂಬ " ಮೊಮ್ಮಕ್ಕಳೊಂದಿಗೆ ಶ್ರೀ ಬಿ. ಡಿ. ಜತ್ತಿ ಅವರು



ಶ್ರೀ ಬಿ. ಡಿ. ಜತ್ತಿ ಅವರು ೧೯೬೭ ರಲ್ಲಿ ಕಲ್ಬುರ್ಗಿಯಲ್ಲಿ ನಡೆದ ಶ್ರೀ ಬಸವೇಶ್ವರ ಅಷ್ಟ ಶತಮಾನೋತ್ಸವವನ್ನು ಉದ್ಘಾಟಿಸಿದರು. ಉತ್ಸವದ ಮಾರ್ಗದರ್ಶಕ ಶ್ರೀ ವಿಶ್ವನಾಥರಡ್ಡಿ ಮುದ್ನಾಳ ಅವರು ಮಾತನಾಡುತ್ತಿದ್ದಾರೆ.

# ಹೃದಯ ಶ್ರೀಮಂತಿಕೆಯ ಬಸಪ್ಪ ದಾ. ಜತ್ತಿ

● ಡಾ. ಸಾ. ಶಿ. ಮರುಳಯ್ಯ,
ಎಂ. ಎ. ಪಿ. ಹೆಚ್ ಡಿ.

● [ ಉದ್ದಾಮ ಲೇಖಕ — ಕವಿಗಳಾದ ಡಾ. ಸಾ. ಶಿ. ಮರುಳಯ್ಯನವರ ಅಷ್ಟ ಷಟ್ಪದಿಯೇ ಸಾಕಾಗಿತ್ತು ಶ್ರೀ ಜತ್ತಿಯವರ ವ್ಯಕ್ತಿತ್ವವನ್ನಭಿವ್ಯಕ್ತಗೊಳಿಸಲು ಮತ್ತು ನಮ್ಮ ಈ ಸಂಭಾವನಾ ಗ್ರಂಥವನ್ನು ಪ್ರತಿಭಾಯುಕ್ತಗೊಳಿಸಲು. ಆದರೆ ಶ್ರೀ ಮರುಳಯ್ಯನವರು ಅಷ್ಟ ಷಟ್ಪದಿಗೆ ಹಿನ್ನೆಲೆ – ಮುನ್ನೆಲೆಗಳಾಗಿ ಒಂದೆರಡು ಸುಪ್ರಸಂಗಗಳನ್ನಿರಿಸಿ ತಮ್ಮ ಅಭಿಪ್ರಾಯಗಳನ್ನು ಇನ್ನೂ ಸುಂದರಗೊಳಿಸಿದ್ದಾರೆ; ಇನ್ನೂ ಬಂಧುರಗೊಳಿಸಿದ್ದಾರೆ. — ಸಂ. ]

ಮೈಸೂರಿನ ಮುಖ್ಯಮಂತ್ರಿಗಳ ಗೌರವಾರ್ಥ ಶಿವಮೊಗ್ಗೆಯ ' ಶ್ರೀ ನಿಜಲಿಂಗ ನಿಲಯ ' ದಲ್ಲಿ ಒಂದು ಔತಣಕೂಟ ಏರ್ಪಟ್ಟಿತ್ತು. ಭೋಜನಾರ್ಥಿಗಳ ಸಂದೋಹ ಸಮಾವೇಶಗೊಂಡಿದ್ದರೂ ಊಟದ ತಳಿಗೆಗಳಿನ್ನೂ ಎಚ್ಚರಗೊಂಡಿರಲಿಲ್ಲ. ಸಂದೋಹ ಸಹಜ ಮಾತುಕತೆಯಲ್ಲಿ ತೊಡಗಿತ್ತು. ಆಗ ಇದ್ದಕ್ಕಿದ್ದಂತೆ ಓರ್ವ ಕುಳ್ಳನೆಯ, ತೆಳ್ಳನೆಯ ವ್ಯಕ್ತಿಯ ಆಗಮನ ಎಲ್ಲರ ಗಮನವನ್ನೂ ಸೆಳೆಯಿತು. ಎದ್ದುನಿಂತು ಗೌರವದೊಡನೆ ಸ್ವಾಗತ ಕೋರಲಾಯಿತು. ನನ್ನ ಆತ್ಮೀಯರಾದ ಶ್ರೀ ಮಲ್ಲಾರಾಧ್ಯರು ( ಶರಾವತಿ ಸಂಪಾದಕರು, ಶಿವಮೊಗ್ಗ ) ಮುಖ್ಯ ಅತಿಥಿ ( ಮಂತ್ರಿ ) ಗಳಿಗೆ ಎಲ್ಲರ ಪರಿಚಯ ಮಾಡಿಕೊಟ್ಟರು. ನಾನು ಶ್ರೀ ಜತ್ತಿಯವರನ್ನು ಕಂಡದ್ದು ಆಗ !

ನನಗೆ ಆಶ್ಚರ್ಯ ಆನಂದಗಳು ಒಟ್ಟಿಗೇ ಮೂಡಿದುವು. ಕಾರಣ " ಮೈಸೂರಿನ ಮುಖ್ಯಮಂತ್ರಿಯಾಗಿ ' ಜತ್ತಿ ' ಯವರನ್ನು ಆರಿಸಲಾಗಿದೆ " ಎಂದು ಪತ್ರಿಕೆಗಳು ಪ್ರಕಟಿಸಿದಾಗ ನನ್ನ ಮನಸ್ಸು ಕಂಡದ್ದು ಓರ್ವ ದೃಢಕಾಯದ 'ಜಟ್ಟಿ' ಯನ್ನು. ಆದರೆ ನಾನುಕಂಡ ಈ ವ್ಯಕ್ತಿ............

ಸಣ್ಣನೆಯ ಸೊಂಪಾದ ಬಿಲ್ವವೃಕ್ಷದ ತುದಿಗೆ
ಸಿಕ್ಕಿ ಬಿಡು ಒಂದುಂಡೆ ಪಚ್ಚ ಕರ್ಪುರ
ಮೇಲಿರಿಸು ಶುದ್ಧ ಸ್ಫಟಿಕದ ಟೋಪಿ ಪೂರಾ,
ನಡುವೆ ಸೇರಿಸು ಓಂಕಾರದಕ್ಕರವ ಜೊತೆಗೆ

ಅದೆ ಕಣ್ಣ ಬಟ್ಟಲೆನು, ನೀಳ ಮೂಗೆಂದುಕೊಳು,
ತುಂಬೆ ಹೂವಿನ ತುಟಿಯ ಮೇಲಿರಲಿ ಕರಿದುಂಬಿ,
ಬಂಡುಣುವ ಭಾವದಲಿ ಕಂಡು ಕಾಣದ ತೆರದಿ,
ಕುಳಿತಿರಲಿ ತುಟಿ–ಮೂಗು ಮಧ್ಯದೊಳು ಚುಕ್ಕೆವೊಲು,

ಅದೇ ಮೀಸೆ! ದಾಸವಾಳವೆ ಕೆನ್ನೆ, ಅಂಟಿರಲಿ ರೆಕ್ಕೆಗಿವಿ,
ತುಂಬು ಲಿಂಗದ ತಲೆಗೆ ಬೆಳದಿಂಗಳೊಂದಿನಿಸು,
ಉಬ್ಬಿದಳ ದೆರೆದಿರುವ ಹಣೆ ಗಡ್ಡಲಾಗಿರಿಸು
ಮೂರು ಬೆರಳಿನ ಪಟ್ಟೆ ಥಾಳ ದಪ್ಪ ವಿಭೂತಿ !

ನೂರು ಪೌಂಡಿನ ತೂಕದೀತನೇ ಜಗಜಟ್ಟಿ !
ಹೃದಯ ಶ್ರೀ ಮಂತಿಕೆಯ ಬಸಪ್ಪ ದಾ. ಜತ್ತಿ ! !

## ವೈನತೇಯ ಸಾಹಸ

ಕೂಡಲೇ ಸಾನೆಟ್ ಒಂದು ಸೃಷ್ಟಿಯಾಯಿತು ! ಅಂತೆಯೇ ದಕ್ಷತೆಯೇ ಈ ವಾಮನಮೂರ್ತಿಯ ವೈಶಿಷ್ಟ್ಯ ಎಂಬುದನ್ನರಿಯಲು ಹೆಚ್ಚುಕಾಲ ಬೇಕಾಗ ಲಿಲ್ಲ ಜನತೆಗೆ. ನಾಡಿನ ಒಳ ಹೊರಗೆ, ನಾಡವರ ಒಳಗೊಳಗೆ ಆತ ತಾನೇ ತಾನಾಗಿ ಹಮ್ಮಿಕೊಂಡ ! ಪಾತಾಳದಿಂದ ಭೂತಳದವರೆಗೆ, ಭೂತಳದಿಂದ ನಕ್ಷತ್ರ ಮಂಡಲದವರೆಗೆ ವ್ಯಾಪ್ತಿ ಪಡೆದಿದೆ ಅವನ ನಿಲವು! ಜಮಖಂಡಿಯಿಂದ ಮುಂಬಯಿಗೆ, ಮುಂಬಯಿಯಿಂದ ಮೈಸೂರಿಗೆ, ಮೈಸೂರಿಂದ ಪಾಂಡಿಚರಿಗೆ, ಪಾಂಡಿಚೆರಿಯಿಂದ ಭುವನೇಶ್ವರಕ್ಕೆ, ಅನಂತರ ದೆಹಲಿಗೆ ಲಂಘಿಸಿಯೇ ಬಿಟ್ಟ ಈ ವೀರ ಹನುಮ ! ಅವನ ವೈನತೇಯ ಸಾಹಸಕ್ಕೆ ಮೆಚ್ಚಿದ ಹೃದಯಗಳು ಹಲವು; ಕರುಬಿದ ಕೋಡಗಗಳು ಕೆಲವು ! ಆದರೂ ಈ 'ಜಟ್ಟಿ' ಅರವತ್ತು ಕೋಟಿ ಜನತೆಯ ಹೃದಯ ಸಾಮ್ರಾಜ್ಯವನ್ನು ಗೆದ್ದ ! ಅನಭಿಷಕ್ತ ಚಕ್ರವರ್ತಿಯೆನಿಸಿದ!

*  *  *  *  *

ಕ್ಷಮಿಸಿ.

ನಿಮ್ಮನ್ನು ಎಲ್ಲಿಂದ ಮತ್ತೆಲ್ಲಿಗೋ ಕರೆದು ಕೊಂಡು ಹೋದೆ. ಈಗ ನೀವು ದಯಮಾಡಿ ಶಿವಮೊಗ್ಗೆಗೆ ಬನ್ನಿ. ಅದೇ "ನಿಜಲಿಂಗ ನಿಲಯ" ಕ್ಕೆ ಬನ್ನಿ. ಬಂದಿರಾ ?

ಹೊಸಲು ದಾಟಿ................

ಮೇಲೆ — ಅದೇ ಮಹಡಿಯ ಮೇಲೆ ಬನ್ನಿ.

ಹಾಂ........ ! ಇದೇ — — ಇಲ್ಲೇ — ಈ ಹಾಲ್‌ನಲ್ಲಿ ಕುಳಿತಿಕೊಳ್ಳಿ. ಮುಖ್ಯಮಂತ್ರಿ ಶ್ರೀ ಜತ್ತಿಯವರು ಶಿವಪೂಜೆಗೆ ಹೋಗಿದ್ದಾರೆ.

ಅಗೋ !

## ವನವರ ಸಮಯ ಪ್ರಜ್ಞೆ !

ಹಾಗೆನ್ನುವಷ್ಟರಲ್ಲೇ ಬಂದು ಬಿಟ್ಟರು, ಏನವರ ಕಾರ್ಯ ತತ್ಪರತೆ, ನಿಷ್ಠೆ, ಸಮಯ ಪ್ರಜ್ಞೆ, ಎಚ್ಚರ ! ಇರಲಿ ಏಳಿ.
ಮಹಡಿಯ ಮತ್ತೊಂದು ಹಾಲ್‌ನಲ್ಲಿ ಊಟದ ವ್ಯವಸ್ಥೆ.

ಕೂರಿ ಕೂರಿ....................

ಸಲೀಸಾಗಿ ಒಂದೇ ಟೈಂನಲ್ಲಿ ಮೂವತ್ತು ಜನ ಕೂರಬಹುದು. ಆಯಿತು. ಈಗ ಸ್ವಲ್ಪ ಸಂಭಾಷಣೆ ಕೇಳುವಿರಾ. —

" ಏನ್ ಸಾರ್, ಮುಖ್ಯ ಮಂತ್ರಿಗಳಾದ ಮೇಲೂ ಪೂಜೆ, ಪ್ರಾರ್ಥನೆ, ನಿಷ್ಠೆ, ಭಕ್ತಿ — ಎಲ್ಲಾ ಇಟ್ಟು ಕೊಂಡಿದ್ದೀರಲ್ಲಾ ! "

" ಯಾಕೆ ?ಮಂತ್ರಿಯಾದಾಕ್ಷಣಕ್ಕೇ ಲಿಂಗಪೂಜೆ ಬಿಡಬೇಕು ಎಂದಿವೆಯೇ ? ಕೂಡದು........ಪೂಜೆ ಪ್ರಾರ್ಥನೆಗಳು ಚಿತ್ತ ಶುದ್ಧಿಗಾಗಿ, ರಾಜಕಾರಣಿಗೆ ಚಿತ್ತ ಶುದ್ಧಿ ಬೇಡ ಎಂಬುದು ನಿಮ್ಮ ಅಭಿಪ್ರಾಯವೇನು ? "

" ಹಾಗಲ್ಲ, ನಿಮ್ಮಂಥಾ ಶಿವಯೋಗಿ ಸ್ವರೂಪರಿಗೆ ಈ ರಾಜಕೀಯದ ಕೆಸರು ಬೇಡವಾಗಿತ್ತು. ತಮ್ಮ ಕ್ಷೇತ್ರ ರಾಜಕೀಯವಲ್ಲ; ಆಧ್ಯಾತ್ಮ! ನಾನು ಹೇಳಿದ್ದು ಈ ಅರ್ಥದಲ್ಲಿ ! "

"ನಾನು ಚಿಕ್ಕವನು. ನೀವು ನನ್ನನ್ನು ತುಂಬಾ ದೊಡ್ಡವನನ್ನಾಗಿ ಮಾಡುತ್ತಿದ್ದೀರಿ. ಆದರೆ ನೀವು ಕಡೆಯಲ್ಲಿ ಆಡಿದ ಮಾತುಗಳನ್ನು ಒಪ್ಪುತ್ತೇನೆ. ಕೇಳಿ —

ಕಮಲ ಬೆಳೆಯೋದು ಕೆಸರಿನಲ್ಲೇ; ಸಿಮೆಂಟ್ ಬೆಡ್ ಮೇಲಲ್ಲ. ಯಾವನೇ ರಾಜಕಾರಿಣಿ ಯಾಗಲಿ ಅವನು ರಾಜಕೀಯದ ಕೆಸರಿನಲ್ಲಿ ಬೆಳೆದ ಆಧ್ಯಾತ್ಮದ ತಾವರೆ ಯಾಗಬೇಕು. ಬಾಪೂಜಿ ಇದಕ್ಕೆ ಉತ್ತಮ ನಿದರ್ಶನವಾಗಿದ್ದಾರೆ. ಅವರು ರಾಜಕೀಯದಲ್ಲಿ ಆಧ್ಯಾತ್ಮವನ್ನು ಬೆರೆಸಿದರು. ಆತ್ಮ, ಆಧ್ಯಾತ್ಮ, ನೀತಿ, ನೈಷ್ಕರ್ಮ್ಯ, ನಿಸ್ಪೃಹತೆ, ನಿಸ್ವಾರ್ಥ, ಸಹನೆ, ಸಜ್ಜನಿಕೆ, ಸ್ನೇಹ, ಸೌಹಾರ್ದ, ಅನುಭೂತಿ, ಸಹಾನುಭೂತಿ, ಸಂಸ್ಕೃತಿ, ನಾಗರಿಕತೆ, ಶೀಲಾದಿ ಸದ್ಗುಣಗಳ ಗಣಿಯಾಗಿದ್ದರೇನೇ ರಾಜಕೀಯ ರಂಗವನ್ನು ಶುದ್ಧೀಕರಿಸಲು ಸಾಧ್ಯ. ಇಲ್ಲವಾದರೆ ಮಹಾಶಯನೊಬ್ಬನು ಹೇಳಿದಂತೆ. — "Politics is the last resort of a scoundrel" ಎನಿಸುವುದು ಸತ್ಯ. ಬಹುಬೇಗ ಒಬ್ಬವ್ಯಕ್ತಿ ಪುಂಡ ರಾಜಕಾರಿಣಿ ಆಗಬಹುದು, ಆದರೆ ಉತ್ತಮ Statesman ಆಗುವುದು ಕಷ್ಟ!"

"ಸ್ವತಂತ್ರ ಭಾರತದ ಪ್ರಸಕ್ತ ರಾಜಕೀಯದ ಬಗೆಗೆ ನೀವು ಏನು ಹೇಳುತ್ತೀರಿ?"

## ಶ್ಲಾಘನೀಯ

"ಚೆನ್ನಾಗಿದೆ ಎನ್ನುತ್ತೇನೆ. ಶ್ರೀ ಜವಾಹರಲಾಲರ ನೇತೃತ್ವದಲ್ಲಿ ನಮ್ಮ ರಾಜಕೀಯದ ರಥ ಸುಗಮವಾಗಿ ಸಾಗುತ್ತಿದೆ. ಅದರಲ್ಲಿ ಸಂದೇಹವೇ ಇಲ್ಲ. ನಮ್ಮ ವಿದೇಶಾಂಗ ನೀತಿ ತುಂಬಾ ಶ್ಲಾಘನೀಯವಾದುದಾಗಿದೆ. ಇಂದು ಜಗತ್ತಿಗೆ ಅರಿವಾಗಿದೆ ಭಾರತ ಸಕಾಲದಲ್ಲಿ ಶ್ರಮಿಸದೇ ಹೋಗಿದ್ದಿದ್ದರೆ ಮತ್ತೊಂದು ಮಹಾಯುದ್ಧ ತಪ್ಪುತ್ತಿರಲಿಲ್ಲ ಎಂದು. ಅಂದಬಳಿಕ ನಮ್ಮ ನಿಲವು ಎಂಥದು ಸ್ವಯಂವೇದ್ಯ. ಆದರೆ ಆಂತರಿಕವಾಗಿ ಚಿಕ್ಕಪುಟ್ಟ ಘಟನೆ ಇವೆ. ಹೊಸದಾಗಿ ಸಂಸಾರ ಹೂಡಿದಾಗ ಇವೆಲ್ಲಾ ಅನಿವಾರ್ಯ, ಅಲ್ಲವೇ?"

"ನಮ್ಮ ಭಾರತ ಸಂವಿಧಾನದ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ನಮ್ಮ ಸಂವಿಧಾನ ಸಮರ್ಪಕವಾಗಿಯೇ ಇದೆ. ಆದರೆ ಅಲ್ಲಲ್ಲಿ, ಆಗಾಗ, ಹಲಕೆಲವು ತಿದ್ದುಪಡಿ ಆವಶ್ಯಕ!"

" ಸಮರ್ಪಕ, ಸುಂದರ ಅನ್ನೋ ನಿಮ್ಮ ಅಭಿಪ್ರಾಯವನ್ನು ನಾನು ಒಪ್ಪೋಲ್ಲ. "

" ಏಕೆ ? ಹೇಗೇ "

" ತಿದ್ದು ಪಡಿಯು ಹೆಸರಿನಲ್ಲಿ ಸಂವಿಧಾನ ದಿನಕ್ಕೊಂದು ವೇಷ ಹಾಕಿದರೆ...............ಅದು ಸುಂದರ ಸಂವಿಧಾನವೆನ್ನಿಸುತ್ತದೆಯೋ ? ಕಾಲ ಕಾಲಕ್ಕೂ ತಿದ್ದುಪಡಿ ಅನುಕೂಲ ಸಿಂಧುವೆನಿಸಿದರೂ ಅಶ್ಚರ್ಯವಲ್ಲ! ಅಲ್ಲವೇ ? "

" ನೋಡಿ, ಯಾವ ದೇಶದ, ಯಾವ ಸಂವಿಧಾನವೂ ಬ್ರಹ್ಮ ಬರೆದ ಲಿಪಿಯೇನಲ್ಲ. ಹೊತ್ತು ವಾಲಿದಂತೆ ಸತ್ತಿಗೆ ಹಿಡಿಯಬೇಕಾಗುತ್ತದೆ. ಈ ವಿಷಯದಲ್ಲಿ ರಾಜಕೀಯ ರಂಗ ಹೊರತಲ್ಲ. "

## ಸುವ್ಯವಸ್ಥಿತ ಸಂಸ್ಥೆ

" ಕಾಂಗ್ರೆಸ್ ಸಂಸ್ಥೆಯ ಭವಿಷ್ಯದ ಬಗೆಗೆ ಊಹೆ ಹರಿಸುತ್ತೀರಾ ? "

" ಓಹೋ ಅದಕ್ಕೇನು ? ಭವಿಷ್ಯ ಭವ್ಯವಾಗಿಯೇ ಇದೆ. ಅದೊಂದೇ ಇಂದು ಭಾರತದಲ್ಲಿರುವ ಸುವ್ಯಸ್ಥಿತ ಸಂಸ್ಥೆ. ಆದರೆ ಅಶ್ವತ್ಥಾಮನಂತೆ ಚಿರಂಜೀವಿ ಎಂದು ಹೇಳುವ ಧಾರ್ಷ್ಟ್ಯ ನನಗಿಲ್ಲ. ಏಕೆಂದರೆ ಯಾವ ವ್ಯವಸ್ಥೆಯೂ ಶಾಶ್ವತವಲ್ಲ. ಚಿರಂತನವಲ್ಲ. ಆಗಲುಯತ್ನಿಸಬಾರದು; ಆಗಬಾರದು. ಆಗ ಕೇಳಿ, ಲಾರ್ಡ್ ಟೆನ್ನಿಸ, ಮಾರ್ಟೆ ಡಿ ಆರ್ಥರ್ ಎಂಬ ಕವನದಲ್ಲಿ ಹೇಳಿರುವಂತೆ —

Old orders changeth yielding place.
And God fulfils Himself in many ways.
Let one good custom should corrupt the world. "

ಆದ್ದರಿಂದ ಎಲ್ಲಕ್ಷೇತ್ರದಲ್ಲೂ ಬದಲಾವಣೆ ಆಗಲೇ ಬೇಕು. ಬದಲಾವಣೆಯೇ ಬೆಳವಣಿಗೆ,ಬದಕು. ಎಲ್ಲದಕ್ಕೂ ಒಂದು ಕಾಲ ನಿಗದಿಯಾಗಿದೆ. ಇದಕ್ಕೂ ಒಂದು ಗಡುವುಗೊತ್ತಾಗಿದೆ. ನಡೆಯೋತನಕ ನಾಣ್ಯ ! "

ಊಟ ಮುಗಿದರೂ ಮಾತು ಮುಗಿದಿರಲಿಲ್ಲ. ಮುಂದೇನಾಯಿತೋ ನಾನು ಕಾಣೆ. ಏಕೆಂದರೆ ನಾನು ಮಲಗಿ ಬಿಟ್ಟೆ !

* * * * *

ಅಣ್ಣನ ಕನಸಿನ ಕನ್ನಡಿ ಕಲ್ಯಾಣ ಅದನ್ನು ಕೈಲಾಸವನ್ನಾಗಿಸುವ ಹಸಿವು ಹಂಬಲ ಅವನದಾಗಿತ್ತು. ಅಂಥದೇ ಆಕಾಂಕ್ಷೆ ಶ್ರೀ ಜತ್ತಿಯವರದು. ಅದೇ 'ಬಸವ ಸಮಿತಿ' ಅದು ಅವರ ಕರಣೆಯ ಕೂಸು. ಬೆಂಗಳೂರಿನಲ್ಲಿ ಕೆಲವೇ ದಿನಗಳ ಹಿಂದೆ ಜನ್ಮ ತಳೆದ ಈ ಜತ್ತಿ ಮಾನಸ ಸುಪುತ್ರಿ ಇಂದು ಪ್ರಾಪ್ತ ವಯಸ್ಸಿನ ಕನ್ಯೆ ಯಾಗಿದ್ದಾಳೆ. ಅವಳ ಭವಿಷ್ಯದ ಬಗೆಗೆ ವಿಶೇಷ ಚಿಂತನೆ ನಡೆಸಿದ್ದಾರೆ. ಅವರು ಪ್ರೈಮರಿ ಶಾಲಾ ಬಾಲಕಿಯರಿಗೆ, ಬಸವಣ್ಣನವರ ವಚನಗಳ ಕಂಠ ಪಾಠ ಸ್ಪರ್ಧೆಯನ್ನೇರ್ಪಡಿಸುವಷ್ಟರಲ್ಲಿ, ಬಸವೇಶ್ವರನ ಅಂಚೆ ಚೀಟಿ ಬಿಡುಗಡೆಯಲ್ಲಿ, ಭಾವಚಿತ್ರ ಅನಾವರಣ, ಭಾಷಣ, ಮೆರವಣಿಗೆ, ಕೈ ಚಪ್ಪಾಳೆಗಳಲ್ಲಿ — ಇಷ್ಟರಲ್ಲೇ ಮುಗಿವು ಪಡೆಯಲಿಲ್ಲ. ಅದರ ಯೋಜನೆ ಬೃಹತ್ತಾಗಿದೆ. ಶ್ರೀಮಾನ್ ಜತ್ತಿಯವರು ಅದನ್ನೇ ಕುರಿತು ಸದಾ ಆಲೋಚಿಸುತ್ತಿರುತ್ತಾರೆ. ಬಸವೇಶ್ವರನ ವಿಶ್ವಸಾಮರಸ್ಯದ ವಿಶುದ್ಧ ದರ್ಶನ ಜಗತ್ತಿಗೆ ಗೋಚರವಾಗುವಂತೆ ಮಾಡಬೇಕು; ವಿಶ್ವಾದ್ಯಂತ ಪ್ರಮುಖ ನಗರಗಳಲ್ಲಿ, ಕೇಂದ್ರಗಳಲ್ಲಿ, ಒಂದೊಂದು ಬಸವ ಸದನ ನಿರ್ಮಾಣವಾಗಬೇಕು; ಅಲ್ಲಿ ಬಸವಣ್ಣನ ಆದರ್ಶ, ವಿಶ್ವವಿಶಾಲ ದೃಷ್ಟಿ — ಇವು ಬೆಳಗುತ್ತಿರಬೇಕು. ಅಂತೆಯೇ ವಿಶ್ವ ಸಾಹಿತ್ಯಕ್ಕೆ ತಮ್ಮ ಅಪೂರ್ವ ಕಾಣಿಕೆ ಸಲ್ಲಿಸಿದ ಅಲ್ಲಮ, ಬಸವ, ಸಿದ್ಧರಾಮ, ಚೆನ್ನ ಬಸವ, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರ ವಚನರಚನಾರೂಪದ ಅವರ ಅನುಭವ ಸಾಹಿತ್ಯ ಜಗತ್ತಿನ ಎಲ್ಲ ದೇಶದ, ಎಲ್ಲ, ವೇಷದ, ಎಲ್ಲ ಭಾಷೆಯ ವ್ಯಕ್ತಿಗೂ ದೊರಕುವಂತಾಗಬೇಕು.

## ಮುಕ್ಕೋಟಿ ಕನ್ನಡಿಗರದು

ಇದು ಅವರ ಇಂದಿನ ಯೋಜನೆ. ಅದೀಗ ಕಾರ್ಯರೂಪಕ್ಕೆ ಬರಬೇಕಾಗಿದೆ. ಅದರ ಕನಸು ಇಂದು ನನಸಾಗಬೇಕಾಗಿದೆ. ಅದನ್ನು ಆಗು ಮಾಡುವ ಹೊಣೆ ಮುಕ್ಕೋಟಿ ಕನ್ನಡಿಗರದ್ದಾಗಿದೆ.

* * * * *

ಬಸವಣ್ಣನವರ ಎಂಟುನೂರನೆಯ ಹಬ್ಬವನ್ನು ವಿಶ್ವಾದ್ಯಂತ ಆಚರಿಸಿದಾಗ ಬೆಂಗಳೂರು ಸರ್ಪಭೂಷಣ ಮಠದ ಅಧಿಪತಿಗಳಾದ ನಿ. ಪ್ರ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರಕೂಡೆ ಭೇಟಿ ಮಾಡಿದೆ. ಶ್ರೀ ಬಿ. ಡಿ. ಜತ್ತಿಯವರನ್ನು

ಆ ಮೊದಲೇ ಅಚ್ಚಾದ ನನ್ನ 'ಭಾರತರತ್ನ' ಎಂಬ ಗ್ರಂಥವನ್ನು ಶ್ರೀ ಜತ್ತಿಯ ವರ ಕೈಗಿತ್ತೆ. ಮುಖಪುಟವನ್ನು ತೆರೆದು ಓದಿದರು; ಆಶ್ಚರ್ಯಪಟ್ಟರು. — ಏನ್ರೀ ಈ ಗ್ರಂಥವನ್ನು ನನಗೆ ಅರ್ಪಣೆ ಮಾಡಿದ್ದೀರಿ. ನನಗೆ ಗೊತ್ತೇಇಲ್ಲ. ನೀವು ತಿಳಿಸಲೇಇಲ್ಲ."

"ಹೌದು ತಿಳಿಸಬಾರದೆಂಬುದೇ ನನ್ನ ಉದ್ದೇಶವಾಗಿತ್ತು. ತಿಳಿಸಿದ್ದಿದ್ದರೆ ಈ ವಿಸ್ಮಯವನ್ನು ನಿಮ್ಮ ಮುಖದಲ್ಲಿ ಕಾಣಲಾಗುತ್ತಿರಲಿಲ್ಲ. !"

"ಅದು ಸರಿ........ನಾನೀಗ ಮುಖ್ಯಮಂತ್ರಿ ಅಲ್ಲವಲ್ಲ !"

## ಮಿಗಿಲಾದ ಮಹಾತ್ಮೆ

"ನಾನು ಮುಖ್ಯಮಂತ್ರಿಗಳಿಗೆಂದೇ ಅರ್ಪಿಸಲಿಲ್ಲ. ನಾನು ನಿಮ್ಮಲ್ಲಿ ಮಂತ್ರಿ ಗಿಂತ ಮಿಗಿಲಾದ ಮಹಾತ್ಮೆ ಒಂದಿದೆ. ಅದಕ್ಕಾಗಿ ಈ ಗ್ರಂಥವನ್ನು ಅರ್ಪಿಸಿ ದ್ದೇನೇ ಹೊರತು ಮಿಕ್ಕ ಯಾವ ಕ್ಷುಲ್ಲಕ ಭಾವನೆಯಿಂದಲೂ ಅಲ್ಲ; ಕೆಟ್ಟ ಸ್ವಾರ್ಥ ಸಾಧನೆಗಾಗಿಯೂ ಅಲ್ಲ. ಮಂತ್ರಿಗಳ ಮರ್ಜಿಗಾಗಿ ಸೆರಗೊಡ್ಡಿ ನಿಲ್ಲುವ ಹೇಯ ವ್ಯಕ್ತಿ ನಾನಲ್ಲ. ನಾನು ಆ ಮಟ್ಟಕ್ಕೆ ಇಳಿದಿಲ್ಲ. ಯಾರೂ ಇಳಿಸುವುದು ಬೇಡ."

"ಛೆ, ಬಿಡಿ, ನಾನು ತಮಾಷೆಗೆ ಹಾಗಂದೆ ಅಷ್ಟೆ. ಬೇರೇನೂ ಅರ್ಥ ಅಡ ಗಿಸಿರಲಿಲ್ಲ ಅದರಲ್ಲಿ" ಅಂದರು.

* * * * *

ನಿರಾಡಂಬರದ ಸರಳ ಜೀವಿ ಶ್ರೀ ಜತ್ತಿಯವರ ಬಗೆಗೆ ಎಷ್ಟೊ ಹೇಳಿ ದರೂ ಕಡಿಮೆಯೇ. ಅವರ ವಿನಯ, ವಿವೇಚನೆ, ವಿಚಾರಪರತೆ, ದೈವಭಕ್ತಿ, ರಾಷ್ಟ್ರಪ್ರೇಮ, ಸ್ವಜನವಾತ್ಸಲ್ಯ, ನುಡಿಯ ಅಭಿಮಾನ, — ಇವು ಅಮೇಯ ಅನ್ಯಾದೃಶ.

ಕಡೆಯಯದಾಗಿ ಒಂದು ಮಾತು —

ಪೂರ್ಣಯೋಗಿ ಅರವಿಂದರ ಆತ್ಮಾರಾಮವೆನಿಸಿದ ಪಾಂಡಿಚರಿಗೆ ಲೆಫ್ಟಿ ನೆಂಟ್ ಗೌವ್ಹರ್ನರ್ ಆಗಿ ಹೋಗುವ ಮುನ್ನ ಯಾರೋ ಭವಿಷ್ಯ ನುಡಿದಿದ್ದ ರಂತೆ – "ಅಪ್ಪ ನಿನಗೆ ರಾಜನಾಗುವ ಯೋಗವಿದೆ" ಎಂದು. ಅದೇ ರಾಜ ಇಂದು ಉಪರಾಷ್ಟ್ರಪತಿ ! ಮುಂದೆ................?

ಆಗಬಹುದು ನಮ್ಮ ನೆಚ್ಚಿನ ರಾಷ್ಟ್ರಾಧ್ಯಕ್ಷ! ಅಂತಾಗಲಿ ಆ ಪುಣ್ಯ ಭರತ ವರ್ಷಕ್ಕಾಗಲಿ. ಅದನ್ನು ಕಂಡು ಆನಂದಿಸುವ ಭಾಗ್ಯ ಕನ್ನಡಿಗರದಾಗಲಿ. – ಇಂತು ಹಾರ್ದಿಕವಾಗಿ ಹಾರಯಿಸಿ ವಿರಮಿಸುತ್ತೇನೆ.



## ಕತ್ತೆ ಮನುಜರು

ಹೊತ್ತಾರೆಯಿಂದ ಅಸ್ತಮಯತನಕ
ಸುತ್ತಿರ್ದ ಮಾಯಾ ಪ್ರಪಂಚವನೆ ಅಳೆವುತ್ತ ಸುರಿವುತ್ತ
ಕತ್ತಲೆಯಾದರೆ ಕಾಳು ವಿಷಯದೊಳಗೆ ಮುಳುಗಿತ್ತು
ಸತ್ತು ಹುಟ್ಟಿತ್ತು.
ಮತ್ತೆ ಬೆಳಗಾಗೆದ್ದು 'ನಾನು ತತ್ವವ ಬಲ್ಲೆ'
ಎಂದು ನುಡಿವ ಕತ್ತೆ ಮನುಜರು
ಅವರತ್ತ ಹೊದ್ದದೆ, ಇತ್ತಲೆ ನಿಂದು
ನಾಚಿ ನಗುತಿರ್ದ ನಮ್ಮ ಬಸವಪ್ರಿಯ ಕೂಡಲ
ಚೆನ್ನಬಸವಣ್ಣ

— ಹಡಪದಪ್ಪಣ್ಣನವರು

# ಸರಳ – ಸೌಜನ್ಯತೆ ಪ್ರತೀಕ ಶ್ರೀ ಜತ್ತಿ

● ಕಡಿದಾಳ ಮಂಜಪ್ಪ

● [ ಶ್ರೀ ಕಡಿದಾಳ ಮಂಜಪ್ಪನವರು ರಾಜ್ಯದ ಮಾಜಿ ಮುಖ್ಯ ಮಂತ್ರಿಗಳು; ಶ್ರೀ ಜತ್ತಿ ಅವರ ಸಂಪುಟದಲ್ಲಿ ಸಚಿವರಾಗಿದ್ದವರು. ಅವರು ನೋಡಲಿಕ್ಕೆ ಎಷ್ಟು ತೆಳ್ಳಗಿದ್ದಾರೋ ಅಷ್ಟೇ ಬೆಳ್ಳಗಿದ್ದಾರೆ ( ನಿಷ್ಕಳಂಕರು ). ಆದರೆ ಒಂದು ಕುತೂಹಲಜನಕ ಸಂಗತಿಯೆಂದರೆ ಅವರು ತೆಳ್ಳಗಿದ್ದಷ್ಟು ಮೆಲ್ಲಗಿಲ್ಲ. ಮಾತಿನ ರಭಸವೂ ಅಷ್ಟೇ; ವಿಚಾರ ರಭಸವೂ ಅಷ್ಟೇ. ಬೆಳ್ತಿತ್ತಿನ ಮರೆಯಲಿರ್ದು ಹುಲ್ಲಿಗೆ ಅಂಬು ತೊಡುವುದು ಅವರಿಗೆ ಗೊತ್ತಿಲ್ಲ. ಇದ್ದುದನ್ನು ಇದ್ದಂತೆ ಹೇಳುವ ಅಳುಕಿಲ್ಲದವರು ಶ್ರೀ ಕಡಿದಾಳರು. — ಸಂ. ]

ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿಯವರು ಕಲ್ಬುರ್ಗಿಗೆ ಬಂದಾಗ ಅವರನ್ನು ಸನ್ಮಾನಿಸಿ, ಅವರಿಗೊಂದು ಸಂಭಾವನಾ ಗ್ರಂಥವನ್ನು ಸಮರ್ಪಿಸುವ ವಿಚಾರ ಯುಕ್ತವಾದುದೇ ಆಗಿದೆ. ಅಧಿಕಾರಸ್ಥಾನದಲ್ಲಿರುವವರನ್ನು ಅನಾವಶ್ಯಕವಾಗಿ ಹೊಗಳುವುದೂ, ಅವರ ಬಳಿ ಸುಳಿದಾಡುವುದೂ ನನ್ನ ಮನಸ್ಸಿಗೆ ಒಗ್ಗದ ವಿಚಾರ. ಆದರೆ ಇದ್ದುದನ್ನು ಇದ್ದಹಾಗೆ ಹೇಳುವುದರಿಂದ ಹೊಗಳುಭಟನಂತಾಗುವುದಿಲ್ಲ. ನಾನು ಶ್ರೀ ಜತ್ತಿಯರ ಸಚಿವಸಂಪುಟದಲ್ಲಿ ಸುಮಾರು ನಾಲ್ಕುವರೆ ವರ್ಷಗಳ ಕಾಲ ಮಂತ್ರಿಯಾಗಿದ್ದೆ. ಆ ಕಾಲದಲ್ಲಿ ಅವರ ಕಾರ್ಯತತ್ಪರತೆಯನ್ನೂ ಗುಣಾವಗುಣಗಳನ್ನೂ ಅವಲೋಕಿಸುವ ಸದವಕಾಶ ನನಗೆ ಲಭಿಸಿತ್ತು. ನಾನು ಅವರಲ್ಲಿ ಕಂಡಿದ್ದ ಕೆಲವು ಉತ್ತಮ ಗುಣಗಳನ್ನು ಪ್ರಸ್ತಾಪಿಸುವುದು ಈ ಲೇಖನದ ಉದ್ದೇಶ.

ಶ್ರೀ ಜತ್ತಿಯವರು ರಾಜಕೀಯದ ಅಖಾಡದಲ್ಲಿ ಪಳಗಿದ ಜಟ್ಟಿ. ಎದುರಾಳಿಗಳ ಪಟ್ಟುಗಳಿಗೆ ಸಿಕ್ಕದೆ, ಅವರಿಗೆ ತೀವ್ರ ಗಾಸಿ ಮಾಡದೆ ಚಾಕಚಕ್ಯತೆಯಿಂದ ತಮ್ಮ ಗುರಿಯನ್ನು ಸಾಧಿಸುವುದರಲ್ಲಿ ನಿಪುಣರು. ಅವರೊಡನೆ ಕೆಲ

ಕಾಲ ಮಂತ್ರಿಯಾಗಿ ಕೆಲಸಮಾಡಿದುದು ನನಗೊಂದು ಹರ್ಷದಾಯಕ ಅನುಭವ ವಾಗಿತ್ತು. ಅವರು ನನ್ನನ್ನು ಬಹಳ ಗೌರವದಿಂದ ಕಾಣುತ್ತಿದ್ದರೆಂಬುದನ್ನು ನಾನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದು ನನ್ನ ಕರ್ತವ್ಯ.

ಶ್ರೀ ಜತ್ತಿಯವರು ಸೌಜನ್ಯ-ಸರಳತೆಗೆ ಹೆಸರಾದವರು. ಕೆಲವರಿಗೆ ಮೂರು ಕಾಸಿನ ಅಧಿಕಾರ ಸಿಕ್ಕರೆ ಒಂದುರೂಪಾಯಿನಷ್ಟು ದುರಹಂಕಾರ ಬರು ತ್ತದೆ. ಶ್ರೀ ಜತ್ತಿಯವರು ಮುಖ್ಯಮಂತ್ರಿಯಾಗಿದ್ದರೂ ನಿಗರ್ವಿಗಳಾಗಿ ನಿರಾ ಡಂಬರದಿಂದ ಸಾಮಾನ್ಯ ಜನರಂತೆ ವರ್ತಿಸುತ್ತಿದ್ದರು. ಈಗಲೂ ಹಾಗೆಯೇ ಇರಬಹುದೆಂದು ನನ್ನ ಭಾವನೆ. ಅವರು ಈ ರಾಜ್ಯದ ಮುಖ್ಯಮಂತ್ರಿಯಾಗಿ ದ್ದಾಗ, ಯಾರ ಮನಸ್ಸನ್ನೂ ಅನಾವಶ್ಯಕವಾಗಿ ನೋಯಿಸದೆ ತಮ್ಮ ಕೆಲಸವನ್ನು ಸಾಮರ್ಥ್ಯದಿಂದಲೂ, ಪ್ರಾಮಾಣಿಕತೆಯಿಂದಲೂ ನಿರ್ವಹಿಸುತ್ತಿದ್ದರು. ಅಂದು ಅವರ ನೇತೃತ್ವದಲ್ಲಿ ನಡೆಯುತ್ತಿದ್ದ ಸರ್ಕಾರದ ಕಾರುಭಾರುಗಳು ತೃಪ್ತಿಕರ ವಾಗಿದ್ದವೆಂದು ಜನಸಾಮಾನ್ಯರ ಅಭಿಪ್ರಾಯ.

## ಸಹಸ್ರಪಾಲು ಮೇಲು

ಹೀಗೆ ಹೇಳುವುದರಿಂದ ಶ್ರೀ ಜತ್ತಿಯವರಲ್ಲಿ ನ್ಯೂನತೆಗಳು ಲವಲೇಶವೂ ಇಲ್ಲವೆಂಬುದು ನನ್ನ ಅಭಿಪ್ರಾಯವಲ್ಲ. ಆದರೆ ಒಂದುಮಾತು ನಿರ್ವಿವಾದ. ಇಂದು ಈ ದೇಶದಲ್ಲಿ ಅಲ್ಲಲ್ಲಿ ಉನ್ನತ ಪದವಿಗಳಲ್ಲಿರುವ ಹಲವರೊಡನೆ ಹೋಲಿಸಿ ನೋಡಿದರೆ ಶ್ರೀ ಜತ್ತಿಯವರು ಸಹಸ್ರ ಪಾಲು ಮೇಲು. ಉನ್ನತ ಸ್ಥಾನಗಳಲ್ಲಿರುವ ರಾಜಕಾರಣಿಗಳು ಆದರ್ಶಪ್ರಾಯರಾಗಿ ಪ್ರಾಮಾಣಿಕತೆಯಿಂದ ವರ್ತಿಸಿದರೆ ಜನಸಾಮಾನ್ಯರೂ ಅಧಿಕಾರಿ ವರ್ಗದವರೂ ಅವರ ಮೇಲ್ಪಂಕ್ತಿ ಯನ್ನು ಅನುಸರಿಸುತ್ತಾರೆ. ಪ್ರಜಾಪ್ರಭುತ್ವವೂ ಯಶಸ್ವಿಯಾಗಿ ಸಾಗುತ್ತದೆ. ನಾಯಕ ವರ್ಗದವರು ದಾರಿತಪ್ಪಿ ನಡೆದರೆ ಪ್ರಜಾವರ್ಗದವರೂ ಅವರಹಾದಿಯನ್ನು ಹಿಡಿಯುತ್ತಾರೆ. ಆಗ ಪ್ರಜಾತಂತ್ರದ ರೈಲು ಹಳಿತಪ್ಪಿ ಕೆಳಗುರುಳುತ್ತದೆ.

ಇಂದು ಶ್ರೀ ಜತ್ತಿಯವರು ಉಪರಾಷ್ಟ್ರಪತಿಯಾಗಿದ್ದಾರೆ. ಅವರಲ್ಲಿ ರಾಷ್ಟ್ರ ಭಕ್ತಿ ಇದೆ; ದೈವಭಕ್ತಿ ಇದೆ; ಅವರಿಗೆ ಪ್ರಜಾಪ್ರಭುತ್ವದಲ್ಲಿ ಅಚಲವಾದ ನಂಬಿಕೆ ಇದೆ. ಮೇಲಾಗಿ ಜನಸಾಮಾನ್ಯರ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದು ಕೊಂಡಿದ್ದಾರೆ. ಇಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ರಾಷ್ಟ್ರದ ಉನ್ನತಿಗಾಗಿ, ಪ್ರಜಾಪ್ರಭುತ್ವದ ಪಾಲನೆಗಾಗಿ, ಜನರ ಹಿತರಕ್ಷಣೆಗಾಗಿ ಶಕ್ತಿಮೀರಿ ದುಡಿ

ಯುವ ಧೈರ್ಯ–ಸ್ಥೈರ್ಯಗಳನ್ನು ಪರಮಾತ್ಮನು ಅವರಿಗೆ ನೀಡಲೆಂದು ಪ್ರಾರ್ಥಿಸುತ್ತೇನೆ. ಅವರು ಧೀರ್ಘಾಯುವಾಗಿ ಬಾಳಲಿ. ಅವರಿಂದ ಇನ್ನೂ ಹೆಚ್ಚಿನ ದೇಶಸೇವೆ ನಡೆಯುವಂತಾಗಲಿ.



## ಜಗದೀಶ

ಕಣ್ಣು ಮೊಸಲು ಶಿವನ, ಕಿವಿ ಮೊಸಲು ಶಿವನ;
ನಾಲಿಗೆ ಮೊಸಲು ಶಿವನ, ನಾಸಿಕ ಮೊಸಲು ಶಿವನೆ
ಕೈಯು ಮೊಸಲು ಶಿವನ, ಕಾಲು ಮೊಸಲು ಶಿವನ
ತನು ಮೊಸಲು ಶಿವನ, ಮನವೆಲ್ಲ ಮೊಸಲು ಶಿವನ
ಈ ಮೊಸಲು ಬೇಸರವೋಗದಂತಿದ್ದಡೆ
ಆತನೇ ಜಗದೀಶ ಕಾಣಾ ರಾಮನಾಥಾ.

— ದೇವರ ದಾಸಿಮಯ್ಯನವರು

# ಧರ್ಮವನ್ನು ಬೆಳಗಿದ ಧೀಮಂತ ವ್ಯಕ್ತಿ

● ಪ್ರಭುಲಿಂಗಯ್ಯ ವಿ. ಮಲ್ಲಾಪುರ,
ಎಂ. ಎ.

● [ ಶ್ರೀ ಪ್ರಭುಲಿಂಗಯ್ಯ ವಿ. ಮಲ್ಲಾಪುರ ಅವರು ಉತ್ಕಟ ಧರ್ಮಾಭಿಮಾನಿಗಳು. ಧರ್ಮನಿಷ್ಠೆ ಅವರ ತಂದೆ ಲಿಂಗೈಕ್ಯ ವೀರಯ್ಯಸ್ವಾಮಿಗಳಿಂದಲೇ ರಕ್ತಗತವಾಗಿ ಬಂದಿದೆ. ಶ್ರೀ ಜತ್ತಿ ಅವರ ಧಾರ್ಮಿಕ ನಿಲವು ಲೇಖಕರನ್ನು ಅಭಿಮಾನ ಪುಳಕಿತರನ್ನಾಗಿ ಮಾಡಿದೆ ಎನಿಸುತ್ತದೆ. ರಾಜಕಾರಣಿಗಳಲ್ಲಿ ಅಪೂರ್ವವಾದ ಧರ್ಮಪ್ರಜ್ಞೆಯನ್ನು ಶ್ರೀ ಜತ್ತಿ ಅವರಲ್ಲಿ ನೋಡಿದ ಬಳಿಕಂತೂ ಶ್ರೀ ಪ್ರಭುಲಿಂಗಯ್ಯನವರಿಗೆ ಮರಳ ಬೇಗೆಯಲ್ಲಿ ತಿಳಿ ಒರತೆ ಕಂಡಷ್ಟು ಸಂತೃಪ್ತಿಯುಂಟಾಗಿರಬೇಕು. ಆ ಭಾವನೆಗಳು ಲೇಖನದಲ್ಲಿ ಒಡಮೂಡಿವೆ. — ಸಂ. ]

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅನಧಿಕೃತ ರಾಯಭಾರಿಗಳಾಗಿ ಈ ನಾಡಿನ ಧರ್ಮ, ಸಾಹಿತ್ಯ, ರಾಜಕೀಯ ಸತ್ವಾತಿಶಯವನ್ನು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಬಹು ಸಮರ್ಥವಾಗಿ ಹರಡಿರುವ ಕೆಲವೇ ಜನ ಮಹಾ ವ್ಯಕ್ತಿಗಳಲ್ಲಿ ಭಾರತದ ಇಂದಿನ ಉಪ ರಾಷ್ಟ್ರಪತಿಗಳಾಗಿ ಕಾರ್ಯಗೌರವ ನಿರ್ವಹಿಸುತ್ತಿರುವ ಮಾನ್ಯ ಶ್ರೀ ಬಸಪ್ಪ ದಾನಪ್ಪ ಜತ್ತಿಯವರ ಹೆಸರು ಬಹು ಎತ್ತರದಲ್ಲಿ ನಿಲ್ಲುತ್ತದೆ.

ಒಂದು ನಾಡಿನ ಅಥವಾ ದೇಶದ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳಕು ಎಷ್ಟೇ ಉಜ್ವಲವಾಗಿದ್ದರೂ, ವಿಶ್ವಮಾನ್ಯ ತತ್ವಗಳನ್ನು ಅದು ಒಳಗೊಂಡಿದ್ದರೂ, ಅದರ ಜ್ವಲಂತ ಪ್ರಜ್ಞೆಯನ್ನು ಹೊತ್ತು ಬಾಳುವ ವ್ಯಕ್ತಿಗಳಿಲ್ಲದೆ ಆ ಸದ್ಧರ್ಮ ಬಾಳಲಾರದು; ಆಳವಾದ ತಿಳುವಳಿಕೆ, ಅನುಭವ, ನಿಸ್ಪೃಹಭಾವದ ನಿರ್ವಿಕಾರ ಗುಣದ ನಿರಂತರ ಕಳಕಳಿಯ ಪ್ರಸಾರ, ಸಮತೆ – ಸ್ಥೈರಣೆಗಳಿಂದೊಡಗೂಡಿದ ಉದಾರ ಮನೋಭಾವ, ಅಚಲ ನಿಷ್ಠೆ ಇಂಥ ಗುಣದ ವ್ಯಕ್ತಿಗಳಿಲ್ಲದೆ ಪ್ರಪಂಚದ ಉದ್ದಗಲಕ್ಕೆ ಹರಡಲಾರದು; ಪ್ರಚಾರವಾಗಲಾರದು. ಒಂದು

ರೀತಿಯಲ್ಲಿ ಜಾಗತಿಕ ಮಹಾಧರ್ಮಗಳೆಲ್ಲ ಮಾನವಧರ್ಮಗಳೇ ಆಗಿವೆ, ಪ್ರಪಂಚದ ಮಹಾನುಭಾವರೆಲ್ಲ ಲೋಕಗುರುಗಳೇ ಆಗಿದ್ದಾರೆ. ತಮ್ಮ ಸಾಧನೆ ಸಿದ್ಧಿಗಳಿಂದ ಮಾನವ ಜೀವನಕ್ಕೆ ಮಹತ್ತನ್ನು ತಂದುಕೊಟ್ಟಿರುವ ಅವರನ್ನು ವಿಶ್ವಬಂಧುಗಳೆಂದು ಕರೆಯುವುದು ಸಮಂಜಸ. ಈ ದೃಷ್ಟಿಯಿಂದ ನೋಡಿದಾಗ ಯಾವ ಮಹಾ ಧರ್ಮವನ್ನೂ ಒಪ್ಪಿಕೊಳ್ಳುವ, ಪ್ರಸಾರಮಾಡುವ, ಪ್ರಚಾರ ಮಾಡುವ ಧರ್ಮದೂತನ ಕೆಲಸ ವ್ಯಕ್ತಿಗೂ ಕ್ಷೇಮಕರ; ಜನತೆಗೂ ಅಭ್ಯುದಯ ಪರ. ಇಂಥ ಮಹಾಮಣಿಹವನ್ನು ಶ್ರದ್ಧೆಯಿಂದ ಹೊತ್ತುಕೊಂಡು ನಿರ್ವಹಿಸುವ ಕಾರ್ಯ ನಮ್ಮಲ್ಲಿ ಪರಂಪರಾಗತವಾಗಿ ಬಂದಿದೆ. ಈ ಪರಂಪರೆಯ ಗೌರವಾನ್ವಿತ ವ್ಯಕ್ತಿಗಳಲ್ಲಿ ಶ್ರೀ ಬಿ. ಡಿ. ಜತ್ತಿಯವರ ಹೆಸರು ತಲೆಮಣಿಯಾಗಿದೆ.

ನನ್ನ ಈ ಉಕ್ತಿಗೆ ಕಾರಣಗಳನ್ನು ನಾಡೇ ಬಲ್ಲುದು. ಶ್ರೀ ಬಸವಣ್ಣನವರ ದಿವ್ಯಶಕ್ತಿಯ ಮುಂದಾಳುತನದಲ್ಲಿ ಶಿವಶರಣರು ಒಂದುಗೂಡಿ ಕೆಲಸಮಾಡಿ ವೀರಶೈವ ಧರ್ಮಕ್ಕೆ ಸುಸ್ವರೂಪವನ್ನು ತಂದಿತ್ತರು. ಅವರ ದಾರ್ಶನಿಕ ಶಕ್ತಿಯ ಫಲವಾಗಿ, ಮಾನವತೆಯ ಉದ್ಧಾರದ ಅದಮನೀಯ ಬಯಕೆಯ ಕಾರಣವಾಗಿ ವೀರಶೈವಧರ್ಮ ವಿಶ್ವಧರ್ಮದ ಪ್ರತಿರೂಪವಾಗಿ ಮಾರ್ಪಟ್ಟಿತು. ಇಂಥ ಲೋಕೋತ್ತರ ಧರ್ಮದ ಸ್ವರೂಪವನ್ನು ಮತ್ತು ಶಿವಶರಣರ ಭಾವ, ಬುದ್ಧಿ, ಶ್ರದ್ಧೆ, ಸಾಹಸ, ನಿಸ್ಪೃಹತೆ, ವಿಶ್ವಬಂಧುತ್ವ, ಕಾಯಕ ನಿಷ್ಠೆ ಮುಂತಾದ ಲೋಕಮಾನ್ಯ ಗುಣ – ಇವುಗಳನ್ನು ವಚನಗಳು ಸಹಜವಾಗಿ ನಿರೂಪಿಸುತ್ತವೆ. ಈ ಬಗೆಯ ಸೋಜ್ವಲ ಧರ್ಮ ಹಾಗೂ ಸಾಹಿತ್ಯಕೂಡ ಬದುಕಿಸುವವರಿಲ್ಲದೆ, ಬಾಳುವರಿಲ್ಲದೆ ಉಳಿದು ಬರಲಾರದು; ಬೆಳೆದು ಬರಲಾರದು. ಇತಿಹಾಸವನ್ನು ಓದಿದ ಯಾರಿಗೂ ಈ ಮಾತಿನ ಸತ್ಯ ವೇದ್ಯವಾಗದೆ ಇರದು.

## ನವ್ಯ ಪ್ರಜ್ಞೆ

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತೀಯರ ಧರ್ಮಶಕ್ತಿ ಪ್ರಜ್ವಲಗೊಳ್ಳಬೇಕಾದ ಅವಶ್ಯಕತೆ ಪ್ರಾಪ್ತವಾಯಿತು. ಆಧುನಿಕ ಮಹಾಪುರುಷರು, ಮಹರ್ಷಿಗಳು ಪರಂಪರೆಯಲ್ಲಿಯ ಧರ್ಮತೇಜವನ್ನು ಭಾರತೀಯರಲ್ಲಿಯೂ, ನಮ್ಮ ದೇಶವನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದ ಪಾಶ್ಚಾತ್ಯರಲ್ಲಿಯೂ ಹೊಸದಾಗಿ ಮೂಡಿಸಬೇಕಾಯಿತು. ಈ ಬಗೆಯ ನವ್ಯ ಪ್ರಜ್ಞೆಯ ಬೆಳಕೇ ಭಾರತೀಯರ ದಾಸ್ಯಬಾಳಿನ ಕತ್ತಲೆಯನ್ನು ಕಳೆಯಲು ಕಾರಣವಾಯಿತೆಂಬ

# ಧರ್ಮವನ್ನು ಬೆಳಗಿದ ಧೀಮಂತ ವ್ಯಕ್ತಿ

ಪ್ರಭುಲಿಂಗಯ್ಯ ವಿ. ಮಲ್ಲಾಪುರ,
ಎಂ. ಎ.

[ ಶ್ರೀ ಪ್ರಭುಲಿಂಗಯ್ಯ ವಿ. ಮಲ್ಲಾಪುರ ಅವರು ಉತ್ಕಟ ಧರ್ಮಾಭಿಮಾನಿಗಳು. ಧರ್ಮನಿಷ್ಠೆ ಅವರ ತಂದೆ ಲಿಂಗೈಕ್ಯ ವೀರಯ್ಯಸ್ವಾಮಿಗಳಿಂದಲೇ ರಕ್ತಗತವಾಗಿ ಬಂದಿದೆ. ಶ್ರೀ ಜತ್ತಿ ಅವರ ಧಾರ್ಮಿಕ ನಿಲವು ಲೇಖಕರನ್ನು ಅಭಿಮಾನ ಪುಳಕಿತರನ್ನಾಗಿ ಮಾಡಿದೆ ಎನಿಸುತ್ತದೆ. ರಾಜಕಾರಣಿಗಳಲ್ಲಿ ಅಪೂರ್ವವಾದ ಧರ್ಮಪ್ರಜ್ಞೆಯನ್ನು ಶ್ರೀ ಜತ್ತಿ ಅವರಲ್ಲಿ ನೋಡಿದ ಬಳಿಕಂತೂ ಶ್ರೀ ಪ್ರಭುಲಿಂಗಯ್ಯನವರಿಗೆ ಮರಳ ಬೇಗೆಯಲ್ಲಿ ತಿಳಿ ಒರತೆ ಕಂಡಷ್ಟು ಸಂತೃಪ್ತಿಯುಂಟಾಗಿರಬೇಕು. ಆ ಭಾವನೆಗಳು ಲೇಖನದಲ್ಲಿ ಒಡಮೂಡಿವೆ. — ಸಂ. ]

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅನಧಿಕೃತ ರಾಯಭಾರಿಗಳಾಗಿ ಈ ನಾಡಿನ ಧರ್ಮ, ಸಾಹಿತ್ಯ, ರಾಜಕೀಯ ಸತ್ವಾತಿಶಯವನ್ನು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಬಹು ಸಮರ್ಥವಾಗಿ ಹರಡಿರುವ ಕೆಲವೇ ಜನ ಮಹಾ ವ್ಯಕ್ತಿಗಳಲ್ಲಿ ಭಾರತದ ಇಂದಿನ ಉಪ ರಾಷ್ಟ್ರಪತಿಗಳಾಗಿ ಕಾರ್ಯಗೌರವ ನಿರ್ವಹಿಸುತ್ತಿರುವ ಮಾನ್ಯ ಶ್ರೀ ಬಸಪ್ಪ ದಾನಪ್ಪ ಜತ್ತಿಯವರ ಹೆಸರು ಬಹು ಎತ್ತರದಲ್ಲಿ ನಿಲ್ಲುತ್ತದೆ.

ಒಂದು ನಾಡಿನ ಅಥವಾ ದೇಶದ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳಕು ಎಷ್ಟೇ ಉಜ್ವಲವಾಗಿದ್ದರೂ, ವಿಶ್ವಮಾನ್ಯ ತತ್ವಗಳನ್ನು ಅದು ಒಳಗೊಂಡಿದ್ದರೂ, ಅದರ ಜ್ವಲಂತ ಪ್ರಜ್ಞೆಯನ್ನು ಹೊತ್ತು ಬಾಳುವ ವ್ಯಕ್ತಿಗಳಿಲ್ಲದೆ ಆ ಸದ್ಧರ್ಮ ಬಾಳಲಾರದು; ಆಳವಾದ ತಿಳುವಳಿಕೆ, ಅನುಭವ, ನಿಸ್ಪೃಹಭಾವದ ನಿರ್ವಿಕಾರ ಗುಣದ ನಿರಂತರ ಕಳಕಳಿಯ ಪ್ರಸಾರ, ಸಮತೆ – ಸೈರಣೆಗಳಿಂದೊಡಗೂಡಿದ ಉದಾರ ಮನೋಭಾವ, ಅಚಲ ನಿಷ್ಠೆ ಇಂಥ ಗುಣದ ವ್ಯಕ್ತಿಗಳಿಲ್ಲದೆ ಪ್ರಪಂಚದ ಉದ್ದಗಲಕ್ಕೆ ಹರಡಲಾರದು; ಪ್ರಚಾರವಾಗಲಾರದು. ಒಂದು

ರೀತಿಯಲ್ಲಿ ಜಾಗತಿಕ ಮಹಾಧರ್ಮಗಳೆಲ್ಲ ಮಾನವಧರ್ಮಗಳೇ ಆಗಿವೆ, ಪ್ರಪಂಚದ ಮಹಾನುಭಾವರೆಲ್ಲ ಲೋಕಗುರುಗಳೇ ಆಗಿದ್ದಾರೆ. ತಮ್ಮ ಸಾಧನೆ ಸಿದ್ಧಿಗಳಿಂದ ಮಾನವ ಜೀವನಕ್ಕೆ ಮಹತ್ತನ್ನು ತಂದುಕೊಟ್ಟಿರುವ ಅವರನ್ನು ವಿಶ್ವಬಂಧುಗಳೆಂದು ಕರೆಯುವುದು ಸಮಂಜಸ. ಈ ದೃಷ್ಟಿಯಿಂದ ನೋಡಿದಾಗ ಯಾವ ಮಹಾ ಧರ್ಮವನ್ನೂ ಒಪ್ಪಿಕೊಳ್ಳುವ, ಪ್ರಸಾರಮಾಡುವ, ಪ್ರಚಾರ ಮಾಡುವ ಧರ್ಮದೂತನ ಕೆಲಸ ವ್ಯಕ್ತಿಗೂ ಕ್ಷೇಮಕರ; ಜನತೆಗೂ ಅಭ್ಯುದಯ ಪರ. ಇಂಥ ಮಹಾಮಣಿಹವನ್ನು ಶ್ರದ್ಧೆಯಿಂದ ಹೊತ್ತುಕೊಂಡು ನಿರ್ವ ಹಿಸುವ ಕಾರ್ಯ ನಮ್ಮಲ್ಲಿ ಪರಂಪರಾಗತವಾಗಿ ಬಂದಿದೆ. ಈ ಪರಂಪರೆಯ ಗೌರವಾನ್ವಿತ ವ್ಯಕ್ತಿಗಳಲ್ಲಿ ಶ್ರೀ ಬಿ. ಡಿ. ಜತ್ತಿಯವರ ಹೆಸರು ತಲೆಮಣಿ ಯಾಗಿದೆ.

ನನ್ನ ಈ ಉಕ್ತಿಗೆ ಕಾರಣಗಳನ್ನು ನಾಡೇ ಬಲ್ಲುದು. ಶ್ರೀ ಬಸವಣ್ಣನವರ ದಿವ್ಯಶಕ್ತಿಯ ಮುಂದಾಳುತನದಲ್ಲಿ ಶಿವಶರಣರು ಒಂದುಗೂಡಿ ಕೆಲಸಮಾಡಿ ವೀರಶೈವ ಧರ್ಮಕ್ಕೆ ಸುಸ್ವರೂಪವನ್ನು ತಂದಿತ್ತರು. ಅವರ ದಾರ್ಶನಿಕ ಶಕ್ತಿಯ ಫಲವಾಗಿ, ಮಾನವತೆಯ ಉದ್ಧಾರದ ಅದಮನೀಯ ಬಯಕೆಯ ಕಾರಣವಾಗಿ ವೀರಶೈವಧರ್ಮ ವಿಶ್ವಧರ್ಮದ ಪ್ರತಿರೂಪವಾಗಿ ಮಾರ್ಪಟ್ಟಿತು. ಇಂಥ ಲೋಕೋತ್ತರ ಧರ್ಮದ ಸ್ವರೂಪವನ್ನು ಮತ್ತು ಶಿವಶರಣರ ಭಾವ, ಬುದ್ಧಿ, ಶ್ರದ್ಧೆ, ಸಾಹಸ, ನಿಸ್ಪೃಹತೆ, ವಿಶ್ವಬಂಧುತ್ವ, ಕಾಯಕನಿಷ್ಠೆ ಮುಂತಾದ ಲೋಕ ಮಾನ್ಯ ಗುಣ – ಇವುಗಳನ್ನು ವಚನಗಳು ಸಹಜವಾಗಿ ನಿರೂಪಿಸುತ್ತವೆ. ಈ ಬಗೆಯ ಸೋಜ್ವಲ ಧರ್ಮ ಹಾಗೂ ಸಾಹಿತ್ಯಕೂಡ ಬದುಕಿಸುವವರಿಲ್ಲದೆ, ಬಾಳುವರಿಲ್ಲದೆ ಉಳಿದು ಬರಲಾರದು; ಬೆಳೆದು ಬರಲಾರದು. ಇತಿಹಾಸವನ್ನು ಓದಿದ ಯಾರಿಗೂ ಈ ಮಾತಿನ ಸತ್ಯ ವೇದ್ಯವಾಗದೆ ಇರದು.

## ನವ್ಯ ಪ್ರಜ್ಞೆ

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತೀಯರ ಧರ್ಮಶಕ್ತಿ ಪ್ರಜ್ವಲ ಗೊಳ್ಳಬೇಕಾದ ಅವಶ್ಯಕತೆ ಪ್ರಾಪ್ತವಾಯಿತು. ಆಧುನಿಕ ಮಹಾಪುರುಷರು, ಮಹರ್ಷಿಗಳು ಪರಂಪರೆಯಲ್ಲಿಯ ಧರ್ಮತೇಜವನ್ನು ಭಾರತೀಯರಲ್ಲಿಯೂ, ನಮ್ಮ ದೇಶವನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದ ಪಾಶ್ಚಾತ್ಯರಲ್ಲಿಯೂ ಹೊಸದಾಗಿ ಮೂಡಿಸಬೇಕಾಯಿತು. ಈ ಬಗೆಯ ನವ್ಯ ಪ್ರಜ್ಞೆಯ ಬೆಳಕೇ ಭಾರತೀಯರ ದಾಸ್ಯಬಾಳಿನ ಕತ್ತಲೆಯನ್ನು ಕಳೆಯಲು ಕಾರಣವಾಯಿತೆಂಬ

ಮಾತಿನಲ್ಲಿ ಅತಿಶಯೋಕ್ತಿಯಿಲ್ಲ. ಧರ್ಮದ ನವ್ಯಪ್ರಜ್ಞೆಯನ್ನುಂಟು ಮಾಡುವ ಕಾರ್ಯದಲ್ಲಿ ಕರ್ನಾಟಕವೂ ಹಿಂದೆ ಬೀಳಲಿಲ್ಲ ಎಂಬುದು ಹೆಮ್ಮೆಯ ಸಂಗತಿ.

ಶ್ರೀ ಜತ್ತಿಯವರು ತಮ್ಮ ಜೀವನವೃತ್ತಿಯೊಡನೆ ಧರ್ಮದ—ಅದರಲ್ಲಿಯೂ ವೀರಶೈವಧರ್ಮದ ಸಾತ್ವಿಕ ಶಕ್ತಿಯನ್ನು ನಂಬಿಕೊಂಡೇ ನಡೆದವರು. ವಕೀಲಿ ವೃತ್ತಿಯಲ್ಲಾಗಲಿ, ರಾಜಕಾರಣದಲ್ಲಾಗಲಿ, ಜನ್ಮಿಸಿದ ಪ್ರಾಂತದ ಮಂತ್ರಿ, ಮುಖ್ಯಮಂತ್ರಿಯ ಸ್ಥಾನದಲ್ಲಿ ಇದ್ದಾಗಲಾಗಲಿ, ನಾಡಿನ ಸೀಮೆಯನ್ನು ದಾಟಿ ಲೆಫ್ಟಿನಂಟ್ ಗವರ್ನರ್ ಅಥವಾ ಗವರ್ನರ್ ಹುದ್ದೆಗಳನ್ನು ವಹಿಸಿಕೊಂಡಾಗಲೇ ಆಗಲಿ, ಈಗ ಉಪರಾಷ್ಟ್ರಪತಿಯ ಪದವಿಯನ್ನಲಂಕರಿಸಿರುವ ಉನ್ನತ ಜೀವನದ ಅವಧಿಯಲ್ಲಾಗಲಿ ಈ ಶಕ್ತಿ ಅವರ ಜೀವನದೊಡನೆ ಹಾಸು ಹೋಕ್ಕಾಗಿ ಬೆರೆತುಕೊಂಡಿದೆ. ಇಷ್ಟೇ ಅಲ್ಲ; ಅದು ಅವರ ಕಾರ್ಯಕ್ಷಮತೆಯನ್ನು ಹೆಚ್ಚಿಸಿದೆ; ಮನೋಭಾವವನ್ನು ವಿಶಾಲಗೊಳಿಸಿದೆ; ಪ್ರಭಾವಪೂರ್ಣ ವ್ಯಕ್ತಿತ್ವ ವಿಕಸನ ಗೊಳ್ಳುವಂತೆ ಪರಿಣಾಮ ಬೀರಿದೆ. ಧರ್ಮದಲ್ಲಿಯ ಈ ಅಚಲ ನಂಬುಗೆ ಅವರಿಗೆ ಯಾವ ಮಟ್ಟದಲ್ಲಿಯೂ ಸಂದೇಹವನ್ನು ಹುಟ್ಟಿಸಿಲ್ಲ; ಘನತೆಯನ್ನು ಕುಂದಿ ಸಿಲ್ಲ. ಇಂದಿನ ವೈಚಾರಿಕ (?) ಪ್ರಪಂಚದಲ್ಲಿ ಧರ್ಮಾಸಕ್ತಿ, ಧರ್ಮ ಶ್ರದ್ಧೆಗಳು ಸಂಕುಚಿತ ಮನೋವೃತ್ತಿಯ ಪ್ರತೀಕ. ವ್ಯಕ್ತಿಯ ಏಳಿಗೆಯ ದಾರಿಯಲ್ಲಿ ಇವು ಆತಂಕಕಾರಿ ಎಂದು ಭಾವಿಸಿ, ಬೋಧಿಸಿ, ಸ್ವಾರ್ಥ ದೇಳಿಗೆಗಾಗಿ ಅದನ್ನು ತ್ಯಜಿಸಿ ನಾನು ಧರ್ಮಾತೀತನೆಂದು ಹೆಮ್ಮೆ ಯಿಂದ ಜನರೆದುರು ಹೇಳಿಕೊಂಡವರೂ ಇದ್ದಾರೆ; ಹೇಳಿಕೊಳ್ಳುವವರೂ ಇದ್ದಾರೆ. ಆಮೇಲೆ ಕೆಟ್ಟು ಕಣ್ತೆರೆದು ನಿಂತವರೂ ಇದ್ದಾರೆ. ಆದರೆ ಉದಾತ್ತವೂ ಸಕಲ ಮಾನವ ಕುಲೋತ್ಕರ್ಷಕಾರಕವೂ ಆಗಿರುವ ಧರ್ಮವನ್ನು ನಂಬಿ ನಡೆಯುವುದರಲ್ಲಿ, ಶಕ್ತಿಮೀರಿ, ಆ ಧರ್ಮದ ಸರ್ವಸಮ್ಮತ ತತ್ವಗಳನ್ನು ಪ್ರಸಾರ ಮಾಡುವಲ್ಲಿ ಎಳ್ಳನಿತು ಪ್ರಮಾದವಿಲ್ಲವೆಂದು ನೆರೆನಂಬಿ ನಡೆದಿರುವ ಧೀಮಂತ ವ್ಯಕ್ತಿ ಶ್ರೀ ಜತ್ತಿ.

**ಕಾರಣಕರ್ತರು**

ಶಿವಶರಣರ ತತ್ವಪ್ರಣಾಲಿಯನ್ನು, ಒಸವ ಸಂದೇಶವನ್ನು ದೇಶ ವಿದೇಶ ಗಳಲ್ಲಿ ಪ್ರಚುರಪಡಿಸುವ ಘನೋದ್ದೇಶದಿಂದಲೇ ಬಸವ ಸಮಿತಿಯನ್ನು ಸ್ಥಾಪಿಸ ಲಾಯಿತು. ಮಾನ್ಯ ಜತ್ತಿಯವರು ಅದರ ಅಧ್ಯಕ್ಷರಾಗಿದ್ದುಕೊಂಡು ಬಸವೇಶ್ವ ರರ ಎಂಟನೆಯ ಶತಮಾನೋತ್ಸವವು ರಾಷ್ಟ್ರಾದ್ಯಂತ ಬಹು ವಿಜೃಂಭಣೆ

ಯೊಂದಿಗೆ ನೆರವೇರುವುದಕ್ಕೆ ಕಾರಣಕರ್ತರಾದರು. ಈ ಅಜರಾಮರ ಕೀರ್ತಿಯ ಬಹು ಪಾಲು ಶ್ರೀ ಜತ್ತಿಯವರಿಗೆ ಸಲ್ಲುತ್ತದೆ. ಈ ಉತ್ಸವದ ಮೂಲಕ ಇವರು ದೇಶಕ್ಕೆ ಬಸವಣ್ಣನವರ ವಿಶಾಲ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಟ್ಟರು; ಬಸವಣ್ಣನವರು ಕಟ್ಟ ಬಯಸಿದ ಸಮಾಜ, ಆಚರಿಸಬೇಕೆಂದ ಧಾರ್ಮಿಕ ಮತ್ತು ಸಾಮಾಜಿಕ ಮೌಲ್ಯಗಳು, ಇಂದಿನ ನಮ್ಮ ಪ್ರಜಾಪ್ರಭುತ್ವ, ಸರ್ವಸಮಾನತೆ, ದುಡಿಮೆಯ ಮನ್ನಣೆ ಇವುಗಳಿಗಿಂತ ಭಿನ್ನವಾದುವುಗಳಲ್ಲ; ಅದಕ್ಕೂ ಮುಂದೆ ಸಾಗಿದಂಥವುಗಳೆಂಬುದನ್ನು ಮನವರಿಕೆ ಮಾಡಿಕೊಟ್ಟರು. ಶಿವಶರಣರ ವಿಚಾರಧಾರೆಯಲ್ಲಿ; ಅವರ ನಡೆಯಲ್ಲಿ ಈ ಬಗೆಯಾದ ಸತ್ವಸಂಜೀವಿನಿ ಅಡಗಿದೆಯೆಂಬುದನ್ನು ನಮ್ಮ ನಾಡೇ ತಿಳಿದುಕೊಂಡಿರಲಿಲ್ಲ. ಇಂಥ ಪ್ರಜ್ಞಾಶೂನ್ಯ ವಾತಾವರಣದಲ್ಲಿ ಹೊಸ ಪ್ರಜ್ಞೆಯ ತೂರ್ಯವಾಣಿಯನ್ನು ಮೊಳಗಿಸಿ, ಕನ್ನಡ ನೆಲದ ಮಹಾತ್ಮನೊಬ್ಬನನ್ನು ಇತರರಿಗೆ ಪರಿಚಯಿಸಿ ಭಾರತದ ಧಾರ್ಮಿಕ ಶಕ್ತಿಯ ಭಂಡಾರವನ್ನು ಶ್ರೀಮಂತಗೊಳಿಸಿದರು. ಇದು ಸಾಮಾನ್ಯ ಕೆಲಸವಲ್ಲ. ಧರ್ಮಜಾಗೃತಿಯ ಇತಿಹಾಸದ ಪುಟಗಳಲ್ಲಿ ಶಾಶ್ವತವಾಗಿ ನಿಲ್ಲುವ ಲೋಕೋತ್ತರ ಸಾಹಸ !

## ಶ್ರದ್ಧೆ — ಸಾಹಸ

ಶ್ರೀ ಜತ್ತಿಯವರ ಶ್ರದ್ಧೆ, ಸಾಹಸಗಳು ಶ್ರೀ ಬಸವೇಶ್ವರರ ಅಷ್ಟ ಶತಮಾನದ ಉತ್ಸವಕ್ಕಷ್ಟೇ ಸೀಮಿತವಾಗಿರಲಿಲ್ಲ. ಹಲವಾರು ಉದ್‌ಗ್ರಂಥಗಳು ಈ ಸಂದರ್ಭದಲ್ಲಿ ಪ್ರಕಟಗೊಂಡು ಶಿವಶರಣರ ಜೀವನ, ಅವರ ಧ್ಯೇಯ, ಆದರ್ಶಗಳು ದೇಶ, ವಿದೇಶಗಳ ಜನರಿಗೆ ತಿಳಿಯುವಂತಾಯಿತು. ಇಂಥ ಮಹತ್ವದ ಗ್ರಂಥಗಳಲ್ಲಿ ಕೆಲವು ಹೀಗಿವೆ. (೧) ಬಸವೇಶ್ವರರು ಮತ್ತು ಅವರ ಸಮಕಾಲೀನರು (೨) Sri Basaveshwar (೩) Thus spake Basava ಮತ್ತು (೪) ಚಿತ್ಕಳೆ ( ಮಹಾದೇವಿಯಕ್ಕನನ್ನು ಕುರಿತಾದ ಗ್ರಂಥ) ಇವುಗಳಲ್ಲಿ ಇಂಗ್ಲೀಷಿನ ಗ್ರಂಥಗಳು ಅತ್ಯಂತ ಮಹತ್ವಪೂರ್ಣವಾದವುಗಳು. ನಮ್ಮ ನಾಡಿನ ಗಡಿಯನ್ನೂ, ನುಡಿಯನ್ನೂ ದಾಟುವುದು ಅಸಾಧ್ಯವಾಗಿದ್ದ ಬಸವಣ್ಣನವರ ಜೀವನ ಚರಿತ್ರೆ, ಸಮಾಜಕ್ರಾಂತಿಯ ಸ್ವರೂಪ, ತತ್ವಜ್ಞಾನ ಇವು ರಾಷ್ಟ್ರೀಯ ಸೀಮೆಯನ್ನು ಮೀರಿ ಅಂತರರಾಷ್ಟ್ರೀಯ ವಲಯದಲ್ಲಿ ಸಂಚರಿಸುವುದು ಈ ಗ್ರಂಥದದಿಂದ ಸಾಧ್ಯವಾಯಿತು. 'ಬಸವ ಸಾಹಿತ್ಯ ದರ್ಪಣ' ವೆಂಬ ಇನ್ನೊಂದು ಸಂಶೋಧನ ಗ್ರಂಥ ಮಾಲೆಯ ಗ್ರಂಥವೂ ಅತ್ಯಪೂರ್ವ ಕೃತಿ. ಬಸವಣ್ಣನವರನ್ನು ಕುರಿತು ಎಂಟು ಭಾಷೆಗಳಲ್ಲಿ ಬರೆದಿರುವ ೪೧೫

ಪುಸ್ತಕಗಳ ಉಲ್ಲೇಖವನ್ನು ನಾವಿಲ್ಲಿ ಕಾಣಬಹುದಾಗಿದೆ. 'Sri Basaveshwar' ಎಂಬ ಇಂಗ್ಲೀಷ ಗ್ರಂಥದಲ್ಲಿ, ಬಸವಣ್ಣನವರನ್ನು ಜಾಗತಿಕ ಪ್ರಮುಖ ಧಾರ್ಮಿಕ ಪುರುಷರೊಂದಿಗೆ ಹೋಲಿಸಿ ಬರೆದಿರುವ ಲೇಖನಗಳು, ವೀರಶೈವ ಸಿದ್ಧಾಂತವನ್ನು ಭಾರತದ ಇತರ ಧಾರ್ಮಿಕ ಸಿದ್ಧಾಂತಗಳೊಂದಿಗೆ ತೌಲನಿಕ ವಾಗಿ ತೂಗಿ ವಿಮರ್ಶಿಸಿರುವ ಬರಹಗಳು, ಭಾರತದ ಇತರ ಭಾಷೆಗಳಲ್ಲಿ ಬಸವ ಹಾಗೂ ಬಸವ ಸಂದೇಶವನ್ನು ಕುರಿತಾದ ಲೇಖನಗಳು ಅಮೂಲ್ಯ ವಿಷಯ ಸಂಗ್ರಹವನ್ನೊಳಗೊಂಡು ಪುಸ್ತಕದ ಉಪಯುಕ್ತತೆಯನ್ನು ಉನ್ನತ ಮಟ್ಟಕ್ಕೇರಿಸಿವೆ. ಇಂಥ ವಿಸ್ತೃತ ಬರವಣಿಗೆಯ ವಿಸ್ಮಯ ಕಾರ್ಯ ಇದೇ ಮೊದಲನೆಯದು. ಕನ್ನಡ ಸಾಹಿತ್ಯದಲ್ಲಿ ಇಂಗ್ಲೀಷಿನ ಈ ಗ್ರಂಥ ಶಾಶ್ವತ ದಾಖಲೆಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ. ಲಿಂಗೈಕ್ಯ ಶ್ರೀ ಎಸ್. ಆರ್. ಕಂಠಿಯವರು ಶ್ರೀ ಜತ್ತಿಯವರ ಈ ಮಹತ್ಕಾರ್ಯವನ್ನು ಮುಕ್ತ ಕಂಠದಿಂದ ಹೀಗೆ ಹೊಗಳಿದ್ದಾರೆ—

"It would not be out of place if I were to say that it was Sri B. D. Jatti, chairman of Basava Samiti who first mooted the idea of holding the eight centenary celebrations of Sri Basaveshwar and bringing out publications on him ................ It is true that the name of Sri Basaveshwar has not so far been very widely known out side Karnatak. An attempt is now made to present to the world a true picture of this great Soul"

## ಅವಿಸ್ಮರಣೀಯ

ಮಾನ್ಯ ಶ್ರೀ ಜತ್ತಿಯವರು ಈ ಕಾರ್ಯವನ್ನು ಪೂರೈಸುವದಕ್ಕಾಗಿ ವಹಿಸಿದ ಶ್ರದ್ಧೆ, ಅವಿರತವಾಗಿ ದುಡಿದ ಪರಿ, ತೋರಿದ ದೂರದೃಷ್ಟಿ, ಸಂಘಟಿಸಿದ ಜಾಣ್ಮೆ, ಅಭೂತಪೂರ್ವ ಮತ್ತು ಅವಿಸ್ಮರಣೀಯ. ಈ ಮಹಾ ಮಣಿಹದಲ್ಲಿ ಕೇವಲ ಬಸವಣ್ಣನವರ, ವಚನಕಾರರ ಪ್ರಸಾರ ಕಾರ್ಯ ವಿದೆಯೆಂದು ಅವರು ಭಾವಿಸಲಿಲ್ಲ. ಓರ್ವ ದಾರ್ಶನಿಕನಂತೆ, ಈ ಕಾರ್ಯ

ದಲ್ಲಿ ಲೋಕಕಲ್ಯಾಣದ ತತ್ತ್ವವಡಗಿದೆ; ಭಾರತ ವರ್ಷದ ಧಾರ್ಮಿಕ ತೇಜದ ಪುನರುತ್ಥಾನವಿದೆ ಎಂಬ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡರು. ಆದುದರಿಂದಲೇ ಶ್ರೀ ಜತ್ತಿಯವರು ಇನ್ನಾವುದನ್ನೂ ಲೆಕ್ಕಿಸದೆ ಈ ಕಾರ್ಯಗೌರವವನ್ನು ಆನಂದದಿಂದ ವಹಿಸಿಕೊಂಡರು; ಯಶಸ್ವಿಯಾಗಿ ನಿರ್ವಹಿಸುತ್ತ ಬಂದರು. ಬಸವಣ್ಣನ ಜನನ, ಸಾಧನೆ, ಸಿದ್ಧಿಗಳಿಗೆ ಮೈಲಿಗಲ್ಲುಗಳಾಗಿ ಮೆರೆದ ಬಸವನ ಬಾಗೇವಾಡಿ, ಕೂಡಲಸಂಗಮ ಮತ್ತು ಬಸವಕಲ್ಯಾಣಗಳು ಹೊಸ ರೂಪು, ಚೇತನಗಳನ್ನು ಹೊತ್ತು ಮತ್ತೆ ಶೋಭಿಸುವಂತಾದವು ಈ ಅವಧಿಯಲ್ಲಿ.

## ಸದಾಸ್ಫೂರ್ತಿ

ಶ್ರೀ ಜತ್ತಿಯವರ ಶ್ರದ್ಧಾಸಕ್ತಿಗಳು ಬಸವೇಶ್ವರರ ಎಂಟನೆಯ ಶತಮಾನೋತ್ಸವದೊಡನೆ ಮುಗಿದು ಹೋಗಲಿಲ್ಲ. ಇದು ಅವರಿಗೊದಗಿದ ಸಮಯಸ್ಫೂರ್ತಿಯಿಂದ ಆದ ಕೆಲಸವಲ್ಲ; ಸದಾಸ್ಫೂರ್ತಿಯಾಗಿ ನಿರಂತರ ಸಾಗುವ ಸಾಧನೆ. ಈ ನಿಟ್ಟಿನಲ್ಲಿ ನಾವಿನ್ನೂ ಮಾಡಬೇಕಾಗುವುವೇನು ಎಂಬುದನ್ನು 'ಬಸವ ಸಮಿತಿ' ಯ ಅಧ್ಯಕ್ಷರಾಗಿದ್ದುಕೊಂಡು ಅವರು ಸದಾ ಚಿಂತಿಸುತ್ತಲೇ ಇರುತ್ತಾರೆ. ಮೊನ್ನೆ ಮೊನ್ನೆ ಬೆಂಗಳೂರಿನಲ್ಲಿ ಕರೆಯಲಾಗಿದ್ದ ಬಸವ ಸಮಿತಿಯ ಸರ್ವ ಸದಸ್ಯರ ಸಭೆಯಲ್ಲಿ ಬಸವತತ್ತ್ವ ಪ್ರಚಾರದ ಮುಂದಿನಕಾರ್ಯ ಭಾರವನ್ನವರು ಉಪನ್ಯಾಸದ ಮೂಲಕ ಉಲ್ಲೇಖಿಸಿದರು. ಹನ್ನೆರಡನೆಯ ಶತಮಾನದ ಶಿವಶರಣರ ವಿಚಾರಧಾರೆಗಳು ಇಪ್ಪತ್ತನೆಯ ಶತಮಾನದ ಜಾಗತಿಕ ಜನಾಂಗಕ್ಕೆಲ್ಲ ಮಾರ್ಗದರ್ಶಕಗಳಾಗಿವೆ; ಇಂಥ ದಿವ್ಯ ತತ್ತ್ವಗಳ ಬಗ್ಗೆ ಪರದೇಶದವರ ಆಸಕ್ತಿಯನ್ನು ನಾವೀಗ ಕೆರಳಿಸಬೇಕಾಗಿದೆ ಎಂದು ಶ್ರೀ ಜತ್ತಿಯವರು ಹೇಳುತ್ತಾರೆ. ಬಾನುಲಿ, ಟೆಲಿವಿಜನ್‌ಗಳ ಮೂಲಕವೂ ಈ ಪ್ರಸಾರಕಾರ್ಯ ಸಾಗಬೇಕು."ಬಸವ ಬ್ಯಾಲೆಟ್" ಗಳಂಥ ಆಕರ್ಷಕ ಕಾರ್ಯಕ್ರಮಗಳು ಜನಮನವನ್ನು ಸೂರೆಗೊಳ್ಳುವಂತಾಗಬೇಕು. ಇದು ಅವರ ಮಹದಾಶಯ. ಇದೇ ಆಗಸ್ಟ ತಿಂಗಳಿನಲ್ಲಿ ಇಂಗ್ಲೆಂಡಿನ ಬಿ. ಬಿ. ಸಿ. ವರ್ಲ್ಡಸರ್ವೀಸ್ ಕಾರ್ಯಕ್ರಮದಲ್ಲಿ, ಕ್ರಿಶ್ಚಿಯನ್ ಸಂಪರ್ಕದ ಜಾಗತಿಕ ಸಂಘದ ರೆ|| ರಾಬರ್ಟಸನ್ ಅವರು ಬಸವಣ್ಣನವರ ವಚನಗಳನ್ನು ಮತ್ತು ತತ್ತ್ವಗಳನ್ನು ಬಿತ್ತರಿಸಲು ವ್ಯವಸ್ಥೆಮಾಡಿದ್ದರು. ಕನ್ನಡಿಗರು ಹರ್ಷರೋಮಾಂಚಿತರಾಗಿ ಈ ಕಾರ್ಯಕ್ರಮವನ್ನು ಕೇಳಿದ್ದಾರೆ. ಬಸವಣ್ಣನವರನ್ನು ಕುರಿತು ಬರೆದಿರುವ ಎಂಟು ಭಾಷೆಗಳಲ್ಲಿಯ ಸುಮಾರು ಅರವತ್ತಕ್ಕೂ ಮಿಕ್ಕಿದ ಗ್ರಂಥಗಳೆಲ್ಲ ಪ್ರತಿ ಜಿಲ್ಲೆಯ ಪುಸ್ತಕ ಭಂಡಾರಗಳಲ್ಲಿ ದೊರೆಯುವಂತಾಗಬೇಕೆಂಬುದು ಶ್ರೀ ಜತ್ತಿಯವರ ಮಹತ್ವಾಕಾಂಕ್ಷೆ. ಅವರನ್ನು ಕುರಿ

ತಾವ ನೂರಾರು ಲೇಖನಗಳೂ ಅಲ್ಲಲ್ಲಿ ಚದರಿ ಹೋಗಿವೆ. ಹೀಗೆ ಗ್ರಂಥ ಹಾಗೂ ಲೇಖನಗಳನ್ನು ಸಂಗ್ರಹಿಸಿ, ಅವಶ್ಯವಿದ್ದವುಗಳನ್ನು ಅಚ್ಚುಹಾಕಿಸಿ ಬಸವ ಅಧ್ಯಯನದ ಪುಸ್ತಕಭಂಡಾರಗಳನ್ನೇ ಪ್ರಾರಂಭಿಸಬೇಕೆಂದು ಶ್ರೀ ಜತ್ತಿ ಸೂಚಿಸುತ್ತಾರೆ. ಇದು ಅವರ ವಿರಾಮವರಿಯದ ಶ್ರದ್ಧೆಯ ಸೇವಾ ಪಥವನ್ನು ತೋರಿಸುತ್ತದೆ.

ಶ್ರೀ ಜತ್ತಿಯವರೊಬ್ಬರೇ ಈ ವ್ಯಾಪಕ ಕಾರ್ಯವನ್ನು ಮಾಡಿದ್ದಾರೆಂದು ಹೇಳುವುದು ನನ್ನ ಲೇಖನದ ಉದ್ದೇಶವಲ್ಲ; ಆದರೆ ಇಷ್ಟು ವ್ಯಾಪಕ ಕಾರ್ಯದ ಆಧಾರ ಸ್ತಂಭವಾಗಿ ನಿಂತುಕೊಂಡು, ಅದ್ಭುತ ಬಗೆಯ ಸಂಘಟನಾ ಚಾತುರ್ಯವನ್ನು ತೋರಿಸಿ, ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರಗಳ ನೆರವಿನೊಂದಿಗೆ ಈ ಮಹತ್ತರ ಕಾರ್ಯದಲ್ಲಿ ಗಣನೀಯ ಹಾಗೂ ಚಿರಸ್ಮರಣೀಯ ಸೇವೆ ಸಲ್ಲಿಸಿದ್ದಾರೆಂದು ಮಾತ್ರ ಸಂಕೋಚವಿಲ್ಲದೆ ಹೇಳಬೇಕು. ಶ್ರೀ ಜತ್ತಿಯವರು ಇಟ್ಟುಕೊಂಡಿರುವ ಶ್ರದ್ಧಾಸಕ್ತಿಗಳನ್ನು ನಮ್ಮ ನಾಡಿನ ಬೆರಳ ಮೇಲೆಣಿಸುವಷ್ಟು ವ್ಯಕ್ತಿಗಳು ತಳೆದರೂ ಸಾಕು; ಬಸವಣ್ಣ ಪ್ರಪಂಚದ ಹಲವಾರು ದೇಶಗಳಲ್ಲಾದರೂ ಸಂಚರಿಸಿ ಮಾನವತೆಯ ಮಹಾ ಬೆಳಕನ್ನು ಹರಡಿಯಾನು ! ವಿಶ್ವಬಂಧುವಾಗಿ ಪೂಜೆಗೊಂಡಾನು ! !



## ಕೆನೆಯಿಲ್ಲದ ಮೊಸರು

ತನು ತನ್ನ ಹೊರೆಯಲ್ಲಿದ್ದರೇನು ಎಷ್ಟು ದಿನ ?
ಮನ ತನ್ನ ಮನಬಂದತ್ತ ಹರಿದ ಬಳಿಕ !
ಕೆನೆ ಇಲ್ಲದ ಮೊಸರ ಕಡೆದರೆ ಅಲ್ಲಿ ಒಂದು,
ಹನಿ ತುಪ್ಪವಿಲ್ಲ ಕಾಣಾ ರಾಮನಾಥ.

.... ದೇವರದಾಸಿಮಯ್ಯನವರು.

# ನಮನ

೧

ಭಾರತದ ಭಾರವನು ಹೊತ್ತ ಮೂರಡಿ ದೇಹ
ತಣಿಸ ಹೊರಟಿದೆ ಜಗದ ಆಧ್ಯಾತ್ಮ ನವ ದಾಹ
ನೇಪವೇ ಸಾಕಾರವೆತ್ತ ಚೇತನ ಮೂರ್ತಿ
ಬಸವನಾ ಅವತಾರವೆತ್ತಿ ಬಂದಿಹ ಜತ್ತಿ

೨

ದೇಶದಾ ಸಮಸ್ಯೆಗಳ ಪರಿಹರಿವ ವಾಮನನೆ
ಒಂದು ಅಡಿಯಿಂ ತುಳಿದೆ ಕುಗ್ಗಿತು ಹಿಂಸೆಯು
ಎರಡನೆ ಅಡಿಗೆ ಅಶಾಂತಿ, ಮೂಡಿತು ಪ್ರಶಂಸೆಯು
ಮೂರನೆ ಅಡಿಗೆ ಇಲ್ಲವಾಯಿತು ಜಾತೀಯ ದ್ವೇಷವು

೩

ಮುಖ ತುಂಬಿ ತುಳುಕುತಿದೆ ಸಾತ್ವಿಕತೆ ತೇಜಸ್ಸು
ಸುಖದ ಸುಪ್ಪತ್ತಿಗೆ ಬೇಡೆಂಬ ವರ್ಚಸ್ಸು
" ಜನತೆಗಾಗಿಯೇ ನಾನು " ಎನುವ ತುಂಬು ಮನಸು
ನನಸಾಗಿದೆ ಇಂದು ತಾಯಿ ಭಾರತಿಯ ಕನಸು

೪

ನೋಡಿದರೆ ಗೌರವದಿ ತಗ್ಗುವವು ತಲೆಗಳು
ಮಾತಾಡೆ ಏಳುವವು ಸಂತಸದ ಅಲೆಗಳು
ಕರಗುವವು ನಿಮ್ಮ ಸ್ಪರ್ಶನದಿ ಶಿಲೆಗಳು
ಅನುಭಾವ ಗೋಷ್ಠಿಯೊಳು ಧನ್ಯತೆಯ ಸೆಲೆಗಳು

೫

ಹೆಸರು ಪಡೆದೆ ಮೊದಲು ಕರ್ನಾಟಕದ ಲಾಲಬಹದ್ದೂರ
ಈಗ ನೀನಾಗಿರುವೆ ಭಾರತದ ಬಹದ್ದೂರ
ವಿಶ್ವ ವ್ಯಕ್ತಿಯಾಗಲು ಉಳಿದಿಲ್ಲ ಬಹುದೂರ
ಇದನೋಡಿ ಉಕ್ಕಿ ಬಂದಿದೆ ಸಂತಸದ ಮಹಾಪೂರ

೬

ಭಾರತಾಂಬೆಯ ಸೇವೆಗೆ ನಿನಗಾಗಲಿ ಸಹಸ್ರ ಹಸ್ತ
ದೇವರು ಕರುಣಿಸಲಿ ನಿನಗೆ ನೂರಾರು ವರುಷ
ಭಾರತದ ಬಡಜನರ ಉದ್ಧಾರ ಪುರುಷ
ನಮನವು ನಿನಗೆ ಓ ದಿವ್ಯ ಪುರುಷ

● ಸೂಗಣ್ಣ ಹುಂಡೇಕಾರ

---

● ಶ್ರೀಮಾನ್ ಸೂಗಣ್ಣ ಹುಂಡೆಕಾರ ಯಾದಗಿರಿ ಅವರು ಅಧಿಕಾರಿ ಸಾಹಿತಿಗಳು. ಚಿಕ್ಕಂದಿನಲ್ಲಿಯೇ ಕಾದಂಬರಿಯೊಂದನ್ನು ಬರೆದು ಸಾಹಿತ್ಯ ಕ್ಷೇತ್ರದ ಪ್ರತಿನಿಧಿತ್ವ ಗಳಿಸಿರುವರಾದರೂ ಶಾಲಾ ಸಮೀಕ್ಷಣಾಧಿಕಾರದಂತಹ ಕಾರ್ಯಕ ಗೌರವಗಳು ಸಾಹಿತ್ಯ ಸೇವೆಗೆ ಬಾಧಕಗಳಾಗಿವೆ. ಆದರೆ ಕಾವ್ಯಾರಾಧನೆಯನ್ನು ಮಾತ್ರ ಯಾವ ನಿಬಿಡ ಕರ್ತವ್ಯದಲ್ಲಿಯೂ ಮರೆತವರಲ್ಲ. 'ನಮನ' ಶ್ರೀ ಜತ್ತಿಯವರಿಗೆ ಪ್ರಣಾಮಗೈದ ಹೃದ್ಯ ಕವನ — ಸಂ. ]

# ಶರಣ ಜೀವನದ ಸಾಕಾರ ಮೂರ್ತಿ

● ಈಶ್ವರಚಂದ್ರ ಚಿಂತಾಮಣಿ ಲಚ್ಯಾಣ

● [ ರಾಷ್ಟ್ರೀಯ ಶಿಕ್ಷಕ ಪ್ರಶಸ್ತಿ ವಿಜೇತ ಶ್ರೀ ಈಶ್ವರಚಂದ್ರ ಚಿಂತಾಮಣಿ ಅವರು ಮಕ್ಕಳಿಗೆ ಕಾಗೆ — ಗುಬ್ಬಿಗಳ ಕಥೆಗಳನ್ನು ಹೇಳಿ ನೀತಿ ಬೋಧೆಯನ್ನು ಮಾಡುತ್ತಲೇ ಜೀವನಾನುಭವ ಬೋಧೆಯನ್ನು ಗಳಿಸಿಕೊಂಡವರು. ಆಧ್ಯಾತ್ಮ ಚಿಂತನೆಗೆ ಹಿಮವತ್ಕೇದಾರವೇ ಬೇಕು; ಶಾಂತಿನಿಕೇತನವೇ ಬೇಕು ಎಂಬುದಿಲ್ಲ. ಸಣ್ಣ ಮಕ್ಕಳು ಹೋಗಲಿ ಶರಣ ತುರುಗಾಹಿ ರಾಮಣ್ಣನು ದನ ಕಾಯುತ್ತಲೇ ಜೀವನದ ಮರ್ಮವೆಲ್ಲವನ್ನೂ ಅರಿತುಕೊಂಡಿದ್ದನು. " ಅನುಭವ ಚಿಂತಾಮಣಿ " ಯ ಶ್ರೀ ಈಶ್ವರಚಂದ್ರ ಚಿಂತಾಮಣಿ ಅವರು ಈ ಲೇಖನದಲ್ಲಿ ಶ್ರೀ ಜತ್ತಿ ಅವರ ಆಧ್ಯಾತ್ಮ ಚಿಂತೆಯನ್ನು ತೋರಿಸಲೆತ್ನಿಸಿದ್ದಾರೆ. — ಸಂ. ]

೧೯೭೫ ಏಪ್ರೇಲ್ ೨೯ ರಂದು ಹೊಸದಿಲ್ಲಿಯಲ್ಲಿ ಭಾರತದ ಉಪರಾಷ್ಟ್ರಪತಿ, ಕನ್ನಡ ತಾಯಿಯ ಸುಪುತ್ರ ರತ್ನ ಶ್ರೀ ಬಿ. ಡಿ. ಜತ್ತಿಯವರನ್ನು ಸಂದರ್ಶಿಸಿ, ಚರ್ಚಿಸುವ ಸುಯೋಗ ನನಗೆ ಪ್ರಾಪ್ತವಾಯಿತು. ಮುನ್ನಾದಿನ ದಿನಾಂಕ ೨೮ ರಂದು ರಾಷ್ಟ್ರಪತಿಗಳ ಅಮೃತ ಹಸ್ತದಿಂದ " ಆದರ್ಶ ಶಿಕ್ಷಕ " ರಾಷ್ಟ್ರ ಪ್ರಶಸ್ತಿಯನ್ನು ಸ್ವೀಕರಿಸಿದ ಸವಿನೆನಹಿನೊಂದಿಗೆ, ಕರ್ನಾಟಕದ ಐವರು ಶಿಕ್ಷಕರು, ನಮ್ಮವರಾದ ಉಪರಾಷ್ಟ್ರಪತಿಗಳ ಸಂದರ್ಶನವನ್ನು ಅಪೇಕ್ಷಿಸಿದಾಗ ಅವರಿಂದ ನಮಗೆ ದೊರೆತ ಹಾರ್ದಿಕ ಸ್ವಾಗತ ಚಿರಸ್ಮರಣೀಯ.

ನಮ್ಮೆಲ್ಲರ ಹಿತಚಿಂತನೆ, ನಾವು ಮಾಡಿದ ಸೇವೆ — ಸಾಧನೆ ಕುರಿತು ಅವರು ಆತ್ಮೀಯತೆಯಿಂದ ಚರ್ಚಿಸಿದ ವಿಷಯಗಳೆಲ್ಲ ಅವರಿಗಿರುವ ಸಮಾಜ ಪ್ರೇಮ — ದೇಶಾಭಿಮಾನದ ಸಂಕೇತವಾಗಿದ್ದವು. ನಾನು ಇತ್ತೀಚೆಗೆ ಬರೆದ ಕೆಲವು ಆಧ್ಯಾತ್ಮ ಗ್ರಂಥಗಳನ್ನು ಅವರಿಗೆ ಅರ್ಪಿಸಿದಾಗ ತುಂಬ ತೃಪ್ತಿಯಿಂದ ವೀರಶೈವ ತತ್ವಜ್ಞಾನ ಕುರಿತು ಪ್ರಶ್ನೋತ್ತರಗಳು ನಡೆದವು. ಭಾರತೀಯ

ಸಂಸ್ಕೃತಿ, ಸತ್‌ಪರಂಪರೆ ಕುರಿತು ಮಾನ್ಯ ಶ್ರೀ ಜತ್ತಿಯವರಲ್ಲಿ ಅಪೂರ್ವವಾದ — ಅಗಾಧವಾದ ಜ್ಞಾನ ಭಾಂಡಾರ ತುಂಬಿಕೊಂಡಿದೆ. ಸರಳ ಜೀವನ, ಉಚ್ಚ ವಿಚಾರ ಸರಣಿಯ ಈ ಅಮೂಲ್ಯ ಜೀವದಿಂದ ಉಪರಾಷ್ಟ್ರಪತಿ ಸ್ಥಾನ ಕ್ಕೊಂದು ವಿಶೇಷ ಕಳೆ ಬಂದುದನ್ನು ನಾವು ಮನ ಗಂಡು ಅಭಿಮಾನ ಪಡು ವಂತಾಯಿತು. ಭಾರತ ರತ್ನ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಅವರ ನಂತರ ಈ ಉಚ್ಚಸ್ಥಾನವನ್ನು ಅಲಂಕರಿಸಿದ ಆಧ್ಯಾತ್ಮ ಪ್ರತಿನಿಧಿಎಂದರೆ ಮಾನ್ಯ ಶ್ರೀ ಬಿ. ಡಿ. ಜತ್ತಿಯವರು. ನಿರಾಡಂಬರದ ಅವರ ನಿವಾಸದಲ್ಲಿ ಪ್ರವೇಶಿಸು ವಾಗ ಎದುರಿಗೆ ಗೋಚರಿಸುವ — ಭಕ್ತಿ ಭಾಂಡಾರಿ ಬಸವಣ್ಣನವರ ಭಾವ ಚಿತ್ರದ ದರ್ಶನದಿಂದ "ಇದು ಮನೆಯಲ್ಲ, ದೇವಾಲಯ." ಎಂಬ ಭಾವ ಮೂಡದಿರದು.

ಬಡವ ಬಲ್ಲಿದರೆಲ್ಲರಿಗೂ ಉಪರಾಷ್ಟ್ರಪತಿಗಳ ನಿವಾಸದಲ್ಲಿ ಆತ್ಮೀಯ ಸ್ವಾಗತ. ನಿರ್ಬಂಧ — ಸಂಶಯಗಳಿಗೆ ಆಸ್ಪದಗಳಿಲ್ಲ.

ದೇವನೊಬ್ಬತಾ ನಾಮ ಹಲವು ಬಗೆ, ದಾರಿ ಬೇರೆ ಬೇರೆ,
ಅವನ ನಂಬಿ ಜನ ಬಾಳ ನೂಕಿದರೆ, ಬೇವು ಬೆಲ್ಲ ತಾನೆ !

ಎಂಬ ಕವಿ ವಾಣಿಯಂತೆ ಅವರನ್ನು ದೇಶಿಯರು — ವಿದೇಶಿಯರು, ಸಾಹಿತಿಗಳು — ರಾಜಕಾರಣಿಗಳು, ದೀನರು — ಧನಿಕರು ಬಗೆ ಬಗೆಯ ಜನಾಂಗ ದವರು ನಿತ್ಯಕಾಣುತ್ತಾರೆ. ಬಂದವರಿಗೆ ಶಾಂತಿ ಸಮಾಧಾನ — ಸಮಸ್ಯೆ ಗಳಿಗೆ ಸೂಕ್ತ ಪರಿಹಾರ ನೀಡುತ್ತಾರೆ — ಶ್ರೀ ಜತ್ತಿಯವರು.

**ಅಪೂರ್ವಯೋಗ**

ಬಸವ ಸಮಿತಿಯ ಅಧ್ಯಕ್ಷರಾಗಿ, ಅರವಿಂದಾಶ್ರಮದ ಸೂತ್ರಧಾರರಾಗಿ, ದೇಶದ ಶ್ರೇಷ್ಠ ಹಿರಿಯರಾಗಿ ಲೋಕಾನುಭವದೊಂದಿಗೆ ಅಲೌಕಿಕ ಅನಂದ ವನ್ನು ಉಂಡು, ಉಣಿಸಲೆಂದೇ ಬಾಳಿ ಬೆಳಗುತ್ತಿರುವ ಮಾನ್ಯ ಶ್ರೀ ಬಿ. ಡಿ. ಜತ್ತಿಯವರನ್ನು ತೀರ ಹತ್ತಿರದಿಂದ ಕಾಣುವ, ಕಂಡು ಮಾತನಾಡುವ ಸುಯೋಗ ಕಳೆದ ಎರಡೂವರೆ ದಶಕಗಳಿಂದಲೂ ನನಗೆ ಕೂಡಿಬಂದಿರುವುದು ಒಂದು ಅಪೂರ್ವ ಯೋಗವೇ ಸರಿ.

೧೯೫೩ರಲ್ಲಿ ನಾನು ಜಮುಖಂಡಿಯ ಸರಕಾರದ ಶಿಕ್ಷಕರ ತರಬೇತಿ ಕೇಂದ್ರದ ಶಿಕ್ಷಕ ವಿದ್ಯಾರ್ಥಿಯಾಗಿದ್ದಾಗಿನ ಸಂದರ್ಭವನ್ನಿಲ್ಲಿ ಸ್ಮರಿಸಬಹುದಾಗಿದೆ :

ಆಗ ಶ್ರೀ ಜತ್ತಿಯವರು ಮುಂಬಯಿ ರಾಜ್ಯದ ಆರೋಗ್ಯ ಇಲಾಖೆಯ ಉಪಸಚಿವರಾಗಿದ್ದರು. ನಮ್ಮ ಕಾಲೇಜ ಗಜಾನನ ಉತ್ಸವಕ್ಕೆ ಮುಖ್ಯ ಅತಿಥಿಗಳಾಗಿ ದಯ ಮಾಡಿಸಿದ್ದರು. ಜಮಖಂಡಿ ಅವರ ಜನ್ಮ ತಾಲೂಕು; ಅಭಿಮಾನದ ಕೇಂದ್ರ, ಜಮಖಂಡಿಯ ಸರ್ವಾಂಗೀಣ ಪ್ರಗತಿಯತ್ತ ಅವರ ಸತತ ಪ್ರಯತ್ನ. ಸಮಾರಂಭದ ನಂತರ ಶಿಕ್ಷಕ ವಿದ್ಯಾರ್ಥಿಗಳಿಗಿರುವ ಆಡಳಿತಾತ್ಮಕ ಹಣಕಾಸಿನ ತೊಂದರೆಯನ್ನು ಪ್ರತಿನಿಧಿಯಾದ ನಾನು ಅವರಲ್ಲಿ ನಿವೇದಿಸಿದೆ. ರಾಜ್ಯಮಟ್ಟದ ಸಮಸ್ಯೆಯನ್ನು ನಾವು ಅವರ ಮುಂದಿಟ್ಟೆವು. "ಈ ವಿಷಯ ನನಗೆ ಸಂಬಂಧಿಸಿದ್ದಲ್ಲ ಶಿಕ್ಷಣ ಮಂತ್ರಿಗಳಿಗೆ ಸಂಬಂಧಿಸಿದ ವಿಷಯ ..................." ವೆಂದು — ಶ್ರೀ ಜತ್ತಿಯವರು ನಮ್ಮನ್ನು ಸಮಾಧಾನ ಪಡಿಸಲು ಪ್ರಯತ್ನಿಸಬಹುದಾಗಿತ್ತು. ನಾವು ಮುನ್ನೂರು ಜನ ಶಿಕ್ಷಕ ವಿದ್ಯಾರ್ಥಿಗಳು "ಸತ್ಯಾಗ್ರಹದ" ದ ಸಿದ್ಧತೆಯಲ್ಲಿದ್ದೆವು. ಅವರನ್ನು ಬಿಡದೆ ಪರಿಹರಿಸಲು ಬಿನ್ನವಿಸಿದೆವು. ಅವರು ನಮ್ಮ ಬೇಡಿಕೆಗಳೆನ್ನೆಲ್ಲ ಸಹಾನುಭೂತಿಯಿಂದ ಆಲಿಸಿ ನೀವೇ ಉಪಾಯ ಸೂಚಿಸಿರಿ ಎಂದು ಅವರು ನಮ್ಮ ಸಲಹೆ ಕೇಳಿದರು.

## ಅಭಯ

"ನಾನು ಜಮಖಂಡಿಗೆ ಹೋದಾಗ ಅಲ್ಲಿಯ ಶಿಕ್ಷಕ ವಿದಾರ್ಥಿಗಳು ೨೫ ರೂ. ಶಿಷ್ಯವೇತನ ಸಾಲದೇ ತುಂಬ ಕಷ್ಟದಲ್ಲಿರುವುದನ್ನು ಕಂಡು ಬಂದೆ! ಪಾಪ ೫–೬ ವರ್ಷ ಸೇವೆಸಲ್ಲಿಸಿಯೂ ಪೂರ್ಣವೇತನವಿಲ್ಲದ ತರಬೇತಿ ಪಡೆಯಲು ಸಾಧ್ಯವೇ ? ಅವರನ್ನು ಅವಲಂಬಿಸಿದ ಕುಟುಂಬಗಳ ಪಾಡೇನು ? ನೆಮ್ಮದಿ ಇಲ್ಲದೆ ನೀಡುವ ತರಬೇತಿ ಫಲಕಾರಿಯಾಗದು...................! " ಹೀಗೆಲ್ಲ ತಾವು ಶಿಕ್ಷಣ ಮಂತ್ರಿಗಳಾದ ಶ್ರೀ ದಿನಕರ ದೇಸಾಯಿ. ಅವರಿಗೆ ಹೇಳಿ ನಮ್ಮನ್ನು ಕಾಪಾಡಬೇಕು ಎಂದು; ನಾವು ಹೇಳಿದಾಗ ಶ್ರೀ ಜತ್ತಿಯವರು ನಮ್ಮ ನೈಜಸ್ಥಿತಿ ಮನದಂದು ತುಂಬ ಮರುಗಿದರಲ್ಲದೆ "ಆಗಲಿ" ಎಂದು ಅಭಯವಿತ್ತರು. ಮುಂದೆ ಒಂದು ತಿಂಗಳ ನಂತರ ಮುಂಬಯಿ ರಾಜ್ಯದ ತರಬೇತಿಯಲ್ಲಿರುವ ಎಲ್ಲ ಶಿಕ್ಷಕರಿಗೆ ಪೂರ್ಣವೇತನ ಪೂರ್ವಾನ್ವಯವಾಗಿ ಜಾರಿಯಾಯಿತು. ಆಗ ಸಾವಿರಾರು ಜನ ಶಿಕ್ಷಕರು ಅವರನ್ನು ಅಭಿನಂದಿಸಿದ ಮಧುರ ಸ್ಮೃತಿ ಮನದಾಳದಲ್ಲಿ ಈಗಲೂ ರಸನಿಮಿಷವಾಗಿ ಸುಳಿದಾಡುತ್ತಿದೆ.

ಕರ್ನಾಟಕದ ಶರಣರು, ಮಠಾಧಿಪತಿಗಳು, ತಪಸ್ವಿಗಳು, ಸಾಧು–ಸಂತರು ಶ್ರೀ ಜತ್ತಿಯವರ ಜೀವನದೊಂದಿಗೆ ಹಾಸುಹೊಕ್ಕಾಗಿ ಬೆಳೆದುಬಂದರಾಗಿದ್ದಾರೆ.

ಅವರನ್ನರಿಯದೆ ಇವರಿಲ್ಲ. ಇವರ ಸಂಪರ್ಕವಿಲ್ಲದೆ ಅವರಿಲ್ಲ. ಮೇಲೆ ನೋಡಿ ರಾಜಕಾರಣಿ, ಅಂತರಾಳದಲ್ಲಿ ಸತ್ಯಶರಣ ಸ್ವಭಾವ. ಅದೇ ನಗೆ–ಅದೇ ಬಗೆ, ಅದೇ ಉಡಿಗೆ ತೊಡಿಗೆ ಅಂದು ಇಂದು ಒಳಹೊರಗು ಒಂದೇ ಒಂದು ಉಲ್ಲಾಸ ಸಲ್ಲಾಪ. ಪೆಟ್ಟಲು–ಮೆಟ್ಟಲು ಹತ್ತಿ, ಮೇಲು ಗಿರಿಯನ್ನೇರಲು ಹವಣಿಸಿದ ವ್ಯಕ್ತಿಯನ್ನು ದೈವೀಶಕ್ತಿ ಕೈಹಿಡಿದು ನಡೆಯಿಸಿದೆ.

" ರಾಜ್ಯಗಳಳಿಯಲಿ, ರಾಜ್ಯಗಳುರುಳಲಿ, ಹಾರಲಿ ಗದ್ದುಗೆ ಮುಕುಟಗಳು, ಮುತ್ತಿಗೆ ಹಾಕಲಿ ಸೈನಿಕರೆಲ್ಲ ಬಿತ್ತೂ ತುಳುವುದನವ ಬಿಡುವುದೆ, ಇಲ್ಲ...........' ಎಂದು ನೇಗಿಲಯೋಗಿಯನ್ನೇ ಕುರಿತು ಕವಿ ' ಕುವೆಂಪು ' ಅವರು ನುಡಿದ ನುಡಿ–ಹಾಡಿದ ಹಾಡನ್ನು ಶ್ರೀ ಜತ್ತಿಯವರ ಅಮೂಲ್ಯವಾದ ಜೀವನ ಮತ್ತು ಸಾಧನೆಗೆ ಹೋಲಿಸಿದರೆ ಅತಿಶಯೋಕ್ತಿಯಾಗಲಾರದೆಂಬೇ ನನ್ನ ಭಾವನೆ. ಸತ್ಯ ಶೀಲಗಳು ಕೇವಲ ಉಪದೇಶಾಮೃತವಾಗಿ ಅವರ ಮುಖದಿಂದ ಮೂಡಿಬರು ವುದಿಲ್ಲ, ಇವು ಅವರ ನುಡಿಗಿಂತ ನಡೆಯಲ್ಲಿ ಒಡಮೂಡಿ ಬಂದುದನ್ನು ನಾವು ಕಾಣುತ್ತ ಬಂದಿದ್ದೇವೆ.

ಧಾರವಾಡ ತಪೋವನದ ತಪಸ್ವಿ ಪೂಜ್ಯ ಕುಮಾರಸ್ವಾಮಿಗಳವರಲ್ಲಿ ಶ್ರೀ ಜತ್ತಿಯವರಿಗೆ ಅಪಾರ ನಿಷ್ಠೆ–ಭಕ್ತಿ. ಯೋಗಶಾಸ್ತ್ರ ಕುರಿತು ಅವರಕೂಡ ಇವರ ಚರ್ಚೆ, ಶಿವಯೋಗ–ಪೂರ್ಣಯೋಗ ಎಲ್ಲ ಯೋಗಗಳಲ್ಲೂ ನಮ್ಮ ಉಪರಾಷ್ಟ್ರಪತಿಗಳಿಗೆ ತುಂಬ ಅಭ್ಯಾಸ. ಸಾಧಕನ, ಜೀವನ ಅವರದು.

ನಾನು ರಚಿಸಿದ ' ಅನುಭಾವ ಚಿಂತಾಮಣಿ ' ಆಧ್ಯಾತ್ಮ ವಿಷಯಗಳ ಹಸ್ತ ಪ್ರತಿಯನ್ನು ಶ್ರೀ ಜತ್ತಿಯವರು ೧೯೬೭ ರಲ್ಲಿ ಸಹಜ ನೋಡಿದಾಗ: " ಮಾಸ್ತರೇ ಒಂದು ತಿಂಗಳು ನನಗೆ ಕೊಡ್ತೀರಾ ? ಓದಿ ಕೊಡುವೆ. ಬೆಂಗ ಳೂರಿಗೆ ಒಯ್ಯುತ್ತೇನೆ, " ಎಂದು ಹುಬ್ಬಳ್ಳಿಯಲ್ಲಿ ಸಂದರ್ಶಿಸಿದಾಗ ( ಆಗ ಅವರು ಆಹಾರ ಮಂತ್ರಿಗಳು ) ಕೇಳಿದರು. ಅದನ್ನು ಪೂರ್ಣ ಓದಿ ಪ್ರಕಟಿಸಲೇಬೇಕೆಂದು ಸಲಹೆ ನೀಡಿದರು. ಅವರ ಆತ್ಮೀಯ ಸಲಹೆಯಿಂದ ನಾನು ಮುನ್ನಡೆಯುವಂ ತಾಯಿತು.

ಶರಣಜೀವಿಯೊಬ್ಬರು ಭಾರತದ ಉಪರಾಷ್ಟ್ರಪತಿಗಳಾದುದು ಭಾರತ ಮಾತೆಯ ಭಾಗ್ಯವೇಸರಿ, ಹೆತ್ತವಳು ಕನ್ನಡತಾಯಿ, ಎತ್ತಿ ಮೆರೆಸುವವಳು ಭಾರತಮಾತೆ. ಈ ರತ್ನದ ಬೆಳಕು ಸುತ್ತಲೂ ಹರಡಿ–ನಾಡಿಗೂ, ರಾಷ್ಟ್ರಕ್ಕೂ ಹಾಗೂ ವಿಶ್ವಕ್ಕೂ ಮಾರ್ಗದರ್ಶನ ನೀಡಲೆಂದು ನಾವೆಲ್ಲರೂ ಹಾರೈಸೋಣ.



ಯಾದಗಿರಿಯಲ್ಲಿ ೧೯೭೧ ರಲ್ಲಿ ನಡೆದ ಶ್ರೀ ಬಸವೇಶ್ವರರ ಅಷ್ಟಶತಮಾನೋತ್ಸವದಲ್ಲಿ ಶ್ರೀ ಬಸವಣ್ಣನವರ ಬೃಹದ್ ಭಾವಚಿತ್ರದೊಡನೆ ಕೂಡಲ ಸಂಗಮ ಮಂಟಪದಂತೆ ರಚಿಸಲಾದ ವಾಹನದಲ್ಲಿ ಶ್ರೀ ಬಿ.ಡಿ. ಜತ್ತಿ ಅವರ ಮೆರವಣಿಗೆ ಬಹುಭವ್ಯವಾಗಿ ನಡೆಯಿತು.



ಜಾಂಬಿಯದ ಅಧ್ಯಕ್ಷರೊಂದಿಗೆ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರು

# ಶರಣರ ವಂಶವಲ್ಲರಿಯ ಶ್ರೀ ಬಿ. ಡಿ. ಜತ್ತಿ

● ಶಾಂತರಸ ರಾಯಚೂರು,
ಎಂ. ಎ.

● [ ಶ್ರೀ ಶಾಂತರಸರು ಪ್ರತಿಭಾವಂತ ಕವಿಗಳಾದ ಮಾತ್ರಕ್ಕೆ ಕನಸಿನ ಲೋಕದಲ್ಲಿ ವಿಹರಿಸುವವರಲ್ಲ. ಶಿವಶರಣರ ವಿಚಾರ ಧಾರೆಯನ್ನು ಮೈಗೂಡಿಸಿಕೊಂಡಿರುವ ಅವರು, ವಿದ್ವತ್ತಿನೊಡನೆ ವೀರವಂತಿಕೆಯನ್ನೂ ಸಂಪಾದಿಸಿಕೊಂಡಿದ್ದಾರೆ. ವೀರಶೈವ ಧರ್ಮಕ್ಕೆ ವಿರುದ್ಧವಾದ ಆಚರಣೆಯನ್ನು ಕಂಡರೆ ನಿಷ್ಠುರ ವಾಗಿ ಸಿಡಿದೇಳುತ್ತಾರೆ. ಶ್ರೀ ಜತ್ತಿ ಅವರಿಂದ ಅವರು ಕಟ್ಟಿದ ಬಸವ ಸಮಿತಿಯಿಂದ ಬಹಳಷ್ಟು ನಿರೀಕ್ಷಿಸಿ ಈ ಲೇಖನ ಬರೆದಿದ್ದಾರೆ. — ಸಂ. ]

ಸರ್ವ ಕಾಲಕ್ಕೂ ಸರ್ವರಿಗೂ ಬೇಕಾಗುವಂಥ ಹಲವು ಹೊಸ ಮೌಲ್ಯ ಗಳನ್ನು ಕಲ್ಯಾಣದ ಶರಣರು ಲೋಕಕ್ಕೆ ಕೊಟ್ಟರು. ಇಷ್ಟಲಿಂಗ, ಕಾಯಕ, ಭಕ್ತಿ, ದಾಸೋಹ ಮುಂತಾದವು ಆ ಮೌಲ್ಯಗಳಲ್ಲಿ ಮುಖ್ಯವಾದವು. ಇವು ಗಳನ್ನು ಸಾರ್ವತ್ರಿಕವಾಗಿ ಜನಜೀವನದಲ್ಲಿ ಅನುಷ್ಠಾನಕ್ಕೆ ತರುವಕಾರ್ಯ ನಡೆ ದಾಗ ರಾಜಕೀಯ ವಿಪ್ಲವವುಂಟಾಯಿತು. ಇದರಿಂದ ಶರಣರು ಚದುರಿಹೋ ದರು. ಬಹುಕಾಲದವರೆಗೆ ಒಂದೆಡೆಗೆನಿಂತು ಸುಸಂಘಟಿತವಾಗಿ ಕಾರ್ಯವೆಸಗಲು ಅವರಿಗೆ ಸಾಧ್ಯವಾಗಲಿಲ್ಲ. ಆದರೂ ಅವರು ಸುಮ್ಮನೆ ಕುಳಿತು ಕೊಂಡಿರಲಿಲ್ಲ. ಉಳಿವಿ ಮುಹಮುನೆಯಂಥ ಬೇರೆ ಬೇರೆ ಸ್ಥಲಗಳಲ್ಲಿ ನೆಲೆನಿಂತು ವಚನ ಗ್ರಂಥ ಗಳ ಅನೇಕ ಪ್ರತಿಗಳನ್ನು ಮಾಡಿ ನಾಡಿನ ತುಂಬ ಹರಡಿದರು. ಏನಿದ್ದರೂ ಶರಣರು ಒಂದೆರಡು ಶತಮಾನಗಳವರೆಗೆ ಪ್ರಚ್ಛನ್ನರಾಗಿಯೇ ಕೆಲಸಮಾಡಬೇ ಕಾಯಿತು; ಹೊರಗೆ ನಿಂತು ಸರ್ವರೊಡನೆ ಬೆರೆತು ಕೆಲಸಮಾಡಲು ಸಾಧ್ಯವಾ ಗಲಿಲ್ಲ. ಇದಕ್ಕೆ ರಾಜಕೀಯ ಅಸ್ವಾಸ್ಥ್ಯ, ಮತದ್ವೇಷ, ಜಾತೀಯತೆ, ಹೊಸ ಜೀವನಕ್ಕೆ ಹೊಂದಿಕೊಳ್ಳಲು ಒಲ್ಲದ ಜನರ ಅಜ್ಞಾನ, ಸಂಪ್ರದಾಯಶೀಲತೆ— ಹೀಗೆ ಹಲವಾರು ಕಾರಣಗಳಿವೆ.

ಒಂದು ಮಾತನ್ನು ಮೇಲೆ ಹೇಳಿದ ಕಾರಣಗಳ ಬೆಳಕಿನಲ್ಲಿ ಒಪ್ಪಲೇ ಬೇಕಾಗುತ್ತದೆ. ಶರಣರಕ್ರಾಂತಿ, ಆ ಕ್ರಾಂತಿಯಿಂದ ಉದ್ಭವಿಸಿದ ಮೌಲ್ಯಗಳು ನಿರಂತರವಾಗಿ ಜನ ಜೀವನದಲ್ಲಿ ಬೆರೆತು ಬೆಳೆಯಲಿಲ್ಲ; ಹಾಗೆ ಆಗಿದ್ದರೆ ಭಾರತೀಯ ಜನ ಜೀವನದ ಇತಿಹಾಸವೇ ಬೇರೆರೂಪ ತಾಳಬಹುದಿತ್ತು. ಜಾತೀಯತೆ ಬಹುಮಟ್ಟಿಗೆ ದೂರಾಗಿ, ಸತ್ಯಶುದ್ಧ ದುಡಿಮೆಯಿಂದ ಸಂಪತ್ತು ಹೆಚ್ಚಾಗಿ, ಕೆಚ್ಚುಕಲಿತನ ಬೆಳೆದು ರಾಷ್ಟ್ರ ಬಹು ಹಿಂದಿನಿಂದಲೇ ಸ್ವಾತಂತ್ರ್ಯದ ಉಸಿರಾಡಿಸಬಹುದಿತ್ತು. ಯಾವ ಯಾವ ಕಾಲಕ್ಕೆ ಈ ಮೌಲ್ಯಗಳು ಜನ ಜೀವನಕ್ಕೆ ಇಳಿದವೋ ಆಕಾಲದ ಸ್ಥಿತಿಯೇ ಬೇರಾಗಿದೆ. ಸರ್ವ ಸಮಾನತೆ, ಸತ್ಯಶುದ್ಧ ಕಾಯಕ, ಸಂಪತ್ತಿನ ಸಮಾನ ವಿತರಣೆ, ದೇಶಪ್ರೇಮ, ಛಲ ಕಲಿತನ, ಮಾನವೀಯ ಅನುಕಂಪ ಮುಂತಾದವು ಆಯಾ ಕಾಲದಲ್ಲಿ ಎದ್ದುಕಾಣುತ್ತಿವೆ.

ವಿಜಯನಗರ ಕಾಲಕ್ಕೆ ಮತ್ತೊಮ್ಮೆ ಈ ತತ್ವಗಳು ಜನ ಜೀವನಕ್ಕೆ ಅವತಾರಗೊಂಡುವು. ಸಾರ್ವತ್ರಿಕವಾಗಿ ನಾಡಿನಲ್ಲಿ ಒಂದು ಹೊಸ ಉಕ್ಕು ಬಂದಿತು. ಸಮಾಜ ನವಚೇತನವನ್ನು ಉಸಿರಾಡಿಸಿತು. ಎರಡನೆಯ ಪ್ರೌಢದೇವರಾಯ, ನೂರೊಂದು ವಿರಕ್ತರು, ಲಕ್ಕಣ್ಣ, ಜಕ್ಕಣ್ಣ, ಚಾಮರಸ, ಕಲ್ಲುಮಠದ ಪ್ರಭುದೇವ, ಮೊಗ್ಗೆಯ ಮಾಯಿದೇವ ಮುಂತಾದ ಮಹಾಪುರುಷರು ಶರಣರ ಮೌಲ್ಯಗಳನ್ನು ಆಚರಿಸಿ ಜನ ಜೀವನದಲ್ಲಿ ಸಾರ್ವತ್ರಿಕವಾಗಿ ಆಚರಣೆಗೆ ತಂದರು; ಅಲ್ಲದೆ ವಚನ ಗ್ರಂಥಗಳ ಸಂಪಾದನೆ, ಸಂಕಲನ, ವ್ಯಾಖ್ಯಾನ ಮುಂತಾದ ಮಹತ್ತರ ಕೆಲಸಗಳನ್ನೂ ಅವರು ಮಾಡಿದರು.

### ಶರಣತನ

ಮುಂದೆ ಬಂದ ತೋಂಟದ ಸಿದ್ಧಲಿಂಗೇಶ್ವರ ಮತ್ತು ಅವನ ಶಿಷ್ಯರಾದ ಏಳು ನೂರು ವಿರತರು ನಾಡಿನ ಉದ್ದಗಲಕ್ಕೂ ಸಂಚರಿಸಿ ಶರಣತನವನ್ನು ಎಂದರೆ ದುಡಿಮೆ, ನಿಷ್ಠೆ, ದಾಸೋಹ, ಸಮಾನತೆಗಳನ್ನು ಜನ ಜೀವನದಲ್ಲಿ ನೆಯ್ದರು. ಸಾಮಾಜಿಕ ಸ್ವಾಸ್ಥ್ಯ ಕಾಪಾಡಿದರು.

ತೋಂಟದ ಸಿದ್ಧಲಿಂಗೇಶ್ವರನ ತರುವಾಯ ಮತ್ತೆ ಕೆಲಕಾಲ ಕತ್ತಲೆ ಮುತ್ತಿತು. ಮುಂದೆ ಬಂದ ಸರ್ವಜ್ಞ ಕರದಿ ಕಪ್ಪರವಿಡಿದು, ತುಂಡು ಗಂಬಳಿ ಹೊದೆದು, ಕಂಡದ್ದನ್ನು ಕಂಡಂತೆ ಆಡಿ, ನಾಡಿನತುಂಬ ಮಿಂಚಿನಂತೆ ಸಂಚರಿಸಿ, ಜನರ ಜಡತೆಯನ್ನು ಕಳೆದು ಹೊಸ ಜೀವತಂದ ಆ ಮಹಾತ್ಮಾ, ವಚನಕಾರರ ಸರ್ವಸತ್ವಗಳ ತತ್ವಗಳ ಸಾಕಾರಮೂರ್ತಿ ಆತ. ಏಕಾಂಗ ವೀರನಾಗಿ ನಾಡನ್ನು

ಪ್ರಸಿದ್ಧಿಗೈದ ಆತನಂಥ ವ್ಯಕ್ತಿಗಳು ಲೋಕದ ಇತಿಹಾಸದಲ್ಲಿ ವಿರಳ. ಜೇವರಗಿಯ ಷಣ್ಮುಖಸ್ವಾಮಿ, ಎಳಂದೂರ ಮಹಾಕವಿ ಷಡಕ್ಷರದೇವ ಇವರೂ ಶರಣ ಜ್ಯೋತಿಯನ್ನು ಉರಿಯಲು ನೆತ್ತರು ಎರೆದರು.

ಇಪ್ಪತ್ತನೆಯ ಶತಮಾನದ ಪ್ರಾರಂಭದಿಂದ ಉಂಟಾದ ನವೋದಯ ಜಾಗೃತಿಯಲ್ಲಿ ಹರ್ಡೇಕರ ಮಂಜಪ್ಪಣ್ಣ ಡಾ॥ ಹಳಕಟ್ಟಿ, ಉತ್ತಂಗಿ ಚೆನ್ನಪ್ಪ, ಧಾರವಾಡದ ಮೃತ್ಯುಂಜಯಪ್ಪಗಳು ಮುಂತಾದವರು ಪುನಃ ಶರಣರ ಮೌಲ್ಯ ಗಳನ್ನು ಪ್ರಚಾರದಲ್ಲಿ ತರಲೆತ್ನಿಸಿದರು ಆದರೆ ಈ ಎಲ್ಲ ಪ್ರಯತ್ನಗಳು ವೈಯ ಕ್ತಿಕ ವಲಯದಲ್ಲಿಯೇ ಉಳಿದವು. ಆದರೂ ಅವರಿಂದ ಸುತ್ತು ಮುತ್ತಿನ ಪರಿಸರ, ಪ್ರದೇಶ ಎಚ್ಚತ್ತವು. ರಾಷ್ಟ್ರವ್ಯಾಪಿಯಾದ ಜಾಗರಕ್ಕೆ ಇವರು ಮುಂಬೆ ಳಗಾದರು. ಈ ರಾಷ್ಟ್ರವ್ಯಾಪಿ ಜಾಗರಕ್ಕೆ ನಿಜವಾಗಿಯೂ ಕಾರಣ ಕರ್ತರಾದ ವರು ಈಗಿನ ಉರಾಪಷ್ಟ್ರಪತಿಗಳಾದ ಮಾನ್ಯ ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರು.

* * * * *

ಶ್ರೀ ಜತ್ತಿಯವರನ್ನು ಕಂಡಾಗ, ನೆನೆದಾಗ ನನ್ನಲ್ಲಿ ಕೆಲವು ವಿಶಿಷ್ಟ ಭಾವ ನೆಗಳುಂಟಾಗುತ್ತವೆ. ಪಾರಮಾರ್ಥ ಮತ್ತು ಲೌಕಿಕ ಎರಡನ್ನೂ ಬಿಡದೆ ಸಮರ್ಥ ವಾಗಿ ನಡೆಸುವ ಜಾಣ, ಮಹಾಸಂಘಟಕ. ಒಂದು ಸಮಾಜದಲ್ಲಿ ಎಲ್ಲ ಬಗೆಯ ಶಕ್ತಿ ಸಾಮರ್ಥ್ಯಗಳಿರುತ್ತವೆ, ಮೇಧಾವಿಗಳಿರುತ್ತಾರೆ. ಆದರೆ ಸಂಘಟನೆ ಇಲ್ಲದಿದ್ದರೆ ಆವೆಲ್ಲ ಶಕ್ತಿಸಾಮರ್ಥ್ಯಗಳು ಒಟ್ಟುಗೂಡದೆ ಚೆದುರಿಹೋಗಿ, ತೀರ ವೈಯಕ್ತಿಕತೆ ಬೆಳೆದು, ಅದರಿಂದ ದ್ವೇಷಾಸೂಯೆಗಳುಂಟಾಗಿ ಸಮಾಜ ದುರ್ಬಲವಾಗುತ್ತದೆ. ಮೇಧಾವಿತನ, ಶಕ್ತಿಸಾಮರ್ಥ್ಯ, ಜಾಣತನ ಇವು ಇದ್ದವರಿಗೆಲ್ಲ ಸಂಘಟನಾ ಶಕ್ತಿಯಿರುವುದು ಅಪರೂಪ. ಆ ವಿಶಿಷ್ಟವಾದ ಶಕ್ತಿ ಕೆಲವರಲ್ಲಿ ಮಾತ್ರ ಕಂಡು ಬರುತ್ತದೆ. ಎಲ್ಲಶಕ್ತಿ ಸಾಮರ್ಥ್ಯಗಳಿದ್ದು ಆವರಲ್ಲಿ ಈ ಒಂದು ಸಂಘಟನೆಯ ವಿಶಿಷ್ಟವಾದ ವಿಚಕ್ಷಣವಾದ ಹೆಚ್ಚಿನ ಶಕ್ತಿಯಿರುತ್ತದೆ. ಇಂಥ ಶಕ್ತಿಯಿಂದಲೇ ಬಸವಣ್ಣ ಎಲ್ಲ ಶರಣರನ್ನು ಕೂಡಿಕೊಂಡು ಮಹಾಕ್ರಾಂತಿಯನ್ನು ಮಾಡಿದ. ಬಸವಣ್ಣ ಇರದೇ ಹೋಗಿದ್ದರೆ ಬಹುಶಃ ಎಲ್ಲ ಶರಣರು ವೈಯಕ್ತಿಕವಾಗಿ ಬಾಳಿ ಸಾರ್ವತ್ರಿಕ ಬದುಕಿಗೆ ಯಾವ ಮೌಲ್ಯವನ್ನೂ ಅರ್ಪಿಸಲಾರದ ಸ್ಥಿತಿ ಬರುತ್ತಿತ್ತು. ಶ್ರೀ ಜತ್ತಿಯವರು ಬಸವ ಸಮಿತಿಯಯನ್ನು ಕಟ್ಟಿ, ಸಂಘಟನೆ ಮಾಡಿ, ಒಂದು ಸಾರ್ವತ್ರಿಕ ಜಾಗೃತಿಗೆ ಕಾರಣರಾದರೆಂದು ನಿಸ್ಸಂದೇಹವಾಗಿ

ಹೇಳಬಹುದು. ಹಾಗೆ ನೋಡಿದರೆ ಬಸವಣ್ಣನವರಿಗೂ ಶ್ರೀ ಜತ್ತಿಯವರಿಗೂ ಅನೇಕ ಸಾಮ್ಯಗಳಿವೆ. ಅವರ ಕ್ರಾಂತಿಯನ್ನು ಇವರು ಇಂದು ಮುಂದುವರಿಸಲು ಹೋರಾಟ ನಡೆಸಿದ್ದಾರೆ. ಬಸವಣ್ಣನವರಿಗಿಂತಲೂ ಜತ್ತಿಯವರಿಗೆ ಅನುಕೂಲಗಳು ಸೌಕರ್ಯಗಳು ಹೆಚ್ಚಿಗಿವೆ.

**ಬಸವ ಸಮಿತಿ**

ಜತ್ತಿಯವರು ಬಸವಸಮಿತಿ ಕಟ್ಟಿದ್ದು ಒಂದು ಧರ್ಮದ ಪ್ರಚಾರಕ್ಕಾಗಿ ಅಲ್ಲ; ರಾಷ್ಟ್ರಧರ್ಮವನ್ನು ಹರಡುವುದಕ್ಕಾಗಿ. ಬಸವಣ್ಣನವರ ತತ್ವಗಳಿಗೆ, ಶರ ಣರ ತತ್ವಗಳಿಗೆ ಯಾವ ಮತದ, ಯಾವ ಧರ್ಮದ ಚೌಕಟ್ಟು ಹಾಕಲು ಸಾಧ್ಯವಿಲ್ಲ. ಇದನ್ನು ಹಾಕಿಯೇ ನಮ್ಮ ಮತಮಾನ್ಯಗಳು ದೇಶಕ್ಕೆ ದ್ರೋಹ ಗೈದುವು. ಸರ್ವರ ಲೇಸಿಗೆ ಕಾರಣವಾದ ಆ ತತ್ವಗಳ ಪ್ರಸಾರ, ಅನುಷ್ಠಾನ ಕಾರ್ಯ, ರಾಷ್ಟ್ರದ ಉತ್ಥಾನಕ್ಕೆ ಪೂರಕವಾಗುತ್ತದೆ. ಇದನ್ನು ಮನದಂದೇ ಜತ್ತಿ ಯವರು ಬಸವಸಮಿತಿ ನಿರ್ಮಿಸಿದ್ದು. ಬಸವಸಮಿತಿಯ ಅಧ್ಯಕ್ಷರಾಗಿ ಅವರು ಮಾಡುವ ಕಾರ್ಯ ಮತ್ತು ಭಾರತದ ಉಪರಾಷ್ಟ್ರಪತಿಗಳಾಗಿ ಅವರು ಮಾಡುವ ಕಾರ್ಯ ಇವೆರಡರಲ್ಲಿ ಅವರಿಗೆ ವ್ಯತ್ಯಾಸವೇ ಇಲ್ಲ; ಯಾಕೆಂದರೆ ರಾಷ್ಟ್ರ ಹಿತವೇ; ರಾಷ್ಟ್ರೋತ್ಕರ್ಷವೇ ಅವರ ನೆತ್ತರಿನ ಮಜ್ಜೆಮಾಂಸದ ಹೃದಯದ ಆತ್ಮದ ಗುಣವಾಗಿದೆ. ಅರಾಷ್ಟ್ರಕವಾದುದನ್ನು ಅವರು ನೆನೆಯರು.

ಅವರ ವ್ಯಕ್ತಿತ್ವ ನೆನೆದಾಗ ಕೆಲವು ವಚಗಳು ನೆನಪಾಗುತ್ತವೆ.

"ಕೊಡೆವಿಡಿಯೆ ಕುದುರೆಯ ಧೃಢವುಳ್ಳ ರಾವುತನೇರೆ
ಕೊಡೆಕೋಟಿ ! ಶೂರರು ಹನ್ನಿಬ್ಬರಯ್ಯಾ ! "

ಬಸವಣ್ಣನವರ ವಚನವಿದು. ಒಳ್ಳೆಯ ಕುದುರೆ, ಮೇಲೆ ಕೊಡೆ ಹಿಡಿವ ಸೇವಕ; ಅಧಿಕಾರವೂ ಉಂಟು. ಹೀಗಿದ್ದರೆ ನಾಮುಂದೆ ನೀಮುಂದೆ ಎಂದು ಜನ ಲೆಕ್ಕವಿಲ್ಲದಷ್ಟು ಬರುತ್ತಾರೆ. ಕುದುರೆಯ ಮೇಲೆ ಕುಳಿತು ಕೊಡೆ ಹಿಡಿಸಿ ಕೊಂಡು ಮೋಜಾದ ಅಧಿಕಾರ ಮಾಡುವವರು ಕೋಟಿ ಜನ; ಆದರೆ ನಿಜ ವಾಗಿ ಶೂರರು, ಅಧಿಕಾರ ತಿಳಿದು ಸಮರ್ಥವಾಗಿ ಮಾಡುವವರು ಕೇವಲ ಹನ್ನೆರಡು ಜನವಂತೆ. ರಾತ್ರಿಯೂ ಕೊಡೆ ಹಿಡಿಸಿಕೊಂಬ ಜನಗಳಿಗೂ ಕೊರ ತೆಯಿಲ್ಲ. ಇಂಥ ಜನಗಳ ಮಧ್ಯೆ ಶೂರರಾಗಿ ಜೀವಿಸಿ ಅಂತಃಕರಣದಿಂದ ಜನ ಹಿತಕ್ಕೆ ಶ್ರಮಿಸುವವರು ಶ್ರೀ ಜತ್ತಿಯವರು. ಇಂಥವರು ರಾಷ್ಟ್ರದಲ್ಲಿ ಹನ್ನಿಬ್ಬರೇ ಇದ್ದಾರು.

" ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವವರು
ವೀರರೂ ಅಲ್ಲ! ಧೀರರೂ ಅಲ್ಲ!
ಅದು ಕಾರಣ ನೆರೆಮೂರು ಲೋಕವೆಲ್ಲವೂ
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ.
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ! "

ಅಲ್ಲಮಪ್ರಭುದೇವರ ವಚನವಿದು. ಜೀವನ ಹೇಗೆ ಬರುತ್ತದೆ ಹಾಗೆ ಸ್ವೀಕರಿಸಬೇಕು; ಅದನ್ನು ಸಮರ್ಥವಾಗಿ ಬದುಕಬೇಕು; ಆತ ವೀರ. ಬಂದುದನ್ನು ಅರಿಯಲಾರದೆ, ಬೇರೊಂದನ್ನು ಬಯಸಿ ಗೋಣಗುವ, ಮನಸ್ಸು ಕಹಿಮಾಡಿಕೊಳ್ಳುವವ ವೀರನಲ್ಲ; ಅವನ ಸ್ಥಿತಿ ಹಲ್ಲಣ ಹೊತ್ತುಕೊಂಡು ಹೋಗುವವರ ಸ್ಥಿತಿ. ಅಂಥವರಿಗೆ ಪಾಲಿಗೆ ಬಂದುದು ದಕ್ಕುವುದಿಲ್ಲ, ಬಯಸಿದ್ದು ಸಿಕ್ಕುವುದಿಲ್ಲ; ಸ್ವಂತಕ್ಕೂ ಹಾನಿ, ರಾಷ್ಟ್ರಕ್ಕೂ ಹಾನಿ. ಅವನ ಕಹಿಮನಸ್ಸಿನಿಂದ ಸಮಾಜದಲ್ಲಿ ಅನೇಕ ದುಷ್ಟ ಪ್ರವೃತ್ತಿಗಳು ಬೆಳೆಯುತ್ತವೆ.

## ಸರ್ವಭೂಷಣಪ್ರಾಯರು

ಜತ್ತಿಯವರು ಜೀವನ ಹೇಗೆ ಬಂತೋ ಹಾಗೇ ಸ್ವೀಕರಿಸಿ ಅದನ್ನು ತಮ್ಮ ಅರಿವು ಆಚಾರದಿಂದ ಸಿಂಗರಿಸಿದರು; ಮಹಾ ಜೀವನ ಮಾಡಿಕೊಂಡರು. ಮುಖ್ಯಮಂತ್ರಿತನ, ಆಹಾರಮಂತ್ರಿತನ, ಆರ್ಥಿಕಮಂತ್ರಿತನ, ಲೆಫ್ಟನೆಂಟ್ ಗವರ್ನರ್ ಹುದ್ದೆ, ರಾಜಪಾಲ ಹುದ್ದೆ, ಉಪರಾಷ್ಟ್ರಪತಿ ಪದವಿ — ಯಾವುದು ಬಂದರೂ ಅವರು ಅದನ್ನು ಶಿವ ಪ್ರಸಾದವೆಂದು ಸ್ವೀಕರಿಸಿ ಅದಕ್ಕೆ ಘನತೆಯೊದಗಿಸಿದರು. ಇದು ಸಣ್ಣದು, ಅದು ದೊಡ್ಡದು ಎಂದು ಕಾರ್ಯದ ಬಗೆಗೆ ಅವರೆಂದೂ ಗೋಣಗಿದವರಲ್ಲ. ಸರ್ವಕಾರ್ಯಗಳು ಸತ್ಯಶುದ್ಧವಾದುವು, ಸರ್ವವೂ ರಾಷ್ಟ್ರಹಿತಕ್ಕೆ ಪೂರಕ ಎಂಬ ಶ್ರದ್ಧೆ, ಸದ್ಭಾವನೆ, ಬಲವಾದ ನಂಬುಗೆ ಅವರದು.

ಇನ್ನೊಂದು ವಿಶಿಷ್ಟ ಗುಣ ಅವರ ಕಾರ್ಯದಲ್ಲಿ ಕಂಡು ಬರುತ್ತದೆ. ಯಾವ ಕೆಲಸವನ್ನು ಮಾಡಿದರೂ ಮನಮುಟ್ಟಿ ತನುಮುಟ್ಟಿ ಮಾಡುವರು. ಅಂತೆಯೇ ಅವರ ಎಲ್ಲ ಕಾರ್ಯಗಳು ಗೆಲುವನ್ನು ಸೆರೆಹಿಡಿಯುತ್ತವೆ.

ಭಕ್ತಿ ಎಂದರೆ ಬಾಹ್ಯಾಡಂಬರವೆಂದು ತಿಳಿಯುವ, " ಒಲೆಯ ಮುಂದಿದ್ದು ಮಾಡದ ಕನಸ ಕಾಣುವ ". ಜನಗಳ ಮಧ್ಯದಲ್ಲಿ ಶುದ್ಧ

ವಾಗಿ ಮೂರು ಬೆರಳು ವಿಭೂತಿ ಹಚ್ಚಿ, "ಮಾತಿನ ಮಾತಿನಲ್ಲಿಪ್ಪುವುದೇ ಭಕ್ತಿ ಮಾಡಿ ತನು ಸವೆಯದನ್ನಕ್ಕ ಮನ ಸವೆಯದನ್ನಕ್ಕ ಧನ ಸವೆಯದನ್ನಕ್ಕ" ಎಂಬ ವಚನವನ್ನು ಬದುಕುತ್ತಿರುವ ಜತ್ತಿಯವರು ನಿಜವಾದ ಭಕ್ತರು.

"ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ" ಎಂಬ ಮಾತು ಅಳ ವಟ್ಟವನೇ ರಾಷ್ಟ್ರವೀರ. ಸೇವಾದೀಕ್ಷೆ ಕೈಗೊಂಡಾಗ ಹೇಡಿತನ, ಯಾಚಕತನ ಸಲ್ಲದು. ಜತ್ತಿಯವರು ಓಡಿದವರೂ ಅಲ್ಲ, ಬೇಡಿದವರೂ ಅಲ್ಲ. ಓಡುವ, ಬೇಡುವ ಜನರನ್ನು ಕಂಡರೆ ಅವರು ಸೈರಿಸರು. ದುಡಿದು ತಿಂದು, ಹಿಡಿದ ಕೆಲಸವನ್ನು ಧೃಢತೆಯಿಂದ ಮಾಡುವ ವೀರ ವೃತ್ತಿಯನ್ನು ನಾಡಿನುದ್ದಗಲಕ್ಕೆ ಕಲಿಸಲೆಂದೇ ಅವರು ಬಸವಸಮಿತಿ ಕಟ್ಟಿದ್ದು.

ತಮ್ಮ ಅಧಿಕಾರದಲ್ಲಿ ನ್ಯಾಯನಿಷ್ಠುರಿಗಳಾಗಿ, ಸತ್ಯಪಕ್ಷಪಾತಿಗಳಾಗಿ ಜತ್ತಿಯವರು ನಡೆದುದು ಸರ್ವಶ್ರುತವಿದೆ.

* * * * *

ಶ್ರೀ ಜತ್ತಿಯವರು ಸಂಘಟಿಸಿ ರಾಷ್ಟ್ರದ ತುಂಬ ಆಚರಿಸಿದ ಬಸವಣ್ಣನವರ ಎಂಟನೆಯ ಶತಮಾನೋತ್ಸವ ಸಾಂಸ್ಕೃತಿಕ ಪುನರುಜ್ಜೀವನಕ್ಕೆ, ಧರ್ಮ-ಧರ್ಮಗಳ ಸೌಹಾರ್ಧತೆಗೆ ನಾಂದಿ ಹಾಡಿದಲ್ಲದೆ ಶರಣರ ತತ್ವಗಳು ನಾಡಿನಾದ್ಯಂತ ಪ್ರಸಾರ, ಪ್ರಛಾರವಾಗಲು ಸಾಧನವಾಯಿತು. ಈ ಉತ್ಸವಗಳಲ್ಲಿ ಬೌದ್ಧ, ವೈದಿಕ, ಮುಹಮ್ಮದೀಯ, ಜೈನ, ಕ್ರೈಸ್ತ ಧರ್ಮ ಗುರುಗಳು, ಜಿಜ್ಞಾಸುಗಳು, ಪಂಡಿತರು ಭಾಗಿಯಾದುದು ಒಂದು ವಿಶೇಷ. ಸರ್ವರನ್ನೂ ಸೌಹಾರ್ದದಿಂದ ಒತ್ತಟ್ಟಿಗೆ ಕೂಡಿಸುವ ಒಂದು ವೇದಿಕೆಯನ್ನು ರಾಷ್ಟ್ರಮಟ್ಟದಲ್ಲಿ ಅಷ್ಟಶತಮಾನೋತ್ಸವ ಕಲ್ಪಿಸಿಕೊಟ್ಟಿತು; ಸರ್ವ ಸಾಮಾನ್ಯ ಜನರಲ್ಲಿ ಈ ಉತ್ಸವ ಶರಣರ ತತ್ವಗಳನ್ನು ತಿಳಿದುಕೊಳ್ಳುವ ಮನೋಭಾವವನ್ನುಂಟು ಮಾಡಿತು. ರಾಷ್ಟ್ರದ ಚಿಂತನ ಶೀಲರು, ಸಾಹಿತಿಗಳು, ಸಂಗೀತಜ್ಞರು, ಕಲಾವಿದರು, ದಾರ್ಶನಿಕರು ಹೊಸ ನಿಟ್ಟಿನಿಂದ ಶರಣರ ತತ್ವಗಳನ್ನು ಮನನ ಮಾಡಲು, ಹಾಡಲು ಚಿತ್ರಿಸಲು ಅಷ್ಟಶತಮಾನೋತ್ಸವ ಪ್ರೇರೇಪಿಸಿತು. ನಾಡಿನ ಪತ್ರಿಕೆಗಳು, ಆಕಾಶವಾಣಿಗಳು ಶರಣರ ತತ್ವಗಳನ್ನು ಬಹು ಅಚ್ಚುಕಟ್ಟಾಗಿ, ರಂಜನೀಯವಾಗಿ, ನೀತಿಬೋಧಕವಾಗಿ ಪ್ರಸಾರಗೊಳಿಸಿದುವು — ಈ ಅವಧಿಯಲ್ಲಿ.

ಜನರ ಮನಸ್ಸು, ಬುದ್ಧಿ, ಹೃದಯಗಳುಶುದ್ಧವಾಗಿ ಬೆಳೆಯಬೇಕು; ಜನರು ಶ್ರಮಜೀವಿಗಳಾಗಬೇಕು; ಸರ್ವ ಸಮಾನತೆ ಮೈಗೂಡಿ ಬರಬೇಕು; ಲೆಂಕರಾಗಿ,

ವೀರರಾಗಿ ಜನ ರಾಷ್ಟ್ರರಕ್ಷಣೆಗೆ ದೀಕ್ಷೆ ಕೈಗೊಳ್ಳಬೇಕು – ಇಂಥ ಮಹಾಕಾರ್ಯಗಳಿಗೆ ರಾಜಕೀಯ ಸಂಸ್ಥೆಗಳಿಗಿಂತ ಸಾಂಸ್ಕೃತಿಕ ಸಂಸ್ಥೆಗಳೇ ಯೋಗ್ಯ. ಇಂಥ ಒಂದು ಸಂಸ್ಥೆಯನ್ನು ಕಟ್ಟಿ ಶ್ರೀ ಜತ್ತಿಯವರು ಕಾರ್ಯೋನ್ಮುಖರಾಗಿದ್ದಾರೆ. ಅವರಿಗೆ ಸರಿದೊರೆಯಾಗಿ, ಅವರ ಯೋಜನೆಗಳಿಗೆ ಚೈತನ್ಯಸ್ವರೂಪರಾಗಿರುವ ಕ್ರಿಯಾಶೀಲ ಶ್ರೀ ಮುದ್ನಾಳ ವಿಶ್ವನಾಥರಡ್ಡಿಯವರಂಥವರು ಮುಂದೆ ಬಂದು ಈ ಕಾರ್ಯಕ್ಕೆ ಅಂತಃಕರಣದಿಂದ ನೆರವು ನೀಡಬೇಕು. ನಾಡಿನ ಸಾಹಿತಿಗಳು, ಸಂಶೋಧಕರು, ಸಂಗೀತಜ್ಞರು, ಕಲಾವಿದರು, ಮೇಧಾವಿಗಳು, ರಾಜಕಾರಣಿಗಳು, ವ್ಯಾಪಾರಿಗಳು, ಒಕ್ಕಲಿಗರು, ಸಕಲ ಉದ್ಯೋಗದವರು ಈ ಮಹಾಕಾರ್ಯದಲ್ಲಿ ಭಾಗಿಯಾಗುವಂತೆ ಆಗಬೇಕು; ಆ ಕಾಲ ಸನ್ನಿಹಿತವಾಗುತ್ತಿದೆಯೆಂದು ಅನಿಸುತ್ತಿದೆ.



# ಸಾವಳಿಗೆ ಸತ್ಕಿರಣ

೧

ಸಾವಳಿಗೆ ಸತ್ಕಿರಣ
ಭಾರತದ ಶಿವಶರಣ
ನಿನ್ನ ನಡೆ — ನುಡಿ ಗಡಣ
ನಮಗೆಲ್ಲ ಅನುಕರಣ

೨

ನಾಡ ಋಣ, ರಾಷ್ಟ್ರ ಋಣ —
ನೈಮಿತ್ಯಕವತರಣ
ಮುತ್ಸದ್ದಿ ಮಂತಣ
ಮಾನ್ಯವಾಯಿತು ಪಣ

೩

ರಾಜಕೀಯ ಅಂಗಣ
ಇನಿತಿಲ್ಲ ಗೊಂದಣ
ಸೇವಾ ಧುರಂಧರಣ
ಆಧ್ಯಾತ್ಮ ಸಂಕಿರಣ

೪

ಕರ್ನಾಟ, ಒಡಿಸ್ಸಾ, ದೆಹಲಿ ಪಯಣ
ತ್ರಿವಿಕ್ರಮ ಪದಾರ್ಪಣ
ಇಹದಲ್ಲಿ ಬಲು ಜಾಣ
ಸೋಲು — ಗೆಲುವಿನಲಿ ಒಂದೇ ಪ್ರಮಾಣ

೫

ತ್ಯಾಗ, ಪ್ರಾಮಾಣಿಕತೆ, ಕಾಯಕ ತ್ರಿಗುಣ
ನೊಸಲ ಮೇಗಣ ಮೂರು ರೇಖಾವರಣ
" ವಿಭೂತಿ " ಹೆಸರು ಮಂತ್ರಸ್ಮರಣ
ಸಾರ್ಥಕತೆಯನಾವರಣ

೬

ಅಂದಿಗಿಂದಿಗು ಒಂದೆ ಅಂತಃಕರಣ
ಸತ್ಯ- ಸದ್ಭಕ್ತಿಯಂತಃಸ್ಫುರಣ
ಹಮ್ಮು ಬಿಮ್ಮುಗಳಿಲ್ಲದಾಚರಣ
ಮಾನವತೆಗಾದರ್ಶ ಪೂರ್ಣ

೭

ಬಸವೇಶ ಭಕ್ತಿ ಗುಣ
ಅರವಿಂದ ಯೋಗಕಣ
ಒಳ — ಹೊರಗೆ ಕೂಡಿ ಚಣ
ಆದೆ ನವಯುಗ ಶರಣ

● ಡಾ. ವಿ. ಶಿವಾನಂದ
ಎಂ. ಎ. ಪಿ. ಹೆಚ್ ಡಿ.

---

● [ ಡಾ. ವಿ. ಶಿವಾನಂದ ಅವರು ಹೈದರಾಬಾದ ಕರ್ನಾಟಕದ ಶ್ರೇಷ್ಠ ಸಂಶೋಧಕ –– ಸಾಹಿತಿಗಳು. ಹಲವಾರು ಸಂಶೋಧನ — ಸಂಪಾದನಾ ಗ್ರಂಥಗಳನ್ನು ತಾರುಣ್ಯ ಭರದಲ್ಲಿಯೇ ಹೊರತಂದು ಭವಿಷ್ಯದ ಬಗ್ಗೆ ಆಶೆ ಮೂಡಿಸಿದ್ದಾರೆ. ಇತ್ತೀಚಿನವರೆಗೆ ಗದಗ ಜೆ. ಟಿ. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು " ವನದ ಕೋಗಿಲೆ ವನಕೆ ಮರಳಿತೆಂ " ಬಂತೆ ಈಗ ಕಲಬುರ್ಗಿ ಸ್ನಾತಕೋತ್ತರ ಕೇಂದ್ರಕ್ಕೆ ಆಗಮಿಸಿದ್ದಾರೆ. ಈ ಭಾಗದ ಸಾಹಿತ್ಯಿಕ — ಸಾಂಸ್ಕೃತಿಕ ಚಟುವಟಿಕೆಗಳ ತಂಬೆಲರಾಗಬೇಕೆಂಬ ತುಂಬು ಹಂಬಲ ಅವರದು. — ಸಂ. ]

# ಬಚ್ಚ ಬರಿಯ ಬಸಪ್ಪ ದಾ. ಜತ್ತಿ

● ದೇವೇಂದ್ರಕುಮಾರ ಹಕಾರಿ,
ಎಂ. ಎ.

● ಶ್ರೀ ದೇವೇಂದ್ರಕುಮಾರ ಹಕಾರಿಯವರು ಹೈದರಾಬಾದ ಕರ್ನಾಟಕದ ಮತ್ತೋರ್ವ ಉದ್ಧಾಮ ಕವಿಗಳು. ಅವರಿಂದ ಸುಂದರವಾದ ಕವನವನ್ನು ನಿರೀಕ್ಷಿಸಿದ ನಮಗೆ ಅದೇನು ಕಾರಣದಿಂದಲೋ ಲೇಖನವೇ ಲಭಿಸಿದೆ. ಬಹುಶಃ ಇತ್ತೀಚಿನ ಸಾಮಾಜಿಕ ವಿದ್ಯಮಾನಗಳು ಶ್ರೀ ಹಕಾರಿಯವರ ವಿಚಾರಗಳನ್ನು ಕಲಕಿರಬೇಕು ಅಥವಾ ಕೆಣಕಿರಬೇಕು. ಶ್ರೀ ಜತ್ತಿ ಅವರ ಬಸವ ಸಮಿತಿಯ ಅಧ್ಯಕ್ಷತೆ, ಈ ಶತಮಾನದ ದೈವಕೃಪೆಯೆಂದು ಭಾವಿಸಿದ ಅವರು ತಮ್ಮ ತಾಕಲಾಟದ ವಿಚಾರಗಳ ಪ್ರಕಟಣೆಗೆ ಲೇಖನವೇ ಸೂಕ್ತ ಮಾರ್ಗವೆಂದು ನಿರ್ಧರಿಸಿರಬೇಕು. — ಸಂ. ]

ಇವನಾರವ ಇವನಾರವ ಇವನಾರವನೆಂದೆನ್ನಿಸದಿರಯ್ಯ
ಇವ ನಮ್ಮವ, ಇವ ನಮ್ಮವ ಇವ ನಮ್ಮವನೆಂದೆನ್ನಿಸಯ್ಯ

ಎನ್ನುವ ಬಸವಣ್ಣನವರ ವಚನ ಬಸವನ ಅನುಯಾಯಿಗಳಿಗೇ ಮರೆತು ಎಲ್ಲ ಜಡ ಗಟ್ಟಿದ ಕಾಲ. ಇನ್ನು ಕೆಲವು ಕಾಲ ಹೀಗೆಯೇ ಹೋಗಿದ್ದರೆ ಬಹುಶಃ ನಾವು ಬಸವಣ್ಣನವರನ್ನು ಮರೆತು ಬಿಡುತ್ತಿದ್ದೆವು; ಕೇವಲ ಲೌಕಿಕ ಮಟ್ಟದಲ್ಲಿ ಮಾತ್ರ — ಅದೂ ರಾಜಕೀಯ ಉದ್ದೇಶಕ್ಕಾಗಿ ಆತನ ಚಿಹ್ನೆ ಉಳಿದದ್ದು — ಅದೂ ಕಾಲಾನುಕ್ರಮದಲ್ಲಿ ಮಸಕಾಗಿ ಹೋಗಬಹುದಿತ್ತು. ಗೋಡೆಗಳನ್ನು ಕಟ್ಟಿ, ಕೋಟೆಗಳನ್ನು ನಿರ್ಮಿಸಿ ಅತ್ಯಂತ ಸಂಕುಚಿತ ವಲಯದಲ್ಲಿ ಹೊಕ್ಕು. ಹಿಂದೊಮ್ಮೆ ನಡೆದ ಅದ್ಭುತ ಸಾಮಾಜಿಕ, ಧಾರ್ಮಿಕ ಕ್ರಾಂತಿಯನ್ನೇ ಬದಿಗೆ ಸರಿಸಿ ಹಮ್ಮಿನ – ಅಜ್ಞಾನದ ಗಾಢ ಕತ್ತಲಲ್ಲಿ ಸಿಲುಕಿದ ಈ ಸಮಾಜ ಛಿದ್ರ ಛಿದ್ರವಾಗಿ ಹೋಗಲಿದ್ದ ಈ ಸಮಾಜ ತನ್ನನ್ನು ಸಮಗ್ರವಾಗಿ ರೂಪಿಸುವ ಅಖಂಡ ಪ್ರಜ್ಞೆಯ ಎಚ್ಚರಿಕೆಯನ್ನು ಕೊಡುವ, ಎಲ್ಲ ವಿವಿಧ

ಶಕ್ತಿ — ವರ್ಗಗಳನ್ನು ಸೂತ್ರೀಕರಿಸಿ ಸಂಯೋಜನೆಗೊಳಿಸುವ ಸಾಮರ್ಥ್ಯ ಪಡೆದ ವ್ಯಕ್ತಿಯೊಬ್ಬನ ಬರವಿಗಾಗಿ ನರಳುತ್ತಿತ್ತು ಎಂದು ತೋರುತ್ತದೆ. ಇಂಥ ಕಾಲದಲ್ಲಿ ಈ ಸಮಾಜದ ಒಡಲಿಂದಲೇ ಹುಟ್ಟಿದವರು ಶ್ರೀ ಬಿ. ಡಿ. ಜತ್ತಿ.

ರಾಜಕೀಯ ಜೀವನದ ಅನೇಕ ವಿಧದ ಏರಿಳಿತಗಳನ್ನು ಅನುಭವಿಸಿದ ಶ್ರೀ ಜತ್ತಿ ಅವರು ಇಳಿತ ಬಂದಾಗ ಕುಗ್ಗಲಿಲ್ಲ; ಏರಿಕೆ ಇದ್ದಾಗ ಹಿಗ್ಗಲಿಲ್ಲ. ತಾವು ಅಲಂಕರಿಸಿದ ಕುರ್ಚಿಯನ್ನು ಎಂದೂ ತಲೆ ಮೇಲೆ ಹೊತ್ತು ತಿರುಗಲಿಲ್ಲ; ಅಧಿಕಾರದ ಸೋಂಕು ಇರುವ ಸ್ಥಾನದ ಸಂಕೇತವಾದ ಕುರ್ಚಿಯನ್ನು ಕುಳಿತಲ್ಲೇ ಮರೆತು ಅದನ್ನು ಅದರ ಮಟ್ಟಕ್ಕಿಟ್ಟು ಸ್ವಚ್ಛವಾದ ಹೃದಯವಂತಿಕೆಯನ್ನು ಬೆಳೆಸಿಕೊಂಡು ಬಂದವರು. ಅಧಿಕಾರದ ಕುರ್ಚಿ ರಾಜಕೀಯ ಅಸ್ತವ್ಯಸ್ತತೆಗೆ ಸಿಕ್ಕು ಅಲುಗಿದಾಗ ಅದಕ್ಕೆ ಅಂಟಿದ ಆಡಂಬರ, ಪ್ರತಿಷ್ಠೆಗಳನ್ನು ಅದಕ್ಕೆ ನೇತುಹಾಕಿ " ಬಚ್ಚ ಬರಿಯ " ಬಸಪ್ಪ ದಾನಪ್ಪ ಜತ್ತಿ ಆಗಿ ಸರಳವಾದ ಕುಲುಕುಲನಗೆ ಅರಳಿಸುತ್ತ ಹೊರ ಬಂದವರು. ಇಂಥ ಕೆಲವು ಅಸ್ತವ್ಯಸ್ತ ಕ್ಷಣಗಳಲ್ಲಿಯೇ ಶ್ರೀ ಜತ್ತಿಯವರಿಗೆ ನಮ್ಮ ಸಮಾಜ ಪುರುಷನ ಗೋಳು, ಯಾತನೆ, ನರಳುವಿಕೆ ಕೇಳಿದ್ದು. ಅದರ ಹಿಂದೆಯೇ ಈ ಸಮಾಜಕ್ಕಾಗಿ ಅಖಂಡ ಮಾನವ ಕಲ್ಯಾಣದ ಸಿದ್ಧಿಗಾಗಿ ಪರಿತಪಿಸಿದ ಶ್ರೀಗಂಧದಂತೆ ಸವೆದ, ತನ್ನನ್ನು ತಾನು ಬಲಿಕೊಟ್ಟ ಅಣ್ಣ ಬಸವಣ್ಣನವರ ಅದ್ಭುತ ವ್ಯಕ್ತಿತ್ವ ದರ್ಶನವೂ ಆದದ್ದು. ಎಷ್ಟೋ ವರ್ಷಗಳ ಹಿಂದೆಯೇ ಅಣ್ಣ ಬಸವಣ್ಣನವರ ವಚನ ಸಾಹಿತ್ಯದ ವಿಶಾಲ ವ್ಯಕ್ತಿತ್ವ ವಿಶಿಷ್ಟ ಧಾರ್ಮಿಕ ಸ್ವರೂಪಗಳ ದರ್ಶನ ಮಾಡಲು ಹೆಣಗಾಡಿದ ವ್ಯಕ್ತಿಗಳನೇಕರ ಪ್ರಯತ್ನಗಳೂ ಮುರಿಗಟ್ಟಿ ನಿಂತುವು.

## ಬಸವಣ್ಣನವರ ಕನಸು

ರಾಜಕೀಯದ ಚದುರಂಗದಾಟ ನಡೆದೇ ಇರುತ್ತದೆ. ಇದಕ್ಕೆ ಸಿಕ್ಕು ಸಮಾಜ ಶಕ್ತಿ ನಾಶವಾದರೆ ನಾಳಿನ ಜನಾಂಗ ಭದ್ರವಾಗುವುದು ಹೇಗೆ ? ಅಖಂಡ ಮಾನವ ಕಲ್ಯಾಣದ ಕನಸು ಹೊತ್ತ ಅಣ್ಣ ಬಸವಣ್ಣನ ಪುಣ್ಯ ಕ್ರಾಂತಿ ನನಸಾಗುವುದು ಹೇಗೆ ? ನಿಜ. ಇದೆಲ್ಲ ಒಬ್ಬರ ಜೀವಿತದಲ್ಲಿ ಒಂದು ಜೀವಮಾನದಲ್ಲಿ ಆಗುವ ಕಾರ್ಯವಲ್ಲ. ಆದರೆ ಅದಕ್ಕೊಂದು ಹೆದ್ದಾರಿಯಾದರೂ ರಚನೆಗೊಳ್ಳಬೇಕು. ವೀರಶೈವ ಧರ್ಮದ ಇತರ ಧಾರ್ಮಿಕ ವ್ಯಕ್ತಿಗಳು ಒಂದೆಡೆ ಸೇರಿ ಬೌದ್ಧಿಕ ಮಟ್ಟದ ಚರ್ಚೆ ನಡೆಯಿಸಿ

ಆತ್ಮ ಪ್ರಜ್ಞೆಯನ್ನು ಉಂಟು ಮಾಡಿಕೊಳ್ಳಬೇಕಾದ ಅಗತ್ಯ ಎಂದಿಗಿಂತ್ಲ ಇಂದು ಅಧಿಕ. ದಿನದಿನಕ್ಕೂ ವೈಜ್ಞಾನಿಕ, ಔದ್ಯಮಿಕ ಅನ್ವೇಷಣೆಗಳು — ಆಕರ್ಷಣೆಗಳು ಸಮಾಜದ ಮೇಲೆ ದಾಳಿಯಿಡುತ್ತಿರುವಾಗ ನಮ್ಮ ಸಮಾಜದ — ನಮ್ಮ ರಾಷ್ಟ್ರದ ಮಹಾವಿಭೂತಿ ಪುರುಷರು ಕಟ್ಟಿದ ಆಚಾರ ವಿಚಾರಗಳು ಸಾಹಿತ್ಯ ಸಂಪತ್ತು ಭಕ್ತಿಯ ಭಂಡಾರ ಅನುಭಾವದ ಅಪರಿಮಿತ ರಾಸಿ. ಇದರ ಎಚ್ಚರ, ಅರಿವು ನಮ್ಮ ರಾಷ್ಟ್ರಕ್ಕೆ ಆಗದೆ ಹೋದರೆ! ಅದಕ್ಕಾಗಿಯೇ ಅಲ್ಲವೇ ಬಸವಣ್ಣ ವಿಶ್ವದಲ್ಲಿಯೇ ಅತ್ಯಂತ ವಿರಳವಾದ "ಅನುಭವ ಮಂಟಪ" ಕಟ್ಟಿದ್ದು ? ಧಾರ್ಮಿಕ ಆಧ್ಯಾತ್ಮಿಕ ವಿಷಯಗಳನ್ನು ಸಮಾಜಕ್ಕೆ ಅನ್ವಯಿಸಿ ಹೊಸ ಮಾನವ ಸಮಾಜ ನಿರ್ಮಾಣದ ಗುರಿಯನ್ನು ಅಂದು ಅನುಭವ ಮಂಟಪ ಇಟ್ಟುಕೊಂಡಿತ್ತು. ಇಂದು ಮತ್ತೆ ಅಂಥ ಒಂದು ವೇದಿಕೆ ಬೇಡವೇ ? ಇಂಥ ಕೆಲವು ಅಮೂರ್ತ ಚಿತ್ರಗಳ ಸಂಘರ್ಷವನ್ನು ಹೃದಯದಲ್ಲಿ ಮೂಡಿಸಿಕೊಂಡ ಶ್ರೀ ಜತ್ತಿಯವರಿಗೆ ಬಸವ ತತ್ವ, ಬಸವನ ಅನುಭಾವ — ಬಸವ ದರ್ಶನವನ್ನು ಮಾಡಿಸಿಕೊಡುವ ಅದ್ಭುತ ವೇದಿಕೆಯಾಗಿ ಹೊಳೆದದ್ದು "ಬಸವ ಸಮಿತಿ" ಯ ನಿರ್ಮಾಣ.

## ಕನಸು ನನಸಾಯಿತು

ತಮ್ಮ ಅಧಿಕಾರ ಸೋಂಕನ್ನು ಕಳೆದು, ಜ್ಞಾನ ಪಿಪಾಸೆ–ಅನುಭಾವದ ಹಂಬಲು–ಧರ್ಮ ಜಿಜ್ಞಾಸೆಗಳನ್ನು ತಮ್ಮ ಜೀವನದ ಉಸಿರು–ಗುರಿ ಎಂದು ಭಾವಿಸಿದ ಜತ್ತಿಯವರಿಗೆ ಬಸವತತ್ವ ಎಂದರೆ ಅವರ ಹೃದಯದ ಪರಿಮಳವಾಯಿತು. ಕೇವಲ ನಿರಹಂಕಾರದಿಂದ ಸಮಾಜದ ಕಡೆ ಬೆರಳುಮಾಡಿದರು. ಕಾಲ್ನಡಿಗೆಯೆಂದರೆ ಅದಕ್ಕೂ ಸೈ. ಕಾರಿದ್ದರೆ, ಅದೂ ಸರಿ. ಅಖಂಡ ಕರ್ನಾಟಕವನ್ನು ಅಲೆದು ಸುತ್ತಿ ಸಾಮಾಜಿಕರಿಗೆ ಆತ್ಮ ಪ್ರಜ್ಞೆಮೂಡಿಸಿ ಉಳ್ಳವರಲ್ಲಿ, ದಾನಿಗಳಲ್ಲಿ ಸ್ಫೂರ್ತಿಯನ್ನು ಹೊಮ್ಮಿಸಿ ಬಸವ ಸಮಿತಿಯ ಕನಸನ್ನು ನನಸಾಗಿಸಿದರು. ಭಾರತದ ಎಲ್ಲ ಭಾಷೆಗಳಲ್ಲೂ ಬಸವ ವಚನಗಳ ಪ್ರಕಟಣೆ ಆಯಿತು; ಆಗುತ್ತಲಿದೆ. ಇಂಗ್ಲೀಷ ಭಾಷೆಗೆ ಆ ವಚನಗಳ ಅನುವಾದ — ಪ್ರಕಟಣೆ ಅದೂ ಆಯಿತು. ಹಳ್ಳಿಯಿಂದ ಹುಟ್ಟಿದ "ಬಸವ ದೀಪ" ದಿಲ್ಲಿಯಲ್ಲೂ ಬೆಳಗಿತು. ಭಾರತದ ರಾಜಧಾನಿಯಲ್ಲೂ ಈ ಬಸವ ವಚನಗಳ ಚರ್ಚೆ. ಈಗ ಲಂಡನ್ನಿನ ಬಿ. ಬಿ. ಸಿಯವರಿಗೂ ಬಸವ ವಿಚಾರ ದೀಪ್ತಿಯ ಬಿತ್ತರಣೆಯ ಅಗತ್ಯತೆ.

ಕರ್ನಾಟಕದ ರಾಜಧಾನಿಯಲ್ಲಿ ಭವ್ಯವಾದ ಕಟ್ಟಡ–ಅಚ್ಚುಕಟ್ಟಾದ ವಾಚನಾಲಯ. ಬಸವಸಮಿತಿ ಹಮ್ಮಿಕೊಂಡಿರುವ ಯೋಜನೆಗಳು ಅನೇಕ. ದಿನದಿಂದ

ದಿನಕ್ಕೆ ಬಸವ ಸಮಿತಿಯ ಕಾರ್ಯ ವಿಧಾನದ ಆಯಾಮಗಳು ವಿಸ್ತರಿಸುತ್ತಲೇ ಹೋಗುತ್ತಿವೆ. ಬಹುಶಃ ಇಷ್ಟರಲ್ಲಿ ಜತ್ತಿಯವರಿಗೆ "ಬಸವ ವಿಶ್ವಕೋಶ" ಮತ್ತು "ಬಸವ ವಸ್ತುಸಂಗ್ರಹಾಲಯ"ಗಳ ವಿಚಾರವೂ ಹೊಳೆದು ಅದರತ್ತ "ಬಸವ ಸಮಿತಿ" ಕಾರ್ಯೋನ್ಮುಖವಾಗಿರಲೂ ಸಾಕು. ಸಮಾಜ ಜಾಗೃತವಾದಷ್ಟು ಸಮಿತಿಯ ಕಾರ್ಯ ಇನ್ನೂ ಮಹತ್ತಾಗಿ ಮತ್ತು ಬೃಹತ್ತಾಗಿ ಬೆಳೆಯುತ್ತದೆ. ಸಮಾಜದ ಯುವಜನಾಂಗ ಅಲೆಮಾರಿಗಳಾಗಿ ನಿಟ್ಟುಸಿರು ಹಾಕುವ ಕಾಲ ಬಂದಾಗ, ಸೋತು ನಿರ್ವೀರ್ಯರಾಗಿ ಕುಳಿತಾಗ ಎಲ್ಲರ ದೃಷ್ಟಿಯೂ ಶ್ರೀ ಜತ್ತಿಯವರು ಬಸವ ಸಮಿತಿಯ ಮುಖಾಂತರ ಹಮ್ಮಿಕೊಂಡ ವಿವಿಧ ಕಾರ್ಯ ವಿಧಾನಗಳ ಕಡೆಗೆ ಹೊರಳಿದಾಗ ಅಂದು ಅಖಂಡ ಜನಾಂಗ ತನ್ನ ಉದ್ಧಾರಕ್ಕೆ ನವ ನಿರ್ಮಾಣಕ್ಕೆ ಸಿದ್ಧವಾಗುತ್ತದೆ. ಒಂದು ವೇಳೆ ಬಸವ ಸಮಿತಿಯ ಕಾರ್ಯ ವ್ಯಾಪ್ತಿ ಕುಂಠಿತವಾದರೆ ಅದು ಸಮಾಜದ ಸಾಮರ್ಥ್ಯವನ್ನೇ ಕೆಣಕುವ ಸವಾಲಾದೀತು—ಈ ಎಚ್ಚರಿಕೆ ಬಹುಶಃ ಸದಾ ನಮ್ಮ ಕಣ್ಣೆದುರು ಇರಬೇಕಾದೀತು.

ಇಂದು ರಾಷ್ಟ್ರದ ಅತ್ಯುನ್ನತ ಸ್ಥಾನವನ್ನು ಅಲಂಕರಿಸಿದ ಶ್ರೀ ಜತ್ತಿ ಅವರ ಋಣ, ಕೇವಲ ಈ ಕೆಲವು ಮಾತುಗಳಲ್ಲಿ "ಅವರು ನಮ್ಮ ಸಮಾಜಕ್ಕೆ ರಾಷ್ಟ್ರಕ್ಕೆ ಬಹುದೊಡ್ಡ ಉಪಕಾರ ಮಾಡಿದ್ದಾರೆ" ಎಂದರೆ ತೀರೀತೇ? ಯಾಕೆಂದರೆ ಅವರು 'ಇವ ನಮ್ಮವ ಇವ ನಮ್ಮವ ಇವ ನಮ್ಮವ" ನೆನ್ನುವ ಚೇತನಾತ್ಮಕ ಪ್ರಜ್ಞೆಯನ್ನು ಮೂಡಿಸಿದವರು.



# ಬಿ. ಡಿ. ಜತ್ತಿ: ಬೀಳುನವರೇ ಅಲ್ಲ

● ಪಾಟೀಲ ಪುಟ್ಟಪ್ಪ

● [ "ಪ್ರಪಂಚ" ದ ಶ್ರೀ ಪಾಟೀಲ ಪುಟ್ಟಪ್ಪನವರು ಶ್ರೀ ಬಿ. ಡಿ. ಜತ್ತಿ ಅವರ ಬಗ್ಗೆ ಒಂದೆರಡು ಪ್ರಶಂಸೆಯ ಮಾತುಗಳನ್ನಾಡಿದರೆ ಅವು ಬಹು ಭಾರವಾದವುಗಳೆಂದೇ ಭಾವಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಮತ್ತಿತರರರು ಸ್ವಲ್ಪ ಭಾವನಾತ್ಮಕವಾಗಿ ಶ್ರೀ ಜತ್ತಿ ಅವರನ್ನು ಹೊಗಳಬಹುದು. ಆದರೆ ಶ್ರೀ ಪುಟ್ಟಪ್ಪನವರು ಮಾತ್ರ ಮೊದಲಿನಿಂದಲೂ ಶ್ರೀ ಜತ್ತಿ ಅವರ ಬಗ್ಗೆ ಭಾವನಾತ್ಮಕ ಹಾಗೂ ಸಹಾನುಭೂತಿಪರ ಅಳತೆಗೋಲನ್ನು ಬದಿಗಿರಿಸಿ ವಸ್ತು ನಿಷ್ಠವಾಗಿಯೇ ಅಳತೆ ಮಾಡಿದವರು. ಯಾವ ಅಳತೆಗೋಲಿಟ್ಟುಕೊಂಡರೂ ಶ್ರೀ ಜತ್ತಿ ಅವರು ಎತ್ತರದ ಫಲಿತಾಂಶವನ್ನೇ ನೀಡಿಯಾರು ಎಂಬುದು ಶ್ರೀ ಪಾ. ಪು. ಅವರ ಲೇಖನದಿಂದ ಸ್ಪಷ್ಟವಾಗುತ್ತದೆ. — ಸಂ. ]

ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿಯವರು ಯಾವ ಶರ್ಯತ್ತೇ ಇದ್ದರೂ, ಅದರಲ್ಲಿ ಗೆಲ್ಲುವ ಕುದುರೆ ಇದ್ದಂತೆ. ಅವರ ಸುಳಿವು ಎಲ್ಲಿಯೂ ಇಲ್ಲವೆಂದಾಗ ಅವರು ಮುಂಚೂಣಿಯಲ್ಲಿ ಬಂದು ನಿಂತಿರುತ್ತಾರೆ. ಅವರಿಗೆ ನಂಬರ್ ಹತ್ತಲೇ ಇಲ್ಲ ಎಂದು ಕೊಂಡವರಲ್ಲಿ, ಅವರಿಗೆ ಸ್ನೇಹಿತರಾದವರೂ ಇದ್ದಾರೆ; ಸ್ನೇಹಿತರಲ್ಲದವರೂ ಇದ್ದಾರೆ. ಸ್ನೇಹಿತರಿಗೆ ವ್ಯಸನ, ಸ್ನೇಹಿತರಲ್ಲದವರಿಗೆ ಸಂತೋಷ. ಆದರೆ ಕೊನೆಗೆ ಅವರಿಗೇ ನಂಬರ್ ಹತ್ತಿರುವುದನ್ನು ಕಂಡು ಇಬ್ಬರೂ ನಿಬ್ಬೆರಗಾಗಿರುತ್ತಾರೆ. ಇದು ಅವರ ಜೀವನದ ಉದ್ದಕ್ಕೂ ನಡೆದುಕೊಂಡು ಬಂದಿರುವ ಅನುಭವ ಜನ್ಯ ಸತ್ಯ ಸಂಗತಿ. ಸುದೈವವು ಅವರ ಪಕ್ಷ ವಹಿಸಿ ನಿಂತಿರುವಾಗ ಅವರಿಗೆ ಯಾರು ತಾನೇ ಏನು ಮಾಡಬಲ್ಲರು ?

೧೯೪೭ರಲ್ಲಿ ಅವರಿಗೆ ಮೂವತ್ತು ನಾಲ್ಕು ವರ್ಷ ನಡೆಯುತ್ತಿದ್ದಾಗ, ಜತ್ತಿಯವರು ಜಮಖಂಡಿಯ ರಾಜಕೀಯ ಕ್ಷಿತಿಜದ ಮೇಲೆ, ಧೃವ ನಕ್ಷತ್ರ

ದಂತೆ ಒಮ್ಮೆಲೇ ಮೇಲೆದ್ದು ಕಾಣಿಸಿಕೊಂಡರು. ಎಲ್ಲರಿಗೂ ಆಶ್ಚರಿಯನ್ನುಂಟು ಮಾಡಿ ಅವರು ಆಗ ಮುಖ್ಯ ಮಂತ್ರಿಗಳಾಗಿ ನೇಮಕಗೊಂಡರು. ಶ್ರೀ ದೊಡ್ಡಮೇಟಿ ಅಂದಾನೆಪ್ಪನವರು ಆರಂಭಿಸಿದ್ದ ಪ್ರಜಾ ಆಂದೋಲನವು ಯಶಸ್ವಿಯಾಗಿ, ಅಲ್ಲಿಯ ದೊರೆಯು ಅಧಿಕಾರವನ್ನು ಜನರ ಕೈಗೆ ಒಪ್ಪಿಸಲು ಸಿದ್ಧನಾದಾಗ,ದೊಡ್ಡ ಮೇಟಿಯವರು ಜತ್ತಿಯವರ ಕಡೆಗೆ ಬೆರಳು ಮಾಡಿ ತೋರಿಸಿದರು.

ಶ್ರೀ ಜತ್ತಿಯವರು ದೈವವನ್ನು ಹಿಡಿದು ಕೊಂಡಿರುವರೋ, ಅಥವಾ ದೈವವೇ ಜತ್ತಿಯವರನ್ನು ಹಿಡಿದುಕೊಂಡಿರುವದೋ, ಹೆಜ್ಜೆ — ಹೆಜ್ಜೆಗೆ ಅದು ಅವರನ್ನು ಮುಂದಕ್ಕೆ ನಡೆಸಿಕೊಂಡು ಬಂದಿದೆ. ದೂರದಲ್ಲಿ ಪ್ರೇಕ್ಷಕರಾಗಿ ನಿಂತಿದ್ದ ಅವರಿಗೆ ಜಮಖಂಡಿಯಲ್ಲಿ ಮುಖ್ಯ ಪಾತ್ರ ಬರುವುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಆಗಂತುಕನೊಬ್ಬನಿಗೆ ಆನೆ ಮಾಲೆ ಹಾಕಿ ಅರಸನನ್ನಾಗಿ ಮಾಡಿದ ಕಥೆಯನ್ನು ಇದು ನೆನಪಿಗೆ ತಂದು ಕೊಡುತ್ತದೆ.

## ಲಿಂಕನ್ ಕಥೆ

ಬಿಜಾಪುರ ಜಿಲ್ಲೆಯ ಜಮಖಂಡೀ ತಾಲೂಕಿನ ಸಾವಳಗಿ ಗ್ರಾಮದ ಬಡ ಕುಟುಂಬವೊಂದರಲ್ಲಿ ಜನ್ಮವೆತ್ತಿದ ಅವರು ಉಪರಾಷ್ಟ್ರಪತಿ ಪದಕ್ಕೆ ನಡೆದು ಹೋದ ಘಟನೆಯು ನಮಗೆ ಲಿಂಕನ್‌ರಕಥೆಯನ್ನು ನೆನಪಿಗೆ ತಂದುಕೊಡುತ್ತದೆ. ಅವರಿಗೆ ತಮ್ಮ ಜನ್ಮದ ಅನಾಕರ್ಷಕ ಹಿನ್ನೆಲೆ ಹಾಗೂ ಬಡತನಗಳು ಬಂಧನವೆನಿಸಲಿಲ್ಲ; ಅವಕಾಶವಾಗಿ ಪ ರಿ ಣ ಮಿ ಸಿ ದ ವು. ಈ ವಿಚಾರಗಳಲ್ಲಿ ಲಿಂಕನ್‌ರ ಕಥೆ ಬೇರೆ ಅಲ್ಲ, ಜತ್ತಿಯವರ ಕಥೆ ಬೇರೆ ಅಲ್ಲ.

ಬಿ. ಎ. ಓದಿ ಬಂದು, 'ಮುಂದೇನು?–' ಎಂದು ಮಾರ್ಗ ಕಾಣದೆ, ಜತ್ತಿಯವರು, ಎರಡು ವರ್ಷ ಮನೆ ಹಿಡಿದು ತಕ್ಕಡಿಯನ್ನು ಕೈಗೆ ತಗೆದುಕೊಂಡು ವ್ಯಾಪಾರಕ್ಕೆ ಇಳಿದಿದ್ದರೆಂಬುದನ್ನು ಬಹುಶ: ಅನೇಕರು ತಿಳಿದಿರಲಾರರು. ತಮ್ಮ ಜೀವನದ ಹಾದಿಯಲ್ಲಿ ಏನು ಬಂದಿದೆಯೋ — ಅದನ್ನು ಅವರು ಕೈಗೆತ್ತಿಕೊಂಡು ಬಂದಿದ್ದಾರೆ. ಅದು. ಅವರಿಗೆ ಹಳ್ಳತಿಟ್ಟಗಳನ್ನು ದಾಟುವ ಸೇತುವೆಯಾಗಿ ಪರಿಣಮಿಸಿದೆ.

ಜಮಖಂಡಿಯಲ್ಲಿದ್ದ ಜತ್ತಿಯವರು ಮುಂಬಯಿಗೆ ಹೋಗದಿದ್ದರೆ ಅವರ ಸಾರ್ವಜನಿಕ ಮನ್ನಣೆಯ ಸಾಧನೆ ಅಷ್ಟಕ್ಕೇ ಮುರುಟಿದಂತಾಗುತ್ತಿತ್ತು. ನೂರು ಸಂಸ್ಥಾನಗಳು ಮುಂಬಯಿ ರಾಜ್ಯದಲ್ಲಿ ವಿಲಯನಗೊಂಡಿದ್ದರೂ, ಅವೆಲ್ಲ ರಾಜ್ಯ

ಗಳಿಗೂ ಸೇರಿ ಮುಂಬಯಿ ವಿಧಾನ ಸಭೆಯಲ್ಲಿ ಕೇವಲ ಐದು ಸ್ಥಾನಗಳನ್ನು ಮೀಸಲಿಡಲಾಗಿದ್ದಿತು. ಅಂಥ ಐದು ಸ್ಥಳಗಳಲ್ಲಿ ಜತ್ತಿಯವರ ಪಾಲಿಗೆ ಒಂದು ಸ್ಥಾನ ಲಭಿಸಿದುದು ಅವರ ಸುದೈವಕ್ಕೆ ನಿದರ್ಶನವಾಗಿದೆ.

## ಮುರಾರಜಿ ಮೆಚ್ಚುಗೆ

ಮುಂಬಯಿ ಅಸೆಂಬ್ಲಿಯ ಸದಸ್ಯರಾಗಿ ಬಂದ ಜತ್ತಿಯವರು ಪಾರ್ಲಿಮೆಂಟರಿ ಸೆಕ್ರೆಟರಿಯಾಗಿ ನೇಮಕಗೊಂಡರು. ೧೯೫೨ ಸಾರ್ವತ್ರಿಕ ಚುನಾವಣೆಯ ನಂತರ ಉಪಮಂತ್ರಿ ಆದರು. ಸಾಮಾನ್ಯವಾಗಿ ಯಾರನ್ನೂ ಸುಲಭವಾಗಿ ಮೆಚ್ಚಿಕೊಳ್ಳದ ಮುರಾರಜಿಯವರಿಂದ ಮೆಚ್ಚುಗೆ ಪಡೆದುಕೊಂಡರು. ಅಷ್ಟರಲ್ಲಿ ರಾಜ್ಯ ಪುನರ್ಘಟನೆ ನಡೆದು ವಿಶಾಲ ಮೈಸೂರು ರಾಜ್ಯ ನಿರ್ಮಾಣಗೊಂಡಿತು. ತಮ್ಮ ಮುಂಬಯಿ ಪ್ರತೀತಿಯೊಂದಿಗೆ ಜತ್ತಿಯವರು ಮೈಸೂರಿಗೆ ಬಂದರು. ಆದರೆ ಒಡನೆಯೇ ಅವರು ಅಲ್ಲಿ ಮಂತ್ರಿ ಆಗಲಿಲ್ಲ. ಭೂಸುಧಾರಣೆ ಸಮಿತಿಯ ಚೇರಮನ್ ಆದರು. ತಮ್ಮ ಸೌಜನ್ಯ—ಸರಳತೆಗಳಿಂದ ಜನರ ಮನಸ್ಸನ್ನು ಗೆದ್ದುಕೊಳ್ಳುವುದಕ್ಕೆ ಭೂಸುಧಾರಣಾ ಸಮಿತಿಯು ಅವರಿಗೆ ಅವಕಾಶವನ್ನು ಒದಗಿಸಿಕೊಟ್ಟಿತು.

ಮಂತ್ರಿ ಆಗದಿರಲೆಂದು ಅವರನ್ನು ದೂರ ಇರಿಸಿದರೆ, ಅವರು ಒಮ್ಮೆಲೆ ಮೇಲಕ್ಕೆ ಜಿಗಿದು ಮುಖ್ಯಮಂತ್ರಿಯ ಸ್ಥಾನದಲ್ಲಿಯೇ ವಿರಾಜಮಾನಗೊಂಡರು ಒಬ್ಬ ಡೆಪ್ಯುಟಿ ಮಂತ್ರಿಯಾಗಿದ್ದರೆ ಸಂತೃಪ್ತಿಪಟ್ಟುಕೊಳ್ಳಬಹುದಾಗಿದ್ದ ಅವರನ್ನು ದೈವವು ಹಾಗೂ ಮೈಸೂರಿನ ಪ್ರವಾಹೀ ರಾಜಕೀಯವು ಮುಖ್ಯಮಂತ್ರಿಯನ್ನಾಗಿಯೇ ಮಾಡಿತು. ಸಾಮಾನ್ಯವಾಗಿ ಅಧಿಕಾರ ಸ್ಥಾನದಲ್ಲಿರುವವರ ಹೆಸರಿಗೆ ಅಂಟಿಕೊಳ್ಳುವ ಅಪಖ್ಯಾತಿಯೊಂದೂ ಅವರ ಹೆಸರಿಗೆ ಅಂಟಿಕೊಳ್ಳಲಿಲ್ಲ. ಈ ಖ್ಯಾತಿ ಹಾಗೂ ಅವರ ಸ್ವಭಾವ–ಸರಳತೆ, ಜತ್ತಿಯವರಿಗೆ ನೆಹರೂರವರ ಮೆಚ್ಚುಗೆಯನ್ನೂ ಗಳಿಸಿಕೊಟ್ಟವು. " ನೋಡಿರಿ, ಅವರು ಮುಖ್ಯಮಂತ್ರಿ ಆಗಿದ್ದರೂ ಎಷ್ಟೊಂದು ಸರಳರಾಗಿದ್ದಾರೆ " ಎಂದು ನೆಹರೂರವರು ತಾವಾಗಿಯೇ ಅನೇಕರೆದುರು ಹೇಳಿದುದುಂಟು.

ಜತ್ತಿಯವರು ಯಾರೆದುರೂ ಅಹಂಕಾರ ತೋರಿಸಿದವರಲ್ಲ. ಅವರ ಮೇಲೆ ಸಿಟ್ಟುಮಾಡಬೇಕೆಂದವರೂ ಕೂಡ, ಅವರನ್ನು ಕಂಡ ನಂತರ ತಮ್ಮ ಮನಸ್ಸನ್ನು ಬೇರೆ ಮಾಡಿಕೊಂಡು ಬಂದಿದ್ದಾರೆ. ಜತ್ತಿಯವರ ಸಾಧಾರಣತೆಯಲ್ಲಿ ಒಂದು ವಿಧದ ಅಸಾಧಾರಣತೆ ಇದೆ. ತಮ್ಮಲ್ಲಿರುವ ಸಾಮರ್ಥ್ಯವನ್ನು ಕುರಿತು

ಪ್ರವರೆಂದೂ ಯಾರೆದುರೂ ಹೇಳಿಕೊಂಡವರಲ್ಲ. ಅವರು ತಾವು ದೊಡ್ಡವರಲ್ಲಿಯೂ ಸಣ್ಣವರು, ಸಣ್ಣವರಲ್ಲಿಯೂ ಸಣ್ಣವರು ಎನ್ನುವ ಭಾವನೆ ಇರಿಸಿಕೊಂಡು ಬೆಳೆದು ಬಂದಿದ್ದಾರೆ. 'ಎನಗಿಂತ ಕಿರಿಯರಿಲ್ಲ' ಎನ್ನುವ ಈ ಭಾವನೆಯೇ ಅವರನ್ನು ಮೇಲಕ್ಕೆ ತಂದು ನಿಲ್ಲಿಸಿದೆ.

ಅವರಿಗೆ ಜೀವನದ ಬಟ್ಟೆಯ ಕಡೆಗೆ ಗಮನವಿದೆಯಲ್ಲದೆ, ತಾವು ಎಂಥ ಬಟ್ಟೆ-ಬರೆ ತೊಡಬೇಕೆನ್ನುವುದರ ಕಡೆಗೆ ಗಮನವಿಲ್ಲ. ಅವರು ಆರ್ಷೇಯವಾದ ಭಾರತೀಯ ಸಂಸ್ಕೃತಿಯ ನಿಜವಾದ ಪ್ರತೀಕವೆನಿಸಿದ್ದಾರೆ. ಅವರ ಪತ್ನಿ ಶ್ರೀಮತಿ ಸಂಗಮ್ಮನವರು, ಅವರ ಜೀವನದ ಹಾಗೂ ಅವರ ಸರಳತೆಯ ಅವಿಭಾಜ್ಯ ಅಂಗವೆನಿಸಿದ್ದಾರೆ. ಜತ್ತಿಯವರಿಗೆ ಒಂದಾದ ಮೇಲೆ ಒಂದರಂತೆ ಉಚ್ಚಸ್ಥಾನಗಳು ಬಂದರೂ, ಈ ದಂಪತಿಗಳು ಭಾರತದ ಗ್ರಾಮೀಣ ಸಂಸ್ಕೃತಿಯನ್ನು ಬಿಟ್ಟುಕೊಟ್ಟಿಲ್ಲ. ವೈಭವದಲ್ಲಿ ತೂರಿ ಹೋಗದಂತೆ, ಅವರು ತಮ್ಮನ್ನು ಕಾಯ್ದುಕೊಂಡು ಬಂದಿದ್ದಾರೆ.

## ಸುದೈವಿ ಮನುಷ್ಯ

೧೯೬೨ ರಲ್ಲಿ ನಿಜಲಿಂಗಪ್ಪ ಸಂಪುಟದಲ್ಲಿ ಮಂತ್ರಿಯಾಗಿದ್ದ ಅವರು ೧೯೬೮ ರಲ್ಲಿ ನಿಜಲಿಂಗಪ್ಪನವರು ಅಧಿಕಾರವನ್ನು ಬಿಟ್ಟು ಕಾಂಗ್ರೆಸ್ ಅಧ್ಯಕ್ಷರಾಗಿ ಹೋದಮೇಲೆ ಸಾದಾ ಎಂ. ಎಲ್. ಎ. ಆಗಿ ಉಳಿದರು. ಆಗ ಮುಖ್ಯಮಂತ್ರಿ ಆಗಿದ್ದ ಶ್ರೀ ವೀರೇಂದ್ರ ಪಾಟೀಲರಿಗೆ ತೊಂದರೆ ಆಗದಿರಲಿ ಎಂಬಂತೆ ಪುದುಚೇರಿಯ ಲೆಫ್ಟಿನೆಂಟ್ ಗವರ್ನರ್ ಪದವು ಜತ್ತಿಯವರ ಪಾಲಿಗೆ ಬಂದಿತು. ಅವರು ಅದನ್ನು ಸ್ವೀಕರಿಸಿದರು. ತಮ್ಮ ಜೀವನದಲ್ಲಿ ಬಂದ ಪ್ರತಿಯೊಂದು ತಿರುವೂ ಅವರಿಗೆ ಇನ್ನೂ ಹೆಚ್ಚು ಮೇಲಕ್ಕೆ ಹೋಗುವ ಚಾಲನೆಯನ್ನು ಒದಗಿಸಿ ಕೊಟ್ಟಿದೆ. ಲೆಫ್ಟನೆಂಟ್ ಗವರ್ನರಿಕೆಯೊಂದಿಗೇ ಜತ್ತಿಯವರ ರಾಜಕೀಯ ಜೀವನದ ಮುಕ್ತಾಯ ಎಂದುಕೊಂಡಿದ್ದವರ ರಾಜಕೀಯ ಜೀವನ ಮುಕ್ತಾಯಗೊಂಡಿದೆ. ಜತ್ತಿಯವರದು ಮಾತ್ರ ಇನ್ನೂ ಹಾಗೆಯೇ ಮುಂದಕ್ಕೆ ನಡೆದಿದೆ. ಸುದೈವೀ ಮನುಷ್ಯನನ್ನು ಮುಳುಗಿಸಬೇಕೆಂದು ಬ್ರಹ್ಮಪುತ್ರಾ ನದಿಯಲ್ಲಿ ಎಸೆದರೂ ಅವನು ಬಾಯಲ್ಲಿ ಒಂದು ಬಂಗಾರದ ತುಂಡು ಕಚ್ಚಿಕೊಂಡೇ ಮೇಲಕ್ಕೆದ್ದು ಬರುತ್ತಾನೆ. ಕಲ್ಯಾಣದ ಬಸವಣ್ಣ ಹಾಗೂ ಪಾಂಡಿಚೇರಿಯ ಮಾತೆಯಿಂದ ಆಶೀರ್ವಾದ ಪಡೆದ ಜತ್ತಿಯವರು ಉತ್ಕಲದ ಗವರ್ನರರಾಗಿ ಜಗನ್ನಾಥನ ಆಸ್ಥಾನಕ್ಕೇ ಹೋದರು.

ಹಿಂದೆ ಜವಾಹರಲಾಲರ ಗಮನವನ್ನು ಸೆಳೆದಂತೆ ಈಗ ಅವರು ಅವರ ಮಗಳ ದೃಷ್ಟಿಗೂ ಬಿದ್ದರು. ಉತ್ಕಲದಲ್ಲಿ ಅವರು ಮಾಡಿದ ಒಳ್ಳೆಯ ಕಾರ್ಯ ದಿಂದ ಶ್ರೀಮತಿ ಇಂದಿರಾಗಾಂಧಿಯವರು ಬಹಳಷ್ಟು ಪ್ರಭಾವಿತರಾದರು, ಅಲ್ಲಿಂದ ಜತ್ತಿಯವರನ್ನು ತಡೆದವರೇ ಇಲ್ಲ. ಉಪರಾಷ್ಟ್ರಪತಿ ಆಗಿಯೇ ಬಿಟ್ಟರು. ಉಪರಾಷ್ಟ್ರಪತಿ ಪದದಿಂದ ರಾಷ್ಟ್ರಪತಿ ಪಟ್ಟಕ್ಕೆ ಇನ್ನೇನು ಕೇವಲ ಒಂದೇ ಒಂದು ಮೆಟ್ಟಲು ಇದೆ. ಅವರು ಏನೂ ಆಗಿಲ್ಲದಿದ್ದಾಗ ಜತ್ತಿಯವ ರಿಗೆ ಸಿಂಹಾಸನದ ಭಾಗ್ಯ ಇದೆಯೆಂದು ಹಿಂದೆ ಯಾರೋ ಒಬ್ಬರು ಹೇಳಿದ್ದ ರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಜತ್ತಿಯವರ ಬಗೆಗೆ ಅನೇಕ ಮಾತುಗಳು ಸತ್ಯವಾಗಿವೆ ಎಂದಮೇಲೆ ಈ ಮಾತೂ ಅದೇಕೆ ಅಸತ್ಯವಾಗಬೇಕು ?

ಅನೇಕರ ಕಣ್ಣಿಗೆ ಕಾಣದೇ ಇರುವುದು ಜತ್ತಿಯವರ ಹೆಜ್ಜೆಗೆ ಕಾಣಿಸು ತ್ತದೆ.' ಕಡಿಮೆ ಎತ್ತರದ ಜನರಿಗೆ ಹೆಜ್ಜೆಯಲ್ಲಿ ಬುದ್ಧಿ '–ಎನ್ನುವ ಗಾದೆಯಮಾತು ಕನ್ನಡದಲ್ಲಿದೆ. ಜತ್ತಿಯವರು ಸಂದು ಇಲ್ಲದ ಕಡೆಯಲ್ಲಿ ದಾರಿ ಮಾಡಿಕೊಂಡು ಹೋಗುವ ಸೌಮ್ಯ ಸ್ವಭಾವದವರು. ದುರ್ದೈವಿಗೆ ತೆರೆದ ಬಾಗಿಲುಗಳು ಮುಚ್ಚಿದರೆ, ಸುದೈವೀ ಜತ್ತಿಯವರಿಗೆ ಮುಚ್ಚಿದ ಬಾಗಿಲುಗಳೆಲ್ಲವೂ ತೆರೆಯುತ್ತವೆ.



## ಬಿರುಗಾಳಿ

ನಾನೆಂಬಹಂಕಾರ ತಲೆದೋರಿದಲ್ಲಿ
ಅಟಮಟಕುಟಿಲಕುಹಕವೆಂಬ ಬಿರುಗಾಳಿ ಹುಟ್ಟಿತ್ತು
ಆ ಬಿರುಗಾಳಿ ಹುಟ್ಟಲೊಡನೆ ಜ್ಞಾನ ಜ್ಯೋತಿ ಕೆಟ್ಟಿತ್ತು.
ಜ್ಞಾನಜ್ಯೋತಿ ಕೆಡಲೊಡನೆ
ನಾ ಬಲ್ಲಿದ ತಾ ಬಲ್ಲಿದರೆಂಬ ಅರುಹಿರಿಯರೆಲ್ಲರು
ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಗುಹೇಶ್ವರಾ.

— ಅಲ್ಲಮಪ್ರಭುಗಳು

# ದಕ್ಷ ಆಡಳಿತಗಾರ ಶ್ರೀ ಜತ್ತಿ ಅವರು

● ನಿಟ್ಟೂರು ಶ್ರೀನಿವಾಸರಾವ್

[● ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ರಾಜ್ಯ ಹೈಕೋರ್ಟಿನ ಮಾಜಿ ನ್ಯಾಯಾಧೀಶರು. ರಾಜ್ಯ ಜಾಗೃತ ಆಯೋಗದ ಅಧ್ಯಕ್ಷರಾಗಿಯೂ ಅವರು ಆಡಳಿತಾತ್ಮಕ ಸೇವೆಯನ್ನು ಸಲ್ಲಿಸಿದ್ದಾರೆ. ದಕ್ಷ ಆಡಳಿತದ ನಿಕಷ ಶ್ರೀ ನಿಟ್ಟೂರರು ಎಂದರೆ ತಪ್ಪಾಗಲಾರದು. ಇಂಥವರು ಶ್ರೀ ಜತ್ತಿ ಅವರ ಆಡಳಿತ ಚತುರತೆ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡುತ್ತಾರೆಂದರೆ ಈ ಅಭಿಪ್ರಾಯಗಳಿಗೆ ತುಂಬಾ ಬೆಲೆ ಇದೆ. – ಸಂ.]

ಶ್ರೀ ಜತ್ತಿಯವರ ಪರಿಚಯ ನನಗೆ ಅನೇಕ ವರ್ಷಗಳ ಹಿಂದೆ ಆಯಿತು. ಅದು ನನ್ನ ಸೌಭಾಗ್ಯವೆಂದು ಎಣಿಸುತ್ತೇನೆ. ಅದಕ್ಕೂ ಮುಂಚೆ ನಾನು ಅವರ ವಿಷಯವನ್ನು ನಮ್ಮಿಬ್ಬರಿಗೂ ಮಿತ್ರರಾದ ಸಜ್ಜನರಿಂದ ಕೇಳಿದ್ದೆನು. ಅಷ್ಟೇ ಅಲ್ಲದೆ ಅವರು ಸಾರ್ವಜನಿಕ ಕ್ಷೇತ್ರದಲ್ಲಿ ಸಲ್ಲಿಸುತ್ತಾ ಬಂದ ಸೇವೆಯ ಅರಿವೂ ನನಗಿದ್ದಿತು. ಇವುಗಳಿಂದ ನನಲ್ಲಿ ಸ್ವಾಭಾವಿಕವಾಗಿಯೇ ಅವರನ್ನು ಕುರಿತು ಗೌರವಾದರಗಳು ಉದಯಿಸಿದ್ದುವು. ಅವರ ಪ್ರತ್ಯಕ್ಷ ಪರಿಚಯವಾದ ಮೇಲೆ ಈ ಭಾವನೆಯು ಇನ್ನೂ ಸ್ಫುಟವಾದ ರೂಪವನ್ನು ಹೊಂದಿತು.

ನನ್ನ ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಮಾಡಿದ ಅವರ ವ್ಯಕ್ತಿತ್ವದ ಅಂಶ ಅವರ ಶಾಂತ, ಸಾವಧಾನ ಮನೋವೃತ್ತಿ. ಅವರು ಅನೇಕ ಜವಾಬ್ದಾರಿ ಸ್ಥಾನಗಳಲ್ಲಿದ್ದು ತಮ್ಮ ಕಾರ್ಯವನ್ನು ದಕ್ಷತೆಯಿಂದಲೂ ನಿಸ್ವಾರ್ಥತೆಯಿಂದಲೂ ನಿರ್ವಹಿಸಿದ್ದಾರೆ. ಎಷ್ಟೋ ಸಂದರ್ಭಗಳಲ್ಲಿ ಅವರು ಬಹು ತೊಡಕಿನ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿದೆ. ಆದರೆ ಎಂತಹ ಸನ್ನಿವೇಶದಲ್ಲಾಗಲಿ ಅವರು ತಮ್ಮ ಧೃತಿಯನ್ನಾಗಲಿ ಮನಸ್ಸಿನ ಸಮತೆಯನ್ನಾಗಲಿ ಕಳೆದುಕೊಂಡವರಲ್ಲ. ಕಾರ್ಯನಿರ್ವಹಣೆಯಲ್ಲಿ ತತ್ವಕ್ಕೆ ತಪ್ಪದೆ ನಡೆದುಕೊಂಡಿರುವರಾದರೂ ಯಾರ ಮನಸ್ಸನ್ನೂ ನೋಯಿಸಿದವರಲ್ಲ. ಅವರ ನಡೆ–ನುಡಿಯಲ್ಲಿ ಅವರು ಅಧಿಕಾರ ಸ್ಥಾಥದಲ್ಲಿರಲಿ, ಇಲ್ಲದಿರಲಿ ಭೇದವಿಲ್ಲ. ಕೆಲವು

ಕಾಲ ನಾನು ನಮ್ಮ ಈ ರಾಜ್ಯದ ಆಡಳಿತಕ್ಕೆ ಸಂಬಂಧ ಪಟ್ಟಂತೆ ಹಲವಾರು ವಿಷಯಗಳ ಪರಿಶೀಲನೆ ಮತ್ತು ತೀರ್ಮಾನ ಮಾಡುವ ಸನ್ನಿವೇಶದಲ್ಲಿ ಅವ ರೊಡನೆ ನಿಕಟ ಸಂಪರ್ಕಹೊಂದಿದವನಾಗಿದ್ದೇನೆ. ಎಲ್ಲ ಸಂದರ್ಭಗಳಲ್ಲಿಯೂ ಅವರು ವಿಷಯಗಳನ್ನು ಸರ್ವ ಜನ ಹಿತ ದೃಷ್ಟಿಯಿಂದಲೂ ಸಹಕಾರ ಭಾವ ದಿಂದಲೂ ತತ್ವನಿಷ್ಠೆಯಿಂದಲೂ ಗಮನಿಸುವದು ನನ್ನ ಅನುಭವಕ್ಕೆ ಬಂತು. ಇದೇ ಶ್ರೇಷ್ಠ ಆಡಳಿತಗಾರರ ಲಕ್ಷಣ.

ನಾನು ಒಮ್ಮೆ ಜಮಖಂಡಿಗೆ ಅಲ್ಲಿನ ಕೋರ್ಟಿನ ಪರಾಮರ್ಶೆಗಾಗಿ ಹೋಗಿದ್ದೆನು. ಅವರು ಅಲ್ಲಿಯೇ ತಮ್ಮ ವಕೀಲಿ ವೃತ್ತಿಯನ್ನು ನಡೆಸುತ್ತಿದ್ದ ರಲ್ಲವೆ ? ನನ್ನ ಭೇಟಿಯ ಕಾಲಕ್ಕೆ ಅವರೂ ಅಲ್ಲಿಗೆ ಬಂದು ಅಲ್ಲಿನ ವಕೀಲ ಭ್ರಾತೃಗಳೊಂದಿಗೆ ಸೇರಿದರು. ಅವರ ವಿಷಯದಲ್ಲಿ ಆ ಮಿತ್ರರಿಗೆ ಎಷ್ಟು ಆದರ, ಗೌರವ, ಆತ್ಮೀಯತೆಗಳಿದ್ದುವೆಂಬುದನ್ನು ಪ್ರತ್ಯಕ್ಷ ಕಂಡು ನಾನು ಆನಂದಪಟ್ಟೆ. ಆ ಸಮಯದಲ್ಲಿ ಅವರು ಅಲ್ಲಿಗೆ ಬಂದದ್ದು ಅವರ ಸೌಜನ್ಯದ ಚಿಹ್ನೆಯೆಂದು ಬೇರೆ ಹೇಳಬೇಕಾಗಿಲ್ಲ.

**ಸುಸಂಸ್ಕೃತ**

"ಕರ್ಮವೀರ"ದ ಇತ್ತೀಚಿನ ಸಂಚಿಕೆಯೊಂದರಲ್ಲಿ ಅವರು ತಮ್ಮ ಮೊಟ್ಟಮೊದಲ ಸಂಪಾದನೆಯನ್ನು ಕುರಿತು ಒಂದು ಸಣ್ಣ ಲೇಖನವನ್ನು ಬರೆ ದಿದ್ದಾರೆ. ಅದು ಅತ್ಯಂತ ಹೃದಯಸ್ಪರ್ಶಿಯಾಗಿದೆ. ಅವರು ಎಷ್ಟು ಸರಳ, ನಮ್ರ ಸುಸಂಸ್ಕೃತ ವ್ಯಕ್ತಿಯೆಂಬುದು ಅದರಿಂದ ಗೊತ್ತಾಗುತ್ತದೆ.

ಅವರು ರಾಜಕೀಯ ಕ್ಷೇತ್ರದಲ್ಲಿ ಕಾಂಗ್ರೆಸ್ ಸದಸ್ಯರಾಗಿ, ಮುಂಬಯಿ ಕಾಯಿದೆ ಮಂಡಲದ ಸದಸ್ಯರಾಗಿ ಮತ್ತು ಅಲ್ಲಿನ, ಕರ್ನಾಟಕದ, ಒರಿಸ್ಸಾದ, ಕೇಂದ್ರದ, ಕ್ಷೇತ್ರಗಳಲ್ಲಿ ಉನ್ನತ ಸ್ಥಾನಗಳಲ್ಲಿದ್ದು ಸೇವೆ ಸಲ್ಲಿಸಿರುವುದಲ್ಲದೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ನಿರಂತರವಾದ ಮತ್ತು ಗಣ್ಯವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

ಈ ಸೌಜನ್ಯ ಮೂರ್ತಿಗೆ ನಾನು ಸರ್ವ ವಿಧದ ಒಳಿತನ್ನೂ ಹೃತ್ಪೂರ್ವಕ ಹಾರೈಸುತ್ತೇನೆ,





ಉಪರಾಷ್ಟ್ರಪತಿಯಾದ ಬಳಿಕ ಶ್ರೀ ಬಿ. ಡಿ. ಜತ್ತಿ ಅವರು ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ (೧೯೭೪)



ಪ್ರಧಾನಮಂತ್ರಿ ಶ್ರೀಮತಿ ಗಾಂಧಿಯವರೊಂದಿಗೆ ಶ್ರೀಮತಿ ಜತ್ತಿ ಅವರು.

# ಕರ್ನಾಟಕ ರತ್ನ ಶ್ರೀ ಬಿ. ಡಿ. ಜತ್ತಿ

● ಆರ್. ಟಿ. ಮಜ್ಜಿಗಿ

● [ ಹುಬ್ಬಳ್ಳಿ — ಧಾರವಾಡಗಳಲ್ಲಿ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ವ್ಯಕ್ತಿಯಾಗಿದ್ದಾರೆ ಶ್ರೀ ಆರ್. ಟಿ. ಮಜ್ಜಿಗಿಯವರು. ಪ್ರತಿವರ್ಷ ರಾಜ್ಯೋತ್ಸವವನ್ನಾಚರಿಸಿ ಕನ್ನಡಿಗರಲ್ಲಿ ನಾಡು ನುಡಿಯ ಅಭಿಮಾನವನ್ನು ತುಂಬುತ್ತಿದ್ದಾರೆ. ಅವರು ಜಾಗೃತಿ ಪ್ರಕಾಶನದ ಸಂಚಾಲಕರು ಮಾತ್ರವಲ್ಲ ಸರ್ವತೋಮುಖ ಜಾಗೃತಿಯ ಕಾರಣಕರ್ತರೂ ಆಗಿದ್ದಾರೆ. ಅಭಿನಂದನೀಯ ವಿಷಯವೆಂದರೆ ಅವರು ಶ್ರೀ ಜತ್ತಿ ಅವರ ಪರಮಭಕ್ತರು. ಶ್ರೀ ಬಿ. ಡಿ. ಜತ್ತಿಯವರ ಷಷ್ಠ್ಯಬ್ಧಿ ಸಮಾರಂಭವನ್ನು ಹುಬ್ಬಳ್ಳಿಯಲ್ಲಿ ಕರ್ನಾಟಕದಲ್ಲಿಯೇ ಮೊದಲನೆಯದಾಗಿ ಏರ್ಪಡಿಸಿದ ಶ್ರೇಯಸ್ಸು ಶ್ರೀ ಮಜ್ಜಿಗಿ ಅವರಿಗೇನೇ ಸಲ್ಲುತ್ತದೆ. — ಸಂ. ]

ಹಣೆಯ ತುಂಬ ಮೂರು ಬೆರಳಿನ ವಿಭೂತಿ ಧರಿಸಿದ ಪ್ರಸನ್ನ ಚಿತ್ತದ ಮುಖಮುದ್ರೆ; ಸಾತ್ವಿಕ — ಕರುಣಾಭರಿತ ತೇಜಃ ಪುಂಜಕಂಗಳು; ಸದಾವಕಾಲವೂ ಮೊಗದಲ್ಲಿ ಮಂದಹಾಸ; ನಿರಂತರವಾಗಿ ಜನಹಿತ ಚಿಂತನೆ; ಈ ಮೇರು ವಾಮನಮೂರ್ತಿಯು ಎಲ್ಲರಿಗೂ ಚಿರಪರಿಚಿತ. ಹೆಸರು ಬಸಪ್ಪ ದಾನಪ್ಪ ಜತ್ತಿ. "ಜತ್ತಿ ಎಂಬ ಹೆಸರಿನಲ್ಲಿ ಸೋಲರಿಯದ "ಜಟ್ಟಿ"ಯ ಗಟ್ಟಿಗತನವಿದೆ. ರಾಜಕೀಯ ರಂಗದಲ್ಲಿ ಹಂತ–ಹಂತವಾಗಿ ಮೇಲೇರಿ ಕೀರ್ತಿ ಶಿಖರ ತಲುಪಿದ ಹಿರಿಮೆ ಇವರದಾಗಿದೆ. ಮಹಾತ್ಮ ಬಸವಣ್ಣನವರ ಲೀಲಾಮಯ ಪುಣ್ಯಕ್ಷೇತ್ರದ ಪರಿಸರವೆಂದರೆ ವಿಜಾಪುರ ಜಿಲ್ಲೆ. ಇದೇ ಜಿಲ್ಲೆಯ ಜಮಖಂಡಿ ತಾಲೂಕಿನ ಸಾವಳಗಿ ಗ್ರಾಮದಲ್ಲಿ ಜನ್ಮವೆತ್ತಿದ ಇವರು ಕನ್ನಡಮ್ಮನ ಶಿರೋಮುಕುಟಕ್ಕೆ ರತ್ನಪ್ರಾಯರೆನಿಸಿದ್ದಾರೆ. ಅವರಿಗೆ ಇದೀಗ ಅರವತ್ತೆರಡು ಸಂವತ್ಸರಗಳು ಪೂರ್ತಿಯಾದವು. ಸಾಮಾಜಿಕ, ರಾಜಕೀಯ ರಂಗಗಳಿಗೆ ಅನುಪಮ ಸೇವೆಸಲ್ಲಿಸುವ ಮೂಲಕ ಸಫಲ. ಹಾಗೂ ಪರಿಶುದ್ಧ ಜೀವನ ನಡೆಸುತ್ತಿ

ರುವ ಇವರು ಅಖಿಲ ಕನ್ನಡಿಗರ ಆದರಾಭಿಮಾನಕ್ಕೆ ಪಾತ್ರರು. ರಾಜಕೀಯ ರಂಗದಲ್ಲಿರುವವರು ಎಲ್ಲರ ಪ್ರೀತಿಗೆ ಪಾತ್ರರಾಗುವುದು ಬಹಳ ಕಷ್ಟ. ಆದರೆ ಶ್ರೀ ಜತ್ತಿಯವರು ಇದರಲ್ಲಿ ಯಶಸ್ವಿಯಾಗಿದ್ದಾರೆ. ಲಕ್ಷಾಂತರ ಅಭಿಮಾನಿಗಳನ್ನು ಗಳಿಸಿಕೊಂಡು ಅತುಲವಾದ ಜನಾನುರಾಗಿಗಳಾಗಿರುವ ಇವರು ಇದೀಗ ಭಾರತದ ಉಪರಾಷ್ಟ್ರಪತಿಯಂತಹ ಪರಮೋಚ್ಚ ಸ್ಥಾನ ಅಲಂಕರಿಸಿ ಕರ್ನಾಟಕದ ಕೀರ್ತಿಯನ್ನು ಭಾರತದೆತ್ತರಕ್ಕೆ ಬೆಳಗಿದ್ದಾರೆ.

## ಧರ್ಮ ಭೀರು

೧೯೭೨ ನೇ ಮೇ ತಿಂಗಳಲ್ಲಿ ನಾನು ಅವರನ್ನು ಸಂದರ್ಶಿಸಿ, "ಕರ್ನಾಟಕದ ರಾಜ್ಯೋದಯದ ಶುಭದಿನವಾದ ನವೆಂಬರ್ ೧ ರಂದು ಹುಬ್ಬಳ್ಳಿ ಮಹಾನಗರದಲ್ಲಿ ತಮ್ಮ ಷಷ್ಟ್ಯಬ್ಧಿಪೂರ್ತಿ ಸನ್ಮಾನ ಸಮಾರಂಭ ಜರುಗಿಸಲು ನಿರ್ಧರಿಸಿದ್ದೇನೆ" ಎಂದು ತಿಳಿಸಿದಾಗ "ನನಗೇಕೆ ಸನ್ಮಾನ; ನನ್ನ ಪಾಲಿನ ದೇವರಾದ ಜನತೆಯ ಸೇವೆಯಲ್ಲಿಯೇ ನನ್ನ ಮಾನ–ಸನ್ಮಾನ ಎಲ್ಲವೂ ಅಡಗಿದೆ" ಎಂದು ಅವರು ವಿನಮ್ರವಾಗಿ ನುಡಿದರು. ಈ ಮಾತು ಕೇಳಿ ನನಗೆ ಅಚ್ಚರಿಯಾಯಿತು. ಸನ್ಮಾನವೆಂದರೆ ಮೈ ಉಬ್ಬುವ ರಾಜಕಾರಣಿಗಳಿರುವಾಗ ಶ್ರೀ ಜತ್ತಿಯವರು ಈ ರೀತಿ ನುಡಿದದ್ದು ಕೇಳಿ ಆಶ್ಚರ್ಯವಾದರೂ ಅವರು ಕೇವಲ ಒಬ್ಬ ರಾಜಕಾರಣಿಯಾಗಿರದೆ ಸಮಾಜ ಸುಧಾರಕ, ಧರ್ಮಭೀರು ಹಾಗೂ ಆದರ್ಶವಾದಿಯಾಗಿದ್ದಾರೆಂಬುದನ್ನು ನೆನೆದಾಗ ಅವರು ಈ ರೀತಿ ಆಡಿದ್ದು ಸ್ವಾಭಾವಿಕ. "ಇದಕ್ಕೆ ನೀವು ಒಪ್ಪಬೇಕೆಂದು" ನಾನು ಅವರಿಗೆ ಆಗ್ರಹಪಡಿಸಿದಾಗ ಅವರು ಅದಕ್ಕೆ ಒಪ್ಪಿ ತಮ್ಮ ಸೌಜನ್ಯತೆಯನ್ನು ವ್ಯಕ್ತಗೊಳಿಸಿದರು.

ಅವರ ಬಹುಮುಖ ವ್ಯಕ್ತಿತ್ವದ ಒಳದರ್ಶನ ಪಡೆಯಲು ಕಾತರನಾಗಿದ್ದ ನಾನು ಅವರನ್ನು ಸಂದರ್ಶನಕ್ಕೆ ಒಪ್ಪಿಸಿದೆ. ಸಪ್ಟೆಂಬರ ೪ ರಂದು ಪಾಂಡಿಚೆರಿಗೆ ತೆರಳಿದೆ. ನೇರವಾಗಿ ರಾಜಭವನಕ್ಕೆ ಹೋದೆ. ಈ ಪುಟ್ಟ ಮೂರ್ತಿ ಭವ್ಯ ಭವನದಲ್ಲಿ ತನ್ನ ಕರ್ತವ್ಯದಲ್ಲಿ ತೊಡಗಿತ್ತು. ನನ್ನನ್ನು ಆತ್ಮೀಯತೆಯಿಂದ ಸ್ವಾಗತಿಸಿದ ನಂತರ ಕುಶಲ ಸಂಭಾಷಣೆಯಲ್ಲಿ ತೊಡಗಿದರು. "ನನ್ನ ಸಂದರ್ಶನದ ಅಗತ್ಯವೇನು, ನಾನು ಮಾಡುತ್ತಿರುವ ಕಾರ್ಯವೆಲ್ಲವೂ ತಮಗೆ ತಿಳಿದೇ ಇದೆ" ಎಂದು ಅವರು ವಿನಮ್ರರಾಗಿ ನುಡಿದರು. ಆಗಲೇ ಊಟದ ಸಮಯವಾಗಿತ್ತು. ಊಟ ಮಾಡುತ್ತಿದ್ದಂತೆಯೇ ಮಾತನಾಡುತ್ತ ಅವರ ಜೀವನದ ವಿವಿಧ ವಿಷಯಗಳನ್ನು ತಿಳಿದುಕೊಂಡೆ.

* * * * *

ಬಾಲ್ಯದಿಂದಲೂ ರಾಷ್ಟ್ರೀಯ ಸೇವಾಮನೋಭಾವನೆಯುಅವರಲ್ಲಿಸ್ಫುಟವಾಗಿ ಸ್ಫುರಿಸುತ್ತಿತ್ತು. ದೇಶಸೇವೆಯೆಂದರೆ ಅವರಿಗೆ ಎಂದಿಲ್ಲದ ಉತ್ಸಾಹ. ಯುವಕರ ಜೊತೆಗೂಡಿ ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗಿಗಳಾದರು. ಮನೆಯಲ್ಲಿ ತಂದೆ ತೀರಿದ ನಂತರ ಸಂಪೂರ್ಣ ಜವಾಬ್ದಾರಿ ಇವರ ಮೇಲೆ ಬಿದ್ದಿತು. ಕುಲ ಕಸಬಾದ ವ್ಯಾಪಾರ ವೃತ್ತಿ ಮುಂದುವರಿಸಿದರು. ವಕೀಲಿ ಶಿಕ್ಷಣ ಪೂರೈಸಿದ ನಂತರ ನ್ಯಾಯವನ್ನು ಎತ್ತಿ ಹಿಡಿಯುವ ಕಾರ್ಯದಲ್ಲಿ ತೊಡಗಿ ಆದರ್ಶ ಹಾಗೂ ಪ್ರಾಮಾಣಿಕ ವಕೀಲರೆಂಬ ಖ್ಯಾತಿ ಪಡೆದರು. ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಗಳಾಗಿಯೂ ಉಪಯುಕ್ತ ಸೇವೆ ಸಲ್ಲಿಸಿದರು. ೧೯೫೪ ರಲ್ಲಿ ಮುಂಬೈ ರಾಜ್ಯದ ಶ್ರೀ ಮುರಾರಜಿ ಮಂತ್ರಿಮಂಡಳದಲ್ಲಿ ಉಪಮಂತ್ರಿಗಳಾಗಿ ಸೇರ್ಪಡೆಯಾದರು. ಆಗಿನ ಮಂತ್ರಿಮಂಡಳದಲ್ಲಿ ಅವರೇ ಅತ್ಯಂತ ಕಿರಿಯ ಮಂತ್ರಿಗಳು. "The Smallest man of the Biggest Popular Ministry ಎಂಬ ಲೋಕಪ್ರಿಯತೆ ಹೊಂದಿದ್ದರು. ಈ ಸಂದರ್ಭದಲ್ಲಿ ಉತ್ತರಕರ್ನಾಟಕದ ಜನತೆಗೆ ಅವರು ಸಲ್ಲಿಸಿದ ಸೇವೆಯು ಚಿರಸ್ಮರಣೀಯ.

## ಶ್ರೇಯಸ್ಸು

೧೯೫೬ ರಲ್ಲಿ ಕರ್ನಾಟಕ ಏಕೀಕರಣದ ನಂತರ ಮೈಸೂರು ರಾಜ್ಯದ ರಾಜಕೀಯ ರಂಗದಲ್ಲಿ ಮಹತ್ವದ ಪಾತ್ರವಾಡಿದರು. ಚಾಣಾಕ್ಷ ಬುದ್ಧಿ, ಕಾರ್ಯ ಕುಶಲತೆ, ಸಕಾಲಿಕ ನಿರ್ಣಯ ಇವುಗಳಿಂದ ಅವರು ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಮುಖ್ಯಮಂತ್ರಿಗಳಾಗಿದ್ದಾಗ ಸಮರ್ಥ ಹಾಗೂ ದಕ್ಷ ಆಡಳಿತ ಗಾರರು ಎಂಬ ಖ್ಯಾತಿಯನ್ನು ಪಡೆದರು. ಸ್ವತಃ ಪಂ. ನೆಹರೂರವರೂ ಕೂಡ ಈ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಅನೇಕ ಜನೋಪಯೋಗಿ ಕಾರ್ಯಗಳನ್ನೆಸಗಿದರು. ಹುಬ್ಬಳ್ಳಿ—ಧಾರವಾಡ ಕಾರ್ಪೊರೇಶನ್ ಮಾಡಿದ ಶ್ರೇಯಸ್ಸು ಇವರಿಗೆ ಮೀಸಲು. ಯಾವುದೇ ಉನ್ನತ ಸ್ಥಾನದಲ್ಲಿದ್ದರೂ ವಿನಮ್ರ ಹಾಗೂ ಸೌಜನ್ಯಯುತ ವರ್ತನೆಯಿಂದ ಅವರು ದೂರ ಸರಿಯಲಿಲ್ಲ. ಮುಖ್ಯ ಮಂತ್ರಿಗಳಾಗಿದ್ದಾಗ ತಮ್ಮ ಸ್ವಂತ ಊರಾದ ಸಾವಳಗಿಗೆ ಹೋದರು. ತಾಯಿಯ ದರ್ಶನಕ್ಕೆ ತೆರಳಿದಾಗ ಅವರು ಸಗಣಿಯ ಕುಳ್ಳು ತಟ್ಟುತಿದ್ದರು. ಶ್ರೀ ಜತ್ತಿಯವರು ಸ್ವಲ್ಪವೂ ಸಂಕೋಚ ಪಟ್ಟುಕೊಳ್ಳದೆ ತಮ್ಮ ತಾಯಿಯ ಪಾದಕ್ಕೆರಗಿದರು. ಆ ವೃದ್ಧ ತಾಯಿ ಸಗಣಿ ಕೈಗಳಿಂದಲೇ ಮಗನನ್ನು ನೇವರಿಸಿದರು. ಇದು ನಿಜವಾದ ತಾಯಿ—ಮಗನ ಪ್ರೇಮ. ಜನತೆಯ ಕಷ್ಟ, ನಷ್ಟಗಳನ್ನು

ಕಂಡಾಗ ಅವರ ಮನಸ್ಸು ಹೂವಿನಂತೆ ಮೃದುವಾದರೂ ಆ ನ್ಯಾಯ ವನ್ನು ಕಂಡಾಗ ವಜ್ರದಂತೆ ಕಠಿಣವಾಗುತ್ತದೆ. ಆಡಳಿತದಲ್ಲಿ ಅನಾವಶ್ಯಕ ವಿಲಂಬ ನೀತಿಯನ್ನು ತೊಡೆದು ಹಾಕಲು ಬಹುವಾಗಿ ಶ್ರಮಿಸಿದರು.

**ನ್ಯಾಯ — ನಿಷ್ಠುರಿ**

ಮುಖ್ಯಮಂತ್ರಿಯ ಪದವಿಯ ನಂತರ ಹಣಕಾಸು ಸಚಿವರಾಗಿ ಹಾಗೂ ಆಹಾರ ಸಚಿವರಾಗಿ ಉಪಯುಕ್ತ ಸೇವೆ ಸಲ್ಲಿಸಿದರು. ಯಾವುದೇ ಸ್ಥಾನದಲ್ಲಿದ್ದರೂ ನ್ಯಾಯ-ನಿಷ್ಠುರಿಯಾಗಿ ವರ್ತಿಸಿದ ಶ್ರೇಯಸ್ಸು ಅವರಿಗೆ ಮೀಸಲು.

" ನ್ಯಾಯ ನಿಷ್ಠುರಿ; ದಾಕ್ಷಿಣ್ಯಪರನು ನಾನಲ್ಲ;
ಲೋಕ ವಿರೋಧಿ ಶರಣನಾರಿಗಂಜುವನಲ್ಲ;
ಕೂಡಲ ಸಂಗಮ ದೇವರ ರಾಜತೇಜದಲ್ಲಿಪ್ಪನಾಗಿ........

ಎಂಬ ಬಸವಣ್ಣನವರ ನುಡಿ ಮುತ್ತಿನಂತೆ ಎಲ್ಲ ಸಂದರ್ಭಗಳಲ್ಲಿಯೂ ನ್ಯಾಯವಾದುದನ್ನೇ ಎತ್ತಿ ಹಿಡಿದಿದ್ದಾರೆ.' ನಮ್ಮ ''ತಮ್ಮ'—- ಎಂಬ ದಾಕ್ಷಿಣ್ಯಕ್ಕೆ ಎಂದೂ ಒಳಗಾಗಿಲ್ಲ. ಸರಳ ಜೀವನವನ್ನೇ ನಡೆಸುತ್ತ ಬಂದಿದ್ದಾರೆ. Simple Living and High Thinking ಎಂಬ ಆದರ್ಶ ಅವರದಾಗಿದೆ. ಒಂದು ಖಾದಿ ಪಂಚೆ; ಖಾದಿ ಜುಬ್ಬಾ; ಖಾದಿ ಟೋಪಿ-ಇದಿಷ್ಟು ಅವರ ಉಡುಪು. ಕೊಂಕು ಮಾತುಗಳಿಲ್ಲ. ಸರಳ ಹಾಗೂ ಮೃದು ಮಾತುಗಳಿಂದ ಎಲ್ಲರಿಗೂ " ಅಣ್ಣ " ನೆಂಬ ಪ್ರೀತಿಗೆ ಪಾತ್ರರಾಗಿದ್ದಾರೆ.

" ನುಡಿದರೆ ಮುತ್ತಿನ ಹಾರದಂತಿರಬೇಕು;
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು;
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು;
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು "

ಎಂಬ ಬಸವಣ್ಣನವರ ನುಡಿ ಮುತ್ತಿನ ಸಾಕಾರ ಸ್ವರೂಪವೇ ಶ್ರೀ ಜತ್ತಿಯವರಾಗಿದ್ದಾರೆ. ನುಡಿ ಮತ್ತು ನಡೆಯನ್ನು ಒಂದಾಗಿ ಮೇಳೈಸಿಕೊಂಡಿರುವ ಅವರು ಇತರ ರಾಜಕಾರಣಿಗಳಿಗೆ ಆದರ್ಶಪ್ರಾಯರಾಗಿದ್ದಾರೆ.

ಬಸವ ಸಮಿತಿಯ ಅಧ್ಯಕ್ಷರಾಗಿ ಅವರು ಮಾಡಿರುವ ಕಾರ್ಯವು ಅವರ್ಣನೀಯ. ಬಸವೇಶ್ವರ ಅಷ್ಟ ಶತಮಾನೋತ್ಸವವು ದೇಶದ ತುಂಬೆಲ್ಲ ಜರುಗುವಂತೆ ಮಾಡಿ ಬಸವಣ್ಣನವರ ತತ್ವ ಪ್ರಚಾರ ಮಾಡಿದರು. ಆಧ್ಯಾತ್ಮಿಕ ರಂಗದಲ್ಲಿ ಭಾರೀ

ಆಸಕ್ತಿ ತಳೆದಿರುವ ಅವರನ್ನು ಪಾಂಡಿಚೇರಿಯತ್ತ ಮಾತಾಜೀಯವರ ಕೃಪೆಯು ಸ್ವಾಭಾವಿಕವಾಗಿಯೇ ಕರೆದೊಯ್ದಿತೆಂದು ಹೇಳಬಹುದು. ಪ್ರತಿನಿತ್ಯ ನಸುಕಿನಲ್ಲಿ ಎದ್ದು ಪ್ರಾತರ್ವಿಧಿಗಳನ್ನು ಪೂರೈಸಿ ಮನ ತಣಿಯುವಂತೆ ಧ್ಯಾನದಲ್ಲಿ ತೊಡಗಿದ ನಂತರ ನಿತ್ಯದ ಕಾರ್ಯದಲ್ಲಿ ತೊಡಗುತ್ತಾರೆ.

ಎಂತಹ ಉನ್ನತ ಸ್ಥಾನದಲ್ಲಿದ್ದರೂ ಕಾಂಚನ ಶನಿಯನ್ನು ಅವರು ತಮ್ಮಿಂದ ದೂರವಾಗಿಟ್ಟದ್ದಾರೆ

"ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ
ನಿಮ್ಮಾಣೆ; ನಿಮ್ಮ ಪುರಾತರಾಣೆ"

ಎಂಬ ಬಸವಣ್ಣನವರ ಉಕ್ತಿಯಂತೆ ಅವರ ಅಕ್ಷರಶಃ ಜೀವನ ಬದುಕುತ್ತಿದ್ದಾರೆ. ಲೌಕಿಕದಲ್ಲಿದ್ದುಕೊಂಡು ಪಾರಮಾರ್ಥದ ಉನ್ನತ ಮೆಟ್ಟಲೇರಿದ್ದಾರೆ. ಅವರು ಕಾವಿಬಟ್ಟೆ ಧರಿಸಿರದಿದ್ದರೂ ಸನ್ಯಾಸಿಯಾಗಿರದಿದ್ದರೂ, ನಿಜವಾಗಿಯೂ ಸ್ವಾಮಿತ್ವದ ಸಕಲ ಸದ್ಗುಣಗಳನ್ನು ಅವರು ಹೊಂದಿದ್ದಾರೆ.

## ಅಪರಿಮಿತ ಪುಣ್ಯ

ಇವರ ಈ ಸಫಲ ಆದರ್ಶ ಜೀವನದ ಹಿಂದೆ ಇವರ ಧರ್ಮಪತ್ನಿ ಶ್ರೀಮತಿ ಸಂಗಮ್ಮನವರ ಅಪರಿಮಿತವಾದ ಪುಣ್ಯವೂ ಅಡಕವಾಗಿದೆ. ಈ ಮಹಾತಾಯಿ ತನ್ನ ಪತಿಗೆ ಎಲ್ಲ ರೀತಿಯಲ್ಲಿಯೂ ನೆರವಾಗುತ್ತಾರೆ. ಬಹುಶಃ ಕಸ್ತೂರಬಾ ಇರದಿದ್ದರೆ ಗಾಂಧೀಜಿಯವರು ಮಹಾತ್ಮರಾಗುತ್ತಿದ್ದರೋ ಇಲ್ಲವೋ ಎಂಬುದು ಸಂಶಯ. ಹಾಗೆಯೇ ಶ್ರೀಮತಿ ಸಂಗಮ್ಮನವರು ಶ್ರೀ ಜತ್ತಿಯವರ ಆದರ್ಶ ಜೀವನಕ್ಕೆ ಕಾರಣಕರ್ತರಾಗಿದ್ದಾರೆ. ಒಬ್ಬಳು ಪುತ್ರಿ, ಹಾಗೂ ಮೂವರು ಪುತ್ರರನ್ನು ಪಡೆದಿರುವ ಶ್ರೀ ಜತ್ತಿಯವರ ಕೌಟುಂಬಿಕ ಜೀವನ ಸಂತೃಪ್ತಿಯ ಜೀವನವಾಗಿದೆ. ಎಲ್ಲ ಧರ್ಮದವರನ್ನು ಸಮಾನ ದೃಷ್ಟಿಯಿಂದ ಕಾಣುವ ಔದಾರ್ಯ ಅವರದಾಗಿದೆ.

ಕಾರ್ಯಶೀಲ ಮನೋಭಾವನೆಯ ಅವರು ಜೀವನದ ಕೊನೆಯುಸಿರಿನ ವರೆಗೂ ನಿಷ್ಠೆಯಿಂದ ದೇಶಕ್ಕೆ ಸೇವೆ ಸಲ್ಲಿಸುವ ಸಂಕಲ್ಪ ತಳೆದಿದ್ದಾರೆ. ಅವರಿಗೆ ಜೀವನದಲ್ಲಿ ಎಳ್ಳಷ್ಟೂ ಅಸಮಾಧಾನವಿಲ್ಲ. ಕರ್ನಾಟಕ ಮತ್ತು ಕನ್ನಡಿಗರ ಸೇವೆಗೆ ಅವರು ಸದಾ ಕಂಕಣಬದ್ಧ. ಪಾಂಡಿಚೆರಿಗೆ ಹೋಗುವ ಕನ್ನಡಿ

ಗರ ಅನುಕೂಲತೆಗಾಗಿ " ಕರ್ನಾಟಕ ನಿಲಯಂ " ಮಾಡಿದ್ದಾರೆ. ಬೆಂಗಳೂರಲ್ಲಿ ಇದೀಗ ಬಸವ ಭವನ ಕಟ್ಟಡದ ನಾಲ್ಕು ಅಂತಸ್ತುಗಳ ಕಾರ್ಯ ಪೂರೈಸಿದ್ದು ಇನ್ನು ಎರಡು ಅಂತಸ್ತುಗಳನ್ನು ನಿರ್ಮಿಸುವ ಸಂಕಲ್ಪ ಅವರದಾಗಿದೆ. ಶರಣ ತತ್ವ ಪ್ರಚಾರಕ್ಕಾಗಿ " ಬಸವ ಜರ್ನಲ್ " ಹೊರಡಿಸುವ ಹೆಗ್ಗುರಿಯನ್ನು ಅವರು ಇರಿಸಿಕೊಂಡಿದ್ದಾರೆ.

ಸ್ವಾತಂತ್ರ್ಯೋತ್ಸವದ ರಜತೋತ್ಸವ; ಶ್ರೀ ಅರವಿಂದರ ಶತಾಬ್ದಿ ಹಾಗೂ ರಾಜ್ಯಕ್ಕೆ ಕರ್ನಾಟಕ ನಾಮಕರಣವಾದ ಸಂತೋಷದ ಸಂದರ್ಭದಲ್ಲಿ ಶ್ರೀ ಜತ್ತಿಯವರಿಗೆ ಅರವತ್ತು ವರ್ಷಗಳು ತುಂಬಿದ್ದು ಒಂದು ಯೋಗಾಯೋಗವೇ ಎಂದು ಹೇಳಬಹುದು. ಶ್ರೀ ಅರವಿಂದಾಶ್ರಮದ ಪೂಜ್ಯ ಮಾತಾಜಿಯವರ ವಿಶೇಷ ಕೃಪೆ ಪಡೆದು ಶ್ರೀ ಜತ್ತಿಯವರು " ಜೀವನದ ಕೊನೆಯ ಉಸಿರಿನ ವರೆಗೂ ದೇಶ ಮತ್ತು ಜನ ಸೇವೆ ಮಾಡುವುದೇ ನನ್ನ ಜೀವನದ ಗುರಿ " ಎಂದು ಕನ್ನಡಮ್ಮನ ಹೆಮ್ಮೆಯ ಈ ಪುತ್ರ ಸಂದರ್ಶನದ ಕೊನೆಗೆ ನುಡಿದಾಗ ನಾನು ಅನಂತ ಕೃತಜ್ಞತೆಗಳನ್ನು ಸಲ್ಲಿಸಿದೆ. " ಈ ಕರ್ನಾಟಕದ ರತ್ನ ಭಾರತ ರತ್ನವಾಗಲಿ " ಎಂದು ಮನಸಿನಲ್ಲಿಯೇ ಹಾರೈಸಿದೆ.

ನಂತರ ಓರಿಸಾದ ರಾಜ್ಯಪಾಲರಾದರು. ಸಮಸ್ಯೆಗಳ ಬೀಡಾದ ಈ ರಾಜ್ಯದಲ್ಲಿ ಪುಟಕ್ಕಿಟ್ಟ ಚಿನ್ನದಂತೆ ಹೊರಬಂದರು. ಇಂದು ಅವರು ಭಾರತದ ಉಪರಾಷ್ಟ್ರಪತಿ. ಕರ್ನಾಟಕದ ಕೀರ್ತಿ ಔನ್ನತ್ಯಕ್ಕೇರಿಸಿದ ಪ್ರಚಂಡ ವಾಮನ ಶಕ್ತಿ ಇಲ್ಲಿಯೂ ಜಯ ಪಡೆದು ಭಾರತದ ಪರಮೋಚ್ಚ ರಾಷ್ಟ್ರಪತಿ ಹುದ್ದೆ ಅಲಂಕರಿಸಲೆಂಬುದು ಅಖಿಲ ಕನ್ನಡಿಗರ ಶುಭ ಹಾರೈಕೆ.



# ಅಂತರಂಗದ ಅರಿವಿನ ಬೆಳಗು – ವಿಭೂತಿ

● ಟಿ. ಎನ್. ಮಲ್ಲಪ್ಪ
ಹೈಕೋರ್ಟ ನಿವೃತ್ತ ನ್ಯಾಯಾಧೀಶರು.

● [ ಹೈಕೋರ್ಟಿನ ನ್ಯಾಯಾಧೀಶ ಪದವೂ, ವೇದ ವೇದಾಂತ ವಿದ್ಯಾ ವಾಚಸ್ಪತಿ ಪ್ರಶಸ್ತಿಯೂ ಒಂದೇ ಕಡೆ ಶೋಭಿಸುತ್ತಿರುವುದು ಅಪೂರ್ವ ದೃಶ್ಯವೆಂದೇ ಹೇಳಬಹುದು. ಶ್ರೀ ಟಿ. ಎನ್. ಮಲ್ಲಪ್ಪ ಅವರು ಕಾನೂನು ಅಧ್ಯಯನಗಳ ಮಧ್ಯದಲ್ಲಿಯೂ ವೇದೋಪನಿಷತ್ತುಗಳ ಆಳವಾದ ಅಭ್ಯಾಸ ಮಾಡಿದವರು. ಬಸವ ಸಮಿತಿಯ ನಿರ್ಮಾಣದಲ್ಲಿ ಶ್ರೀ ಜತ್ತಿ ಅವರಿಗೆ ಬೆಂಬಲವಾಗಿ ನಿಂತು ಸಹಕಾರ ನೀಡಿದ್ದಾರೆ. — ಸಂ. ]

ನಾನು ಮಾನ್ಯ ಜತ್ತಿಯವರನ್ನು ಮೊದಲು ನೋಡಿದುದು ಸ್ನೇಹಿತರೊಬ್ಬರ ಮನೆಯಲ್ಲಿ. ಆಗ ತಾನೆ ಅವರು ಬೆಂಗಳೂರಿಗೆ ಬಂದ ಕಾಲ; ಉತ್ತರ ಕರ್ನಾಟಕದವರೂ ಮೈಸೂರಿನವರೂ ಒಬ್ಬರನ್ನೊಬ್ಬರು ಪರಿಚಯ ಮಾಡಿಕೊಂಡು ಸ್ನೇಹ ಬೆಳೆಸಲು ಆತುರವಾಗಿದ್ದ ಕಾಲವದು. ಆಹ್ವಾನಿತರು ಬರುತ್ತಲೇ ಇದ್ದರು; ಭೋಜನಕ್ಕೆ ಕೂರಲು ಇನ್ನೂ ಅವಕಾಶವಿದ್ದಿತು. ಒಬ್ಬರನ್ನೊಬ್ಬರು ಪರಿಚಯ ಮಾಡಿಕೊಂಡೆವು. ನನ್ನ ವಿಷಯವನ್ನೆಲ್ಲ ಹೇಳಿದೆ, ಅವರ ವಿಷಯವನ್ನು ತಿಳಿದುಕೊಂಡೆ. ಅಂದು ನಾವಿಬ್ಬರೂ ಒಂದು ಕಡೆ ಕುಳಿತು ವಿಶ್ವಾಸ ಬೆಳೆಸಿಕೊಂಡುದು ನನ್ನ ಸುಯೋಗ; ಅಂದಿನಿಂದ ಆರಂಭವಾಗಿ ಬಸವಸಮಿತಿಯ ರಚನೆಯ ಕಾಲದಲ್ಲಿ ಬೆಳೆದು ಬಂದು ಇಂದಿವರೆಗೂ ಉಳಿದು ನಿಂದಿರುವ ಸ್ನೇಹದ ತಳಹದಿ ಅಂದು ರಚಿತವಾಯಿತು.

ಜತ್ತಿಯವರಲ್ಲಿ ಮೊದಲು ನಾನು ಕಂಡುದು ಅವರ ಹೃದಯದ ಹಿರಿಮೆಯನ್ನು ಹೊರಸೂಸುವ ವಿನಯ; ಅವರ ಅಂತರಂಗದ ಅರವಿನ ಬೆಳಗನ್ನು ಬಹಿರಂಗ ಗೊಳಿಸುತ್ತಿದ್ದ ಅವರ ಫಾಲದಲ್ಲಿ ಕಳೆಗೊಂಡಿದ್ದ ಮೂರೆಳೆಯ ವಿಭೂತಿ. ವೇಷಭೂಷಣದಲ್ಲಿ ಸರಳತೆ; ಮಾತು ಕಥೆಗಳಲ್ಲಿ ಸರಳತೆ; ನಡೆಯಂತೆ ನುಡಿಯಲ್ಲಿಯೂ ಸರಳತೆ; ಸರಳತೆಯೇ ಮೂರ್ತಿವೆತ್ತಂತಿದ್ದರು ಶ್ರೀ ಜತ್ತಿ.

ಸರಸ ಸಜ್ಜನಿಕೆ, ಸಭ್ಯತೆಗಳು ಚಿಕ್ಕದಾದ ಮೂರ್ತಿಯನ್ನು ಉನ್ನತಮಟ್ಟಕ್ಕೇರಿಸಿದ್ದವು. ಸರಳತೆ, ಸೌಜನ್ಯ, ನಿರಾಡಂಬರಗಳು ಅವರಿಗೆ ಭೂಷಣಪ್ರಾಯವಾಗಿದ್ದವು. ಈ ಎಲ್ಲ ಗುಣಗಳೂ ಇಂದೂ ಅವರಲ್ಲಿ ಉಳಿದುಬಂದಿವೆ. ಅವರಿಗೆ ಪರಿಚಯವಾಗಿದ್ದವರನ್ನು ಆಪ್ತರನ್ನಾಗಿ ಮಾಡಿದವು ಈ ಗುಣಗಳು; ಶತ್ರುಗಳನ್ನು ಮಿತ್ರರನ್ನಾಗಿ ಮಾಡಿದವು; ಅಡ್ಡವಾಗಿ ಬಂದ ತೊಡರು ತೊಡಕುಗಳನ್ನು ಸರಳವಾಗಿ ಬಿಡಿಸಲು ಈ ಗುಣಗಳು ಸಹಾಯವಾದವು. ಮಂತ್ರಿ ಪದವಿಗೇರಿಸಿದವು. ಮುಖ್ಯಮಂತ್ರಿಯನ್ನಾಗಿ ಮಾಡಿದವು; ಲೆಫ್ಟಿನೆಂಟ್ ಗೌರ್ನರ್ ಮತ್ತು ಉಪರಾಷ್ಟ್ರಪತಿ ಪದವಿಗೊಯ್ದು ಆ ಪದವಿಗಳಿಗೆ ಜತ್ತಿಯವರನ್ನು ಭೂಷಣಪ್ರಾಯರನ್ನಾಗಿ ಮಾಡಿದವು ಈ ಗುಣಗಳೇ. ಈ ಎಲ್ಲ ಗುಣಗಳಿಂದ ಮಾನ್ಯ ಜತ್ತಿಯವರು ರಾಷ್ಟ್ರಪತಿ ಪದವಿಗೇರುವ ಕನಸನ್ನು ಕರ್ನಾಟಕದ ಜನರು ಕಾಣುತ್ತಿದ್ದಾರೆ.

## ದಾರ್ಢ್ಯ

ಜತ್ತಿಯವರ ವಿನಯ ದುರ್ಬಲತೆಯ ಗುರುತಲ್ಲ. ಅವರ ನಡೆ—ನುಡಿಗಳು ಮನೋದಾರ್ಢ್ಯದಿಂದ ಕೂಡಿದವುಗಳಾಗಿವೆ. ಅವರ ಮಾತಿನಲ್ಲಿ ಎಷ್ಟು ವಿನಯವಿದೆಯೋ ಅಷ್ಟೇ ಅದು ಖಚಿತವಾದುದು. ಅವರು 'ಆಗಲಿ' ಎನ್ನುವುದರಲ್ಲಿ ಎಷ್ಟು ವಿನಯವಿದೆಯೋ 'ಇಲ್ಲ'ವೆನ್ನುವುದರಲ್ಲಿ ಅಷ್ಟೇ ದಾರ್ಢ್ಯವುಂಟು. ಅವರಿಂದ ಸಹಾಯವನ್ನು ಬೇಡಿದವರಿಗೆ ತಮ್ಮಿಂದ ಸಾಧ್ಯವಾದ ಸಹಾಯವನ್ನು ಶಕ್ತಿಮೀರಿ ಮಾಡಿದ್ದಾರೆ. ಅದು ಸಾಧ್ಯವಾಗದಾಗ ಅದು ಏಕೆ ಸಾಧ್ಯವಾಗುವುದಿಲ್ಲವೆಂಬದನ್ನು ತಿಳಿಸಿ ಅದು 'ಸಾಧ್ಯವಿಲ್ಲ'ವೆಂದು ಖಚಿತವಾಗಿ ಹೇಳಿದ್ದಾರೆ. 'ಆಗಲಿ ನೋಡೋಣ' ಎಂದು ಬರಿಯ ಮಾತುಗಳಿಂದ ಮುಂದೆ ತಳ್ಳುವ ಸ್ವಭಾವ ಅವರದಲ್ಲ. ಅವರ ಬಳಿಗೆ ಬಂದವರು, ಅವರಿಂದ ಸಹಾಯವಾಗಲೀ ಆಗದಿರಲಿ, ಅಸಮಾಧಾನಪಡದೆ ಅವರ ನಡತೆಗೆ ಮನಸಾರೆ ಮೆಚ್ಚಿಕೊಂಡು ಹೋಗಿದ್ದಾರೆ. " ಅಯ್ಯಾ ಎಂದೊಡೆ ಸ್ವರ್ಗ. ಎಲವೋ ಎಂದರೆ ನರಕ "ವೆಂಬ ಬಸವೇಶ್ವರರ ವಚನವನ್ನು ಅವರು ಮೆಚ್ಚಿಕೊಂಡಿರುವರು ಮಾತ್ರವಲ್ಲ ಅವರು ನಡೆ ನುಡಿಯಲ್ಲಿ ಅದನ್ನು ತಂದಿದ್ದಾರೆ. " ಸತ್ಯಮೇವ ಜಯತೆ ನಾನೃತಂ " ಎಂಬುದರ ತಿರುಳನ್ನು ಮನಗಂಡಿದ್ದಾರೆ. "ನುಡಿದರೆ ಮುತ್ತಿನ ಹಾರದಂತಿರಬೇಕು; ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು; ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು " ಮೇಲಾಗಿ " ನುಡಿದರೆ ಲಿಂಗ ಮೆಚ್ಚಿ ಅಹುದೆನ್ನಬೇಕು " ಎಂಬುದರ ಮರ್ಮವು ಅವರಿಗೆ ಮನವರಿಕೆಯಾಗಿ ಈ ಅರಿವು ಆಚರಣೆಯಲ್ಲಿ ಪರಿಣಮಿಸಿದೆ.

ಜತ್ತಿಯವರು ಮುಂದಿಯ ಸೇವೆಯಲ್ಲಿ ಮನೆಯನ್ನು ಮರೆತವರಲ್ಲ; ಮನೆಗೆ ಮಾರಿ ಪರರಿಗೆ ಉಪಕಾರಿಯೆನಿಸಿಕೊಳ್ಳಲಿಲ್ಲ. ಅವರು ಎಂ. ಎ. ಓದುತ್ತಿದ್ದ ಕಾಲದಲ್ಲಿ ಅವರ ತಂದೆಯವರು ತೀರಿಕೊಂಡಾಗ ಅವರು ಓದುವುದನ್ನು ಮೂರು ನಾಲ್ಕು ವರ್ಷ ಕಾಲ ನಿಲ್ಲಿಸಿ ಮನೆಯ ಆಡಳಿತವನ್ನು ವಹಿಸಿಕೊಂಡರು; ಅದು ಸುಧಾರಿಸಿದ ಮೇಲೆ ಲಾ ಪದವೀಧರರಾಗಿ ಬಿಜಾಪುರದಲ್ಲಿ ಲಾಯರಾಗಿರಬಹುದಾಗಿದ್ದರೂ ಆ ಆಶೆಯನ್ನು ಬಿಟ್ಟು ತಾಯಿಯ ಅಪೇಕ್ಷೆಯಂತೆ ತಾಯಿಗೆ ನೆರವಾಗಲು ತಮ್ಮ ಊರಿಗೆ ಸಮೀಪವಾದ ಜಮಖಂಡಿಯಲ್ಲಿಯೇ ಲಾಯರಾದರು. ಅಲ್ಲಿನ ಪ್ರಜಾಪರಿಷತ್ತಿನ ಕಾರ್ಯದರ್ಶಿಯಾಗಿ ದುಡಿದು ಜನಪ್ರಿಯರಾದರು. ಸಾವಳಗಿ ಕ್ಷೇತ್ರದಿಂದ ಚುನಾಯಿತರಾಗಿ ಜಮಖಂಡಿ ಸಂಸ್ಥಾನದಲ್ಲಿ ಮುಖ್ಯಮಂತ್ರಿಯಾದರು. ಜಮಖಂಡಿಯು ಬೊಂಬಾಯಿ ಪ್ರಾಂತದಲ್ಲಿ ವಿಲೀನಗೊಂಡ ಮೇಲೆ ೧೯೪೯ ರಲ್ಲಿ ಬೊಂಬಾಯಿ ವಿಧಾನ ಸಭಾ ಸದಸರಾಗಿ ನೇಮಕಗೊಂಡರು. ಮುಂದೆ ೧೯೫೨ ರಲ್ಲಿ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿ ಮೊರಾರ್ಜಿ ದೇಸಾಯಿಯವರ ಮಂತ್ರಿಮಂಡಲದಲ್ಲಿ ಉಪಮಂತ್ರಿಯಾದರು. ತದನಂತರ ವಿಶಾಲ ಕರ್ನಾಟಕದಲ್ಲಿ ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿಯೂ ಯಶಸ್ಸನ್ನು ಗಳಿಸಿದರು. ಮುಂದೆ ಪಾಂಡಿಚೆರಿಯಲ್ಲಿ ಲೆಫ್ಟಿನಂಟ್ ಗೌರ್ನರ್ ಆದಾಗಲೂ ಆ ಮುಂದೆ ಒರಿಸ್ಸದ ಗೌರ್ನರ್ ಆದಾಗಲೂ ಅವರು ತೋರಿಸಿದ ಚಾಣಾಕ್ಷತನ – ದಕ್ಷತೆಗಳು ಅವರಿಗೆ ರಾಷ್ಟ್ರದ ಉಪರಾಷ್ಟ್ರಪತಿಯಾಗಲು ಸಹಾಯ ಮಾಡಿದವು. ಹೀಗೆ ಮುಂದುವರೆಯುವುದಕ್ಕೆ ಜತ್ತಿಯವರಲ್ಲಿ ನೆಲೆಸಿ ಬೆಳೆದು ಬಂದ ಪ್ರತಿಭೆ – ಪ್ರಮಾಣಿಕತೆ – ದಕ್ಷತೆಗಳೇ ಕಾರಣವಾಗಿವೆ.

## ಚಾಣಾಕ್ಷತನ

ಅವರು ಹಿರಿಮೆ ಬಂದಾಗ ಹಿಗ್ಗಿದವರಲ್ಲ; ಕಷ್ಟದಲ್ಲಿ ಕುಗ್ಗಿದವರಲ್ಲ. ಎದುರು ಬಿದ್ದವರನ್ನು, ಅವರಂತೆ ಹೋಗಿ ತಮ್ಮಂತೆ ತಿರುಗಿಸಿಕೊಳ್ಳುವ ಚಾಣಾಕ್ಷತನ ಅವರಲ್ಲಿದೆ. ಅವರ ಸಾಮಾಜಿಕ, ಸಾಂಸ್ಕೃತಿಕ ಸೇವೆ ಸಾರ್ಥಕವಾದುದು; ರಾಜಕೀಯ ಸೇವೆ ರಂಜನೀಯವಾದುದು. ಧಾರ್ಮಿಕ ಕ್ಷೇತ್ರದಲ್ಲಿ ಅವರ ಸೇವೆ ಅಸಾಧಾರಣವಾದುದು; ಅವರು ಸರ್ವಧರ್ಮ ಸಮನ್ವಯ ದೃಷ್ಟಿಯುಳ್ಳವರು. ಶೈವರಾಗಲಿ, ವೈಷ್ಣವರಾಗಲಿ, ಜೈನರಾಗಲಿ, ಬೌದ್ಧರಾಗಲಿ, ಮಹಮದೀಯರೇ ಆಗಲಿ ಎಲ್ಲ ಮತದವರೂ ಅವರ ಧರ್ಮ ಸಮ್ಮೇಳನಗಳನ್ನು ಉದ್ಘಾಟಿಸಲು ಜತ್ತಿಯವರನ್ನು ಆರಿಸಿಕೊಳ್ಳುತ್ತಾರೆ. ಎಲ್ಲ ಧರ್ಮಗಳಲ್ಲಿಯೂ ಇರುವ ಒಳ್ಳಿತಾದುದನ್ನು ಒತ್ತಿ ಹೇಳಿ, ಸಮನ್ವಯ ದೃಷ್ಟಿಯನ್ನು ಉಂಟುಮಾಡಿ ಧಾರ್ಮಿಕ

ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ. ತಾವು ಜಾತ್ಯಾತೀತರೆಂಬುದನ್ನು ತೋರಿಸಿ ಕೊಳ್ಳಲು ತಾನು ಯಾವ ಜಾತಿಯವನೂ ಅಲ್ಲವೆನ್ನುವಂತಹ ಕೆಲವು ರಾಜ ಕಾರಣಿಗಳಂಥವರಲ್ಲ ಜತ್ತಿಯವರು; ಅವರ ನಿಷ್ಠೆ ವೀರಶೈವ ಧರ್ಮದಲ್ಲಿ ಅಪಾರವಾದುದು. ಆದರೂ ಅದು ಇತರ ಧರ್ಮಗಳಲ್ಲಿ ಅವರಿಗಿರುವ ಪ್ರೀತಿಗೆ ಅಡ್ಡವಾಗಿಲ್ಲ. ಬಸವೇಶ್ವರನಿಗೆ ಅವನ ಮಂತ್ರಿ ಪದವಿಯು ಅವನ ಧಾರ್ಮಿಕ ಜೀವನಕ್ಕೆ ಹೇಗೆ ಅಡ್ಡಬಂದಿರಲಿಲ್ಲವೋ ಹಾಗೆಯೇ ಜತ್ತಿಯವರ ರಾಜಕೀಯ ಅವರ ಧಾರ್ಮಿಕ ಜೀವನಕ್ಕೆ ಅಡ್ಡ ಬಂದಿಲ್ಲ. ಅವರ ಧಾರ್ಮಿಕ ಸೇವೆಗೆ ಕಿರೀಟ ಪ್ರಾಯವಾದುದು ಅವರು ಕಟ್ಟಿದ ಬಸವಸಮಿತಿ; ಅದಿರುವ ಬಸವ ಸದನ ಆ ಕಿರೀಟದಲ್ಲಿನ ರತ್ನ.

## ದೇವರೆಂದರೇನು ?

ಜತ್ತಿಯವರ ವಿನಯ ವಿದ್ಯಾಜನಿತವಾದುದು. ನನ್ನನ್ನು ಪಂಡಿತನಂತೆ ಕಂಡಿರುವರು. ನಾನಾ ಭಾಷೆಗಳಿಗೆ ಭಾಷಾಂತರವಾದ ನೂರೆಂಟು ವಚನ ಗಳನ್ನು ಆರಿಸುವುದರಲ್ಲಿ ಬಸವಸಮಿತಿಯ ಸಂವಿಧಾನವನ್ನು ರೂಪಿಸುವುದ ರಲ್ಲಿ ಬಸವಸಮಿತಿಯ ಕಾರ್ಯ ಕಲಾಪಗಳಲ್ಲೆಲ್ಲ ನನ್ನ ಸಹಕಾರವನ್ನು ಪಡೆದಿದ್ದಾರೆ; ಆದುದರಿಂದ ಬಸವಸಮಿತಿಗಾಗಿ ಅವರ ಅಪಾರ ದುಡಿಮೆ ನನಗೆ ಗೊತ್ತು. ಧಾರ್ಮಿಕ ವಿಷಯಗಳಲ್ಲಿ ಸಂದೇಹ ಬಂದಾಗ ನನ್ನೊಡನೆ ಆಲೋ ಚಿಸಿದುದುಂಟು. ಆದರೆ ಆ ವಿಷಯಗಳನ್ನು ಚರ್ಚಿಸುವಾಗ ಅವರು ತೋರಿ ಸುತ್ತಿದ್ದ ಪ್ರತಿಭೆ ನನಗೆ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ನನ್ನಂತಹ ಸಾಮಾನ್ಯನಿಂದ ಹಿಡಿದು ಶೃಂಗೇರಿ ಗುರುಗಳಂಥವರೊಡನೆ ಧಾರ್ಮಿಕ ವಿಷಯವಾಗಿ ಮಾತನಾಡುವುದು ಅವರ ವೈಶಿಷ್ಟ್ಯ. ಜನಕನು ಯಾಜ್ಞ ವಲ್ಕ್ಯ ಋಷಿಯನ್ನು ಕೇಳುತ್ತಿದ್ದಂತಹ ಪ್ರಶ್ನೆ, ಅವರನ್ನು ಅತಿಯಾಗಿ ಪ್ರೀತಿಸುತ್ತಿದ್ದ ಅರವಿಂದಾಶ್ರಮದ ಮಾತೆಯವರನ್ನೂ ಅವರು ಕೇಳಿದುದು— ದೇವರೆಂದರೇನು ? ಎಂಬುದೇ ಆ ಪ್ರಶ್ನೆ. ಆಧ್ಯಾತ್ಮ ಜೀವಿಗಳು ಸಂಗ್ರ ಹಿಸಬೇಕಾದ ಅವರ ಉತ್ತರ ಹೀಗಿದೆ — "ಮಾನವನು ಯಾವುದನ್ನು ಪಡೆ ಯಲು ಪ್ರಯತ್ನಿಸಬೇಕೋ ಅಂತಹ ಪರಿಪೂರ್ಣತೆಯೇ ದೇವರು". ಇದಕ್ಕಿಂ ತಲೂ ಹೆಚ್ಚಾಗಿ ಉಪನಿಷತ್ಕಾರರು ಹೆಚ್ಚಿಗೆ ಏನೂ ಹೇಳಿಲ್ಲ. ಅವರು ಹೇಳಿರು ವದು ಇದೇ.

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೇ !
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ !!
ಓಂ ಶಾಂತಿಃ ಶಾಂತಿಃ ಶಾಂತಿಃ

# ಜಿತೇಂದ್ರಿಯರಾದ ಶ್ರೀ ಜತ್ತಿ ಅವರು

● ಕೋ. ಚೆನ್ನಬಸಪ್ಪ

● [ ಶ್ರೀ ಕೊ. ಚನ್ನಬಸಪ್ಪ ಅವರು "ತೂಗುವ ತ್ರಾಸು ಕಟ್ಟಳೆ" ಕೈಯಲ್ಲಿ ಹಿಡಿದ ನ್ಯಾಯಧೀಶರು. ತಮ್ಮ ಅಭಿಪ್ರಾಯಗಳಿಗೆ ಬೆಲೆ ಇರುತ್ತದೆಂಬುದನ್ನು ಕಡ್ಡಾಯವಾಗಿಸಿಕೊಂಡವರು. ವಿದ್ಯಾರ್ಥಿದೆಸೆಯಿಂದಲೇ ಉತ್ತಮ ಲೇಖಕರೆನಿಸಿದ ಅವರು ವಕೀಲ ವೃತ್ತಿಯನ್ನಾರಂಭಿಸಿದ ಬಳಿಕವೂ ಲೇಖನ ಕಲೆಯನ್ನು ಕಡೆಗಣಿಸಿರಲಿಲ್ಲ. 'ರೈತ' ಪತ್ರಿಕೆ ಸಂಪಾದಕರಾಗಿ ನಾಡ ಜಾಗೃತಿಯನ್ನು ಮೂಡಿಸಲು ಹೆಣಗಿದರು. ನ್ಯಾಯಧೀಶರಾದ ಬಳಿಕವೂ ಅದೇ ನಿಷ್ಠುರತೆಯನ್ನು ಅದೇ ಸತ್ಯ ಪಕ್ಷಪಾತವನ್ನೂ ಮುಂದುವರಿಸಿಕೊಂಡು ಬಂದಿದ್ದಾರೆ. ನ್ಯಾಯಾಧೀಶರಿಗೇಕೆ ಇತರ ಉಸಾಬರಿ ಎಂದು ಅವರು ಅಲಿಪ್ತರಾಗದೆ ಇದ್ದುದು ನಿಜವಾಗಿಯೂ ಅಭಿನಂದನೀಯವಾಗಿದೆ. – ಸಂ. ]

ಆಂಧ್ರ ಪ್ರದೇಶದಲ್ಲಿ ಕೊಂಡಾ ವೆಂಕಟಪ್ಪಯ್ಯ ಎಂಬ ದೊಡ್ಡ ದೇಶ ಭಕ್ತರಿದ್ದರು. ಅವರನ್ನು "ದೇಶಭಕ್ತ ಕೊಂಡಾ ವೆಂಕಟಪ್ಪಯ್ಯ" ಎಂದೇ ಕರೆಯುತ್ತಿದ್ದರು. ಅವರು ಮಹಾತ್ಮಾ ಗಾಂಧಿಯ ಪರಮ ಶಿಷ್ಯರು. ಅವರ ಬಗ್ಗೆ ಗಾಂಧೀಜಿಗೆ ಬಹಳ ಗೌರವ. ಆಂಧ್ರಪ್ರದೇಶದ ಯಾವುದೇ ಸಮಸ್ಯೆಯಿದ್ದರೂ ಗಾಂಧೀಜಿ ದೇಭ ಕೊಂಡಾ ಅವರ ಅಭಿಪ್ರಾಯವನ್ನು ಪಡೆದೇ ಮುಂದುವರಿಯುತ್ತಿದ್ದರು. ದೇಭ ಕೊಂಡಾಜಿ ಪ್ರಕಾಶಂ ಪಂತುಲು ಅವರಿಗಿಂತ ಬಹು ದೊಡ್ಡ ತ್ಯಾಗಿಗಳು.

೧೯೪೮ ನೇ ಜನವರಿ ಮೂರನೆ ವಾರದಲ್ಲಿ ದೇಭ ಕೊಂಡಾಜಿ ಗಾಂಧೀಜಿಗೆ ಒಂದು ಪತ್ರ ಬರೆದು, ಆಗ ಶಾಸಕರಲ್ಲಿ ಇನ್ನೂ ಅಲ್ಪ ಪ್ರಮಾಣದಲ್ಲಿ ಅಲ್ಲಿ ಇಲ್ಲಿ ಬಹು ಗುಟ್ಟಾಗಿ ನಡೆಯುತ್ತಿದ್ದ ಅಪ್ರಮಾಣಿಕ ಪ್ರವೃತ್ತಿಯನ್ನು ಬಹು ಸೂಕ್ಷ್ಮವಾಗಿ, ಬಹು ಮೃದುವಾದ ಮಾತಿನಿಂದ ವಿಶದವಾಗಿ ತಿಳಿಸಿದರು.

ಗಾಂಧೀಜಿಗೆ ಈ ಪತ್ರ ತಲುಪಿದಾಗ ತಮ್ಮ ಮೂರು ವಾರಗಳ ಉಪವಾಸ ವನ್ನು ಮುಕ್ತಾಯ ಮಾಡಿ ಆಗತಾನೆ ಹೊರಗೆ, ಪ್ರಾರ್ಥನಾಸಭೆಗೆ, ಬರುತ್ತಿದ್ದರು. ಈ ಪತ್ರ ಬಂದ ದಿನ ಪ್ರಾರ್ಥನಾ ಸಭೆ ಮುಗಿದ ಮೇಲೆ ಕೊಂಡಾ ವೆಂಕಟಪ್ಪನವರು ಬರೆದ ಪತ್ರದ ಸುದ್ದಿಯನ್ನು ಬಹಿರಂಗ ಪಡಿಸಿ ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದರು! ಅದು ಮರುದಿನ ದೇಶದಾದ್ಯಂತ ಭಯಂಕರ ಸುದ್ದಿಯಾಯಿತು. ವಿದೇಶಿಗಳ ಪತ್ರಿಕೆಗಳಲ್ಲೂ ಸುದ್ದಿಯಾಯಿತು! ಆದರೆ ಈಗ ಗಾಂಧೀಜಿ ಇದ್ದಿದ್ದರೆ?

## ವಿಶಾಲನದಿ

೧೯೪೭ ರಲ್ಲಿ ದೇಭ ಕೊಂಡಾಜಿ ಕಂಡ, ಆ ಅಲ್ಪ ಪ್ರಮಾಣದ ಅಪ್ರಮಾಣಿಕತನ ಬಹುಶಃ ನದಿ ಹುಟ್ಟುವಾಗ ತೊಟ್ಟಿಕ್ಕುವ ಹನಿ ರೂಪದಲ್ಲಿತ್ತು, ಅದು ೧೯೬೩ ರಲ್ಲಿ ದಾಮೋದರಂ ಸಂಜೀವಯ್ಯನವರು ಕಾಂಗ್ರೆಸ್ ಅಧ್ಯಕ್ಷರಾಗುವ ಹೊತ್ತಿಗೆ ವಿಶಾಲವಾದ ನದಿಯಂತೆ ವಿಜೃಂಭಿಸುತ್ತಿತ್ತು. ಅದನ್ನು ಕಂಡು ಸಂಜೀವಯ್ಯನವರು ನಿನ್ನೆ ಮೊನ್ನೆ ಪಾಪರ್ ಆಗಿದ್ದವರು ಇಂದು ಲಕ್ಷಾಧಿಕಾರಿಗಳಾಗಿದ್ದಾರೆ. ಇದು ಹೇಗಾಯಿತು? ಎಂದಾಗ ಅವರ ಧಿಟ್ಟ ಘೋಷಣೆಗಾಗಿ ಎಲ್ಲರೂ ಚಪ್ಪಾಳೆ ತಟ್ಟಿ, ಅಭಿನಂದಿಸಿ, ಮೆಚ್ಚುಗೆ ವ್ಯಕ್ತ ಪಡಿಸಿದರು!

೧೯೬೩ ರಿಂದ ೧೯೭೫ ರ ವರೆಗೆ ಆ ಪ್ರವಾಹ ಯಾವ ರೂಪ ತಾಳಿದೆ ಎಂಬುದನ್ನು ಯಾರೂ ಹೇಳುವುದೇ ಬೇಡ. ಕೈ ಮೇಲಿನ ಹುಣ್ಣಿಗೆ ಕನ್ನಡಿ ಹಿಡಿಯುವ ಕೆಲಸ ಮಾಡುವದು ಕಡು ಮೂರ್ಖತನವೇ ಸರಿ. ಬತ್ತಲೆಯಿರುವವರ ಊರಲ್ಲಿ ಪುಟ್ಟಗೋಸಿ ಹಾಕಿಕೊಂಡವನನ್ನು ನೋಡಿ ನಕ್ಕರಂತೆ! ಬಟ್ಟೆ ಉಡುವುದೇ ನಾಚಿಕೆ ಪಡಬೇಕಾದ ಪರಿಸ್ಥಿತಿ ಈಗ ಬಂದಿದೆ.

ಇದು ಈ ರೀತಿ ಇರುತ್ತಿರಲಾಗಿ, ಸಹಜವಾಗಿ ರಾಜಕೀಯ ಕ್ಷೇತ್ರದಲ್ಲಿ ಯಾರಾದರೂ ಗಾಂಧೀಜಿಗೆ ಪ್ರಿಯವಾಗುವಂತೆ ಬಾಳುವ "ಕಚ್ಚೆ, ಕೈ, ಬಾಯಿಗಳು ತನ್ನಿಚ್ಛೆಯಲ್ಲಿರುವ" ಪುಣ್ಯಾತ್ಮರು ಯಾರಾದರೂ ಸಿಕ್ಕಾರೆಯೇ ಎಂದು ಪಂಜು ಹಚ್ಚಿ ಹುಡಕುವ ಮೂರ್ಖ ಸಾಹಸ ಮಾಡಿದ್ದಾದರೆ. ನಿರಾಶೆಯಿಂದ ನಿಟ್ಟುಸಿರು ಬಿಡಬೇಕಾಗುತ್ತದೆ. ಅದು ಮೊಲದ ಕೋಡಿಗಾಗಿ ಮಲೆಯಲ್ಲೆಲ್ಲ ಅಲೆದಾಡುವ ವ್ಯರ್ಥ ಪ್ರಯಾಸವೇ ಸರಿ.

ದೈವಬಲ ಇದ್ದರೆ, ಕಚ್ಚೆ ಕೈ ಬಾಯಿ ಅಂಕೆಯಲ್ಲಿದ್ದ ಒಬ್ಬಿಬ್ಬರು ಸಿಕ್ಕಾರು. ಅವರು ನಿಶ್ಚಯವಾಗಿ ಜೀವನದಲ್ಲಿ ಎಂದಿಗೂ ಯಶಸ್ಸು ಕಂಡವರಲ್ಲ. ಪ್ರಖ್ಯಾತಿ

ಯಂತೂ ದೂರದ ಮಾತು. ಆದರೆ ಅದೃಷ್ಟವಶಾತ್ ಶ್ರೀ ಬಿ. ಡಿ. ಜತ್ತಿ ಅವರಂಥವರು ಕಣ್ಣಿಗೆ ಬಿದ್ದರೆ, ರಾಜಕಾರಣಿಗಳಲ್ಲಿ ಪ್ರಾಮಾಣಿಕರನ್ನು ಕಾಣುವ ಸಾಹಸ ಯಾತ್ರೆ ಕೈ ಕೊಂಡವವರಿಗೆ ನಿಜವಾಗಿ ಇಷ್ಟಾರ್ಥಸಿದ್ಧಿ ಪಡೆದ ಸಮಾಧಾನವಾದೀತು! ಓಹೋ! ಇನ್ನು ಈ ದೇಶದಲ್ಲಿ ಕೆಲವು ರಾಜಕಾರಣಿಗಳಲ್ಲಿ ಕಿಂಚಿತ್ತಾದರೂ ಪ್ರಮಾಣಿಕತೆ ಉಳಿದಿದೆ, ಎಂಬ ನಂಬುಗೆ ಮೂಡುತ್ತದೆ. ನೀತಿಯೇ ಜೀವನದ ಬುನಾದಿಯಾಗಬೇಕೆಂದು ಬಯಸುವವರಿಗೆ ಒಂದಿಷ್ಟು ಆಸೆ ಹುಟ್ಟುತ್ತದೆ. ಯಾಕೆಂದರೆ. ಒಳ್ಳೆಯವರಲ್ಲದವರಿಂದ ಒಳ್ಳೆಯದಾಗದು ಎಂದು ನಂಬಿದ ಜನ, ಒಳ್ಳೆಯವರ ಕೈಗೆ ಅಧಿಕಾರ ಬಂದು ಒಳ್ಳೆಯದಾಗಲಿ, ದೇಶ ಬದುಕಲಿ ಎಂದು ಹಾರೈಸುವುದು ಸಹಜವಾಗಿಯೇ ಇದೆ.

## ಸಾಧನ ಶುದ್ಧಿ

ಶ್ರೀ ಬಿ. ಡಿ. ಜತ್ತಿಯವರು ಇಡೀ ಜೀವಮಾನವನ್ನು ರಾಜಕೀಯದಲ್ಲಿಯೇ ಕಳೆದಿದ್ದಾರೆ. ಸಾವಳಗಿ ಪಂಚಾಯಿತಿ ಅಧ್ಯಕ್ಷರಾಗುವುದರಿಂದ ರಾಷ್ಟ್ರದ ಉಪಾಧ್ಯಕ್ಷರಾಗುವವರೆಗೆ ಆಯುಷ್ಯದ ಬಹು ಭಾಗವನ್ನು ರಾಜಕೀಯದಲ್ಲೇ ಕಳೆದಿದ್ದಾರೆ; ಅದರಲ್ಲಿ ಯಶಸ್ವಿಯಾಗಿದ್ದಾರೆ; ಪ್ರಖ್ಯಾತರೂ ಆಗಿದ್ದಾರೆ. ಅವರು ಯಶಸ್ವಿಯಾದರೆಂಬುದು ನನಗೆ ಮುಖ್ಯವಲ್ಲ. ಹಾಗೆಂದರೆ ಅವರಿಗಿಂತಲೂ ಯಶಸ್ವಿಯಾದವರು ಇದೇ ದೇಶಲ್ಲಿದ್ದಾರೆ. ಅವರಿಗಿಂತ ಖ್ಯಾತಿವಂತರೂ ಇದ್ದಾರೆ. ಆದ್ದರಿಂದ ಯಶಸ್ಸು ಖ್ಯಾತಿ ಮುಖ್ಯವಲ್ಲ. ಆದರೆ ಅವರು ಹೇಗೆ ಯಶಸ್ವಿಯಾದರು? ಯಾವ ಸಾಧನವನ್ನು ಬಳಸಿಕೊಂಡು ಗುರಿ ತಲುಪಿದರು ಎಂಬುದು ಮುಖ್ಯ. ಈ ಮಾತು ಗಾಂಧೀಜಿಗೆ ಬಹು ಪ್ರಿಯವಾಗಿತ್ತು. ಶ್ರೀ ಜತ್ತಿಯವರು ತಮ್ಮ ಯಶಸ್ಸಿಗೆ ಬಳಸಿದ ಸಾಧನ ಸಾಧುವೆ? ಸಾಧುವಾಗಿದ್ದರೆ ಅವರಿಗೆ ನಮ್ಮ ಶರಣು. ಅಸಾಧುವಾಗಿದ್ದರೆ ಅವರೆಷ್ಟೇ ಯಶಸ್ಸು ಗಳಿಸಿದರೂ, ಖ್ಯಾತಿವಂತರಾದರೂ ಸಾಧನ ಶುದ್ಧಿ ಬೇಕೆಂಬ ಜನರಿಗೆ ಅಷ್ಟೇನು ಸಮಾಧಾನವಿಲ್ಲ. ಅವರು ಎಷ್ಟೇ ದೊಡ್ಡವರಾದರೂ ನಮಗೇನಂತೆ.

ಈ ದೃಷ್ಟಿಯಿಂದ ಶ್ರೀ ಜತ್ತಿಯವರನ್ನು ನಾನು ನೋಡುತ್ತೇನೆ. ಕನಿಷ್ಠ ಪಕ್ಷ ಹದಿನೆಂಟು ವರ್ಷಗಳಿಂದ ( ೧೯೫೭ ರಿಂದ ) ಅವರನ್ನು ನೋಡುತ್ತಿದ್ದೇನೆ. ಹದಿನೈದು ವರ್ಷಗಳಿಂದ ( ೧೯೬೦ ರಿಂದ ) ಹತ್ತಿರದಿಂದ ಗಮನಿಸಿದ್ದೇನೆ. ಕನಿಷ್ಠ ಹತ್ತು ವರ್ಷಗಳಿಂದ ಅತಿ ನಿಕಟವಾಗಿ ಪರಿಚಯ ಹೊಂದಿದ್ದೇನೆ. ಬರಹಗಾರನಿಗೆ ಸಹಜವಾದ ತೀಕ್ಷ್ಣ " ಕ್ಷ " ಕಿರಣ ದೃಷ್ಟಿಯಿಂದ ಅವರನ್ನು ನೋಡಿದ್ದೇನೆ.

ಛಾಯಾ ಚಿತ್ರ ಗ್ರಾಹಕ ಜನರ ದೇಹದ ಪ್ರತಿಬಿಂಬವನು ತೆಗೆಯುತ್ತಾನೆ. ಬರಹಗಾರ ಜನರ ಮನಸ್ಸಿನ ಚಿತ್ರ ತೆಗೆಯುತ್ತಾನೆ. ಇಂಥ ಕಣ್ಣಿನಿಂದ ಅವರನ್ನು ನೋಡಿದ್ದೇನೆ.

ಹೀಗೆ ನೋಡಿದಾಗ, ಅವರು ಸಾರ್ವಜನಿಕ ಜೀವನದಲ್ಲಿ ಕಚ್ಚೆ, ಕೈ, ಬಾಯಿಗಳನ್ನು ಸಡಿಲ ಬಿಟ್ಟ ಉದಾಹರಣೆಯನ್ನು ನಾನು ಕಾಣೆ. ಅವರ ಪರಮ ಶತ್ರುಗಳೂ, ಅವರು ತಮ್ಮ ಸ್ಥಾನವನ್ನು ವೈಯಕ್ತಿಕ ಲಾಭಕ್ಕಾಗಿ ಬಳಸಿಕೊಂಡರೆಂದು ಹೇಳುವದನ್ನು ಕೇಳಿಲ್ಲ. ಹೇಳುವವರು ಇದ್ದರು. ಆದರೆ ಅಂಥ ಉದಾಹರಣೆಗಳನ್ನು ಸಿದ್ಧಪಡಿಸಲು ಸಿದ್ಧವರಾದವರು ವಿ ರ ಳ ವೆಂ ದೇ ಹೇಳಬೇಕು. ಶ್ರೀ ಜತ್ತಿಯವರನ್ನು ಇಂದು ಗೌರವಿಸಬೇಕಾಗಿದ್ದರೆ ಅವರ ಈ ಮೂರು ಭದ್ರತೆ --- ಕಚ್ಚೆ, ಕೈ, ಬಾಯಿ--ಗಳಿಗಾಗಿ. ದೇಶದಲ್ಲಿ ಎಲ್ಲರ ಮೇಲೂ ಭ್ರಷ್ಟಾಚಾರದ ಪಟ್ಟಿಯ ಹಸುಮನ ಬಾಲಗಳು ಬೆಳೆದೇ ಬೆಳೆಯುತ್ತಿದ್ದರೂ, ಬಹು ಜಾಗರೂಕರಾದ ವಿರೋಧ ಪಕ್ಷದವರೇ ಆಗಲಿ, ಹೊಟ್ಟೆಕಿಚ್ಚಿನ ಸ್ವಪಕ್ಷದವರೇ ಆಗಲಿ, ( ಈಗ ಸ್ವಪಕ್ಷದವರೇ ಆರೋಪ ಪಟ್ಟಿಗಳ ಹೊರೆಯನ್ನು ಮೇಲಕ್ಕೆ ಹೊತ್ತು ಹಾಕುವುದು ಮಾಮೂಲು ) ಯಾರೂ ಶ್ರೀ ಜತ್ತಿಯವರ ಕಡೆಗೆ ಬೆರಳುಮಾಡಿ ತೋರಿಸಿದ್ದನ್ನು ಕಾಣೆವು. ಅವರೊಬ್ಬರೇ ಈ ಕಳಂಕದಿಂದ ಏಕೆ ಮುಕ್ತರಾಗಬೇಕೆಂಬ ಹಠ ತೊಟ್ಟವರು ಏನಾದರೂ ಕಪ್ಪು ಬಳಿದರೆ ಆ ಮಾತು ಬೇರೆ.

## ಸಾಧುವೇ ? ಅಸಾಧುವೇ ?

ಶ್ರೀ ಜತ್ತಿಯವರು ರಾಜಕೀಯದಲ್ಲಿ ಯಶಸ್ವಿಯಾದರು, ಸಮ. ಆದರೆ ಹೇಗಾದರು ? ಯಾರ ಕುತ್ತಿಗೆಯನ್ನಾದರೂ ಕೊಯ್ದರೇ ? ಯಾರ ಕಾಲನ್ನಾದರೂ ಜಗ್ಗಿ ಎಳೆದರೇ ? ಯಾರ ಕೈಯನ್ನಾದರೂ ಬೆಚ್ಚಗೆ ಮಾಡಿದರೇ ? ಯಾರಿಗಾದರೂ ತಮ್ಮ ಸ್ವಾಭಿಮಾನವನ್ನು ಮಾರಿಕೊಂಡರೇ ? ನಂಬಿದ ತತ್ವಗಳಿಗೆ ತಿಲಾಂಜಲಿ ಬಿಟ್ಟರೇ ? ಅವರನ್ನು ಬಲ್ಲವರು ಯಾರೂ ಈ ಪ್ರಶ್ನೆಗಳಿಗೆ ಅವರ ವಿರುದ್ಧವಾಗಿ ಉತ್ತರಗಳನ್ನು ಕೊಡಲಾರರು. ರಾಜಕೀಯದಲ್ಲಿ ಆಟದ ನಿಯಮಗಳಿವೆ. ಆ ನಿಯಮಗಳು ಮ್ಯಾಕಿವಿಲ್ ನಿರೂಪಿಸಿದ ನಿಯಮಗಳಿಂದ ಹಿಡಿದು, ಚಾಣಕ್ಯ ರೂಪಿಸಿದ ತಂತ್ರಗಳವರೆಗೆ ನಾನಾ ವಿಧವಾಗಿವೆ. ಆ ನಿಯಮಗಳಲ್ಲಿ ಸಾಧು ಯಾವುದು ? ಅಸಾಧು ಯಾವುದು ಎಂಬುದನ್ನು ಗಮನಿಸಬೇಕು. ಯುದ್ಧದಲ್ಲಿ ರಹಸ್ಯ, ಗೋಪ್ಯ, ( Secrecy ) ಹಾಗೂ ಅನಿರೀಕ್ಷಿತ ಆಕಸ್ಮಿಕ ಧಾಳಿ ( Surprise attack ) ಸಾಧುವಾದ ಅಸ್ತ್ರಗಳೇ. ಹಾಗೆಯೇ ರಾಜಕೀಯ

ಚದುರಂಗದಾಟದಲ್ಲಿ, ಶತೃಗಳ ಮಿತ್ರುತ್ವ ಯಾಚನೆ, ಮಿತ್ರರ ಅಹಿತ ಚಿಂತನೆ, ಅಸಾಧುವಾದುದೇನೂ ಅಲ್ಲ, ಎಂಬುದಾಗಿ ಚಾಣಕ್ಯ ಹೇಳುತ್ತಾನೆ. ಇದು ನ್ಯಾಯವೇ. ಶ್ರೀ ಜತ್ತಿಯವರು ಒಂದುವೇಳೆ ಚಾಣಕ್ಯನ ಅರ್ಥಶಾಸ್ತ್ರದ ನೀತಿಯನ್ನು ಅನುಸರಿಸಿದ್ದರೆ ಅದು ಮುತ್ಸದ್ದಿತನವೇ.

## ಭಿನ್ನಾಭಿಪ್ರಾಯ

ಶ್ರೀ ಜತ್ತಿಯವರು ಶುದ್ಧ ಸಾಧನಗಳನ್ನೇ ಅವಲಂಬಿಸಿ ಯಶಸ್ವಿಯಾದರು; ಪ್ರಖ್ಯಾತರಾದರು. ಆದರೆ ಇದರಿಂದ ಈ ನಾಡಿಗೆ ಈ ದೇಶಕ್ಕೆ ಆದ ಕಲ್ಯಾಣವೇನು ? ಅದು ಮುಖ್ಯ. ಅವರು ರಾಜಕಾರಣಿಯಾಗಿ ( ಮುಖ್ಯ ಮಂತ್ರಿಗಳಾಗಿ, ಅರ್ಥಮಂತ್ರಿಗಳಾಗಿ, ಉಪರಾಜ್ಯಪಾಲರಾಗಿ, ರಾಜ್ಯಪಾಲರಾಗಿ, ಈಗ ಉಪರಾಷ್ಟ್ರಪತಿಗಳಾಗಿ ) ಏನು ಮಾಡಿದರು ? ಅದರಿಂದ ನಾಡಿಗೆ ಎಷ್ಟು ಉಪಕಾರವಾಯಿತು ? ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಆ ಭಿನ್ನಾಭಿಪ್ರಾಯದ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ರಾಜಾಜಿಯವರು ಮದ್ರಾಸ್ ಮುಖ್ಯಮಂತ್ರಿಯಾಗಿದ್ದಾಗ ಮದ್ಯಪಾನ ನಿರೋಧ ಕಾಯ್ದೆಯನ್ನು ಮೊಟ್ಟಮೊದಲು ಜಾರಿಗೆ ತಂದರು. ಅಂಥಾ ಲೋಕಕಲ್ಯಾಣಕರವಾದ ಕಾಯ್ದೆಯನ್ನು ಬಹು ಜನ ಮುಖ್ಯಮಂತ್ರಿಗಳು ಮಾಡಿಲ್ಲ. ಶ್ರೀ ನಿಜಲಿಂಗಪ್ಪನವರು ಕರ್ನಾಟಕ ರಾಜ್ಯಶಿಲ್ಪಿ ಎನಿಸಿಕೊಂಡರು. ಅಂಥ ಕಾರ್ಯಸಾಧನೆ ಮಾಡಿದವರು ದೇಶದಲ್ಲಿ ಬಹಳ ಜನರಿಲ್ಲ. ಈ ರೀತಿಯಾದ ಕಣ್ಣುಕೋರೈಸುವ ( Spectacular ) ಕಾರ್ಯವನ್ನು ಶ್ರೀ ಜತ್ತಿಯವರು ಮಾಡಿಲ್ಲ ಎಂದರೆ, ' ಇದ್ದೀತು ' ಎನ್ನಬಹುದು.

ಆದರೆ ಶ್ರೀ ಜತ್ತಿಯವರು ನಮ್ಮ ನಾಡಿನ ಇತಿಹಾಸದಲ್ಲಿ, ಬಹುಕಾಲ ಉಳಿಯುವುದಾದರೆ ಅವರು ಈ ನಾಡಿನ ಚೇತನವನ್ನು ಎಚ್ಚರಿಸುವುದರಲ್ಲಿ, ವೃದ್ಧಿಪಡಿಸುವುದರಲ್ಲಿ ಮಾಡಿದ ಕೆಲಸದಿಂದಲೇ ಹೊರತು, ಈ ರಾಜಕೀಯ ಪದವಿ–ಪ್ರತಿಷ್ಠೆಯಿಂದ ಅಲ್ಲವೆಂದು ನನ್ನ ಭಾವನೆ. ಈ ಮಾತನ್ನು ಹೇಳುವಾಗ ಅವರು ಬಸವ ಸಮಿತಿಯನ್ನು ಕಟ್ಟಿದ ಕಾರ್ಯ ನನ್ನ ಗಮನದಲ್ಲಿದೆ. ಬಸವಣ್ಣನ ಅಷ್ಟಶತಮಾನೋತ್ಸವದ ಪ್ರವರ್ತಕರಾಗಿ ಅವರು ಮಾಡಿದ ಕೆಲಸ ಚಿರಸ್ಮರಣೀಯವಾದುದೆಂದು ನಾನು ಭಾವಿಸುತ್ತೇನೆ. ಲಿಂಗಾಯಿತರ ಕರಡಿಗೆಯಲ್ಲೇ ಸಿಕ್ಕುಬಿದ್ದಿದ್ದ ಆ ಬಸವಣ್ಣನನ್ನು ಸೆರೆ ಬಿಡಿಸಿ ದೇಶ–ವಿದೇಶಗಳಲ್ಲೂ ಕಳಿಸಿಕೊಟ್ಟದ್ದು ನಿಜವಾದ ಕೆಲಸವೆಂದು ನಾನು ತಿಳಿದಿದ್ದೇನೆ ಇದಕ್ಕಿಂತ ಇನ್ನೂ ಒಳ್ಳೆಯ ಕೆಲಸವಾಗ ಬಹುದಿತ್ತು; ಆಗಬೇಕಾಗಿದೆ— ಎಂಬ ಮಾತಿನಲ್ಲಿ ಭಿನ್ನಾಭಿಪ್ರಾಯವಿಲ್ಲ.

ಆದರೆ ಈಗಳಿದ ಕೆಲಸದ ಅರ್ಥ, ವ್ಯಾಪ್ತಿ, ಸಾರ್ಥಕತೆ ಇಂದಿನ ಸನ್ನಿವೇಶದಲ್ಲಿ ಕಡಿಮೆಯಲ್ಲವೆಂದೇ ನಾನು ಬಗೆಯುತ್ತೇನೆ. ಬಸವ ಭವನ ಕಟ್ಟಿದ್ದೇ ದೊಡ್ಡ ಕೆಲಸ ಎಂದು ಭಾವಿಸುವವರಲ್ಲಿ ನಾನೊಬ್ಬನಲ್ಲ. ಅದರಿಂದ ಬಾಡಿಗೆ ಬಂದದ್ದೇ ಹೆಮ್ಮೆ ಪಡುವ ಮಾತಲ್ಲ. ಆದರೆ ಅಲ್ಲಿ ಆಗಬೇಕಾಗುವ ಕಾರ್ಯದ ಯೋಜನೆ ಯಿಂದ ಅದಕ್ಕೊಂದು ಸ್ಥಾನವುಂಟು. ಶ್ರೀ ಜತ್ತಿಯವರು, ಏನೂ ಇಲ್ಲದಿದ್ದ ಸ್ಥಳದಲ್ಲಿ ಒಂದು ಮಂದಿರವನ್ನು ಕಟ್ಟಿದ್ದಾರೆ. ಒಂದು ದೀಪ ಬೆಳಗಿಸಿದ್ದಾರೆ. ಅದನ್ನು ಪ್ರಜ್ವಲಿಸುವಂತೆ ಮಾಡುವ ಕೆಲಸವಿದೆ. ಆ ಕೆಲಸ ಮಾಡುವ ಪುಣ್ಯಾತ್ಮರಿಗೆ ಒಂದು ನೆಲೆಯಾಗಿದೆ ಬಸವ ಸಮಿತಿ; ಬಸವ ಮಂದಿರ.

## ಮಾನವ – ಅತಿಮಾನವ

ಅಷ್ಟ ಶತಮಾನೋತ್ಸವದ ಕಾಲಕ್ಕೆ ಆದದ್ದೇನು ? ಬಸವ ಸಮಿತಿ ಮಾಡುತ್ತಿರುವುದೇನು ? ಬಸವ ಕಲ್ಯಾಣದಲ್ಲಿ ಉತ್ಸವ; ಬಾಗೇವಾಡಿಯಲ್ಲಿ ಉತ್ಸವ; ಹಂಪೆ, ಉಡುತಡಿ, ಬೆಂಗಳೂರು, ದೆಹಲಿ, ನ್ಯೂಯಾರ್ಕ್, ಲಂಡನ್ .............................ಹೀಗೆ ಉತ್ಸವ ಆಯಿತೆಂಬುದೇ ದೊಡ್ಡ ಮಾತಲ್ಲ. ಆದರೆ ಆ ಉತ್ಸವ ನೆವದಲ್ಲಿ ಬಸವ ತತ್ವ ಪ್ರಚಾರವಾಯಿತೆಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತು. ಅದು ಎಷ್ಟು ಪ್ರಮಾಣದಲ್ಲಿ, ಪರಿಣಾಮಕಾರಿಯಾಗಿ ಆಗಬೇಕೋ ಅಷ್ಟು ಆಗಿಲ್ಲವೆಂಬುದು ನಿಜ. ಆಗಬೇಕಾದ ಕಾರ್ಯಕ್ಕೆ ಆಗಿರುವ ಕಾರ್ಯವನ್ನು ಹೋಲಿಸಿದರೆ ಅದು ಯಾವಾಗಲೂ ಅಲ್ಪವೇ. ಈಗ ಇರುವ ಮನುಷ್ಯ ಮುಂದೆ ಬರಬೇಕಾಗಿರುವ ಮನುಷ್ಯನೊಡನೆ ಹೋಲಿಸಿದರೆ ಇವನು ಯಾತಕ್ಕೂ ಬಾರದ ಬೋಕಿ ಎಂದೇ ಹೇಳಬಹುದು ! ಆದರೆ ಇಂದಿನ ಮಾನವ ಮುಂದಿನ ಮಾನವನ ವಿಕಾಸದ ಬೀಜವಲ್ಲವೇ ? ಅವನಿಂದಲೇ ಮುಂದಿನ ಅತಿಮಾನವ ಮೂಡಬೇಕು. ಅಂತೆಯೇ ಈಗ ನಾಟಿರುವ ಬಸವ ಸಮಿತಿಯ ಸಸಿ ಮಹಾ ವೃಕ್ಷವಾಗಿ ಬೆಳೆಯಬೇಕು. ತೆಂಗಿನ ಸಸಿ ನೋಡಿ "ಏನು ಮಹಾ !" ಎಂದರೆ ಹೇಗೆ ? ಸಸಿ ನೆಟ್ಟವನೆ ಬೆಳೆಸಿ ಕಾಯಿ ತಿನ್ನುವುದಿಲ್ಲ. ಅಂತೆಯೇ ಶ್ರೀ ಜತ್ತಿಯವರು, ಬಸವ ಸಮಿತಿಯನ್ನು ರಚಿಸಿದ, ಕಟ್ಟಿದ ಕೆಲಸವೂ ಕೂಡ.

ಬಸವಣ್ಣ ಲೋಕಕ್ಕೆ ಎಂದಿಗಿಂತಲೂ ಇಂದು ಹೆಚ್ಚು ಬೇಕಾಗಿದ್ದಾನೆ ಎಂಬ ಕಹಳೆ ಮೊಳಗಬೇಕಾಗಿದೆ. ಅದಕ್ಕೊಂದು ಮಾಧ್ಯಮ, ವಾಹನ ಬೇಕು. ಆ ಮಾಧ್ಯಮ ಬಸವ ಸಮಿತಿ. ಅದು ಸ್ವಪ್ರತಿಷ್ಠೆಯ ಸಾಧನವಾಗದೆ, ಸ್ವಹಿತ

ಸಾಧನೆಯ ರಂಗವಾಗದೆ ಬೆಳೆದರೆ ಶ್ರೀ ಜತ್ತಿ ಅವರು ಮಾಡಿದ ಈ ಕೆಲಸ ಸಾರ್ಥಕವಾಗುತ್ತದೆ. ಬಸವ ಸಮಿತಿ ಸ್ಥಾಪಿಸಿದ್ದರಿಂದ ಶ್ರೀ ಜತ್ತಿಯವರಿಗೆ ಏನು ಬಂತು ? ಅವರು ರಾಜ್ಯದ ಮುಖ್ಯಮಂತ್ರಿ ಆಗಲು ಅನುಕೂಲವಾಯಿತೆ ? ಉಪರಾಜ್ಯಪಾಲರಾಗಲು ನೆರವಾಯಿತೆ ? ರಾಜ್ಯಪಾಲರಾಗಲು ನೆರವಾಯಿತೆ ? ಬಸವ ಸಮಿತಿ ಸ್ಥಾಪಿಸಿದ ಲಾಗಾಯ್ತು ರಾಜ್ಯದ ರಾಜಕೀಯದಲ್ಲಿ ಅವರ ಸ್ಥಾನ ದಿನದಿನಕ್ಕೆ ಸಂಕುಚಿತವಾಯಿತು. ವಿಸ್ತಾರವಾದ ಕ್ಷೇತ್ರಕ್ಕೆ ಹೋಗಲು ಅದು ನಿಶ್ಚಯವಾಗಿ ನೆರವಾಗಲಿಲ್ಲ. ಆಗ ಬಸವಸಮಿತಿಯಲ್ಲಿ ಪಾಲ್ಗೊಳ್ಳುವುದು, ಬಸವನ ಉತ್ಸವ ಮಾಡುವುದು "ಜಾತ್ಯತೀತ" ತತ್ತ್ವ ಪ್ರಿಯರಿಗೆ ಜಾತಿ ಸೂಚಕ ಚಿನ್ಹೆಯಾಗಿತ್ತು ! ಆದರೂ ಶ್ರೀ ಜತ್ತಿಯವರು ದೆಹಲಿಯ ನಾಯಕರು ಏನಾದರೂ ಅಂದಾರೆಂದು ಬಸವಣ್ಣನನ್ನು ಬಿಡಲಿಲ್ಲ. ಭಸ್ಮ ಹಚ್ಚಿಕೊಂಡರೆ ಜಾತಿವಾದಿಗಳೆಂದಾರೆಂದು ಅಂಜಿ ನಡೆಯುವ ಇಂದಿನ ಯುಗದಲ್ಲಿ ಅವರು ಬಟಾ ಬಯಲಾಗಿ ನಂಬಿದಂತೆ ನಡೆದುಕೊಳ್ಳುತ್ತಾರೆ. ಇದು ಮೆಚ್ಚತಕ್ಕ ಗುಣ.

## ಪ್ರಿಯ ಪುತ್ರರು

ಶ್ರೀ ಜತ್ತಿ ಅವರು ಪಾಂಡಿಚೇರಿಗೆ ಹೋದ ಮೇಲೆ ಅವರು ತೀರಾ ಹತ್ತಿರವಾದರು. ಪಾಂಡಿಚೇರಿಗೆ ಹೋಗುವ ಮೊದಲು ಅವರನ್ನು ಕಂಡು "ಶ್ರೀ ಅರವಿಂದರು ಮತ್ತು ಅವರ ಆಶ್ರಮ" ಎಂಬ ಒಂದು ಪುಸ್ತಕವನ್ನು ಕೊಟ್ಟು "ದಯೆವಿಟ್ಟು ಶ್ರೀ ಅರವಿಂದರ ಸಮಾಧಿಗೆ ವಂದಿಸಿ, ಶ್ರೀ ಮಾತೆಯ ಆಶೀರ್ವಾದವನ್ನು ಪಡೆದು ಪ್ರಮಾಣವಚನ ಸ್ವೀಕರಿಸಿ" ಎಂದು ನಾನು ಸೂಚಿಸಿದೆ. ಅವರು ಪಾಂಡಿಚೇರಿಗೆ ಹೋದ ಮೇಲೆ ಕಾಲ್ನಡಿಗೆಯಲ್ಲಿ ಆಶ್ರಮಕ್ಕೆ ಹೋಗಿ ಸಮಾಧಿಗೆ ಮಣಿದು ಬಂದು ಪ್ರಮಾಣವಚನ ಸ್ವೀಕರಿಸಿದರು. ಅಲ್ಲಿಂದ ಅವರ ಮತ್ತು ಆಶ್ರಮದ ಸಂಪರ್ಕ ಹೆಚ್ಚಾಯಿತು. ಅವರು ಮಾತಾಜಿಯ ಪ್ರಿಯ ಪುತ್ರರಾದರು. ತಾಯಿ ಶ್ರೀ ಜತ್ತಿಯವರಲ್ಲಿ ಒಂದು ಉಪಯುಕ್ತ ಉಪಕರಣವನ್ನು ಕಂಡುಕೊಂಡರು. ಶ್ರೀ ಜತ್ತಿಯವರು ಕರ್ನಾಟಕದ ಶ್ರೀ ಅರವಿಂದ ಶಾಖೆಯನ್ನು ಕಟ್ಟಿದರು. ಪಾಂಡಿಚೇರಿಯಲ್ಲಿ ಒಂದು ಲಕ್ಷ ರೂಪಾಯಿಯ ಕರ್ನಾಟಕ ನಿಲಯ ಸ್ಥಾಪಿಸಿದರು. ಅದಕ್ಕೊಂದು ಟ್ರಸ್ಟ್ ಮಾಡಿದರು. ಪಾಂಡಿಚೇರಿಗೆ ಹೋಗುವ ಕನ್ನಡಿಗರಿಗೆ ಅಲ್ಲೊಂದು ನೆಲೆಯಾಗಿದೆ. ಶ್ರೀ ಜತ್ತಿಯವರ ಜೀವನ ಪ್ರವಾಹ ಶ್ರೀ ಅರವಿಂದ, ಮಾತಾಜಿಯ ಕೃಪೆಯಿಂದ ಬೇರೆಯ ದಿಕ್ಕನ್ನೇ ಹಿಡಿಯಿತೆಂದು ನಾನು ಭಾವಿಸುತ್ತೇನೆ. ಅವರು

ಪಾಂಡಿಚೇರಿಯಲ್ಲಿದ್ದಾಗ, ನಾನು ಆಶ್ರಮಕ್ಕೆ ಹೋದಾಗಲೆಲ್ಲ ಅವರನ್ನು ನೋಡುವ, ಮಾತನಾಡುವ ಅವಕಾಶವಿತ್ತು. ಅವರಲ್ಲಿ ಆಧ್ಯಾತ್ಮಿಕತೆ ನಿಬಿಡವಾಗುತ್ತಿದ್ದು ದನ್ನು ಪ್ರತ್ಯಕ್ಷ ಕಂಡೆ. ರಾಜಕಾರಣಿ ತತ್ವಜ್ಞಾನಿ ಆದಾಗಲೇ ಈ ಲೋಕಕ್ಕೆ ಏನಾದರೂ ಒಂದಿಷ್ಟು ಒಳಿತಾದೀತು ಎಂಬ ದಾರ್ಶನಿಕರ ಮಾತು ಸತ್ಯವಾದರೆ, ಈ ತತ್ವಜ್ಞಾನಿಯಾದ ರಾಜಕಾರಣಿಯಿಂದ ಈ ದೇಶಕ್ಕೆ ಒಳಿ ತಾದೀತು ಎಂಬ ಆಸೆ ನನ್ನದು. ಈ ನನ್ನ ಆಸೆ ಹುಸಿಯಾಗಲಾರ ದೆಂದು ನಂಬುಗೆ. ಅದಕ್ಕೆ ಆಧಾರಗಳೂ ಇವೆ. ಶ್ರೀ ಜತ್ತಿ ಅವರು, ಉಪ ರಾಷ್ಟ್ರಪತಿಯಾಗಿ ಅಧಿಕಾರ ವಹಿಸಿದ ಮೇಲೆ ಭಾಗವಹಿಸಿದ ಮೊಟ್ಟಮೊದಲ ನೆಯ ಸಾರ್ವಜನಿಕ ಸಭೆಯಲ್ಲೇ ನೀತಿ, ಧರ್ಮ, ಪ್ರಾಮಾಣಿಕತೆ, ಸದ್ವರ್ತನೆ ಯನ್ನು ಕುರಿತು ಮಾತನಾಡಿದರು. ರಾಜಕಾರಣಿಗಳು ಸಾಧಾರಣವಾಗಿ ಆಡುವ ಮಾತುಗಳು ಅವಲ್ಲ. ಅವರ ಪ್ರತಿಯೊಂದು ಸಾರ್ವಜನಿಕ ಭಾಷಣದಲ್ಲೂ ಈ ನೀತಿ, ಧರ್ಮ, ಪ್ರಾಮಾಣಿಕತೆಯ ಒತ್ತು ಎದ್ದು ಕಾಣುತ್ತದೆ. ಶ್ರೀ ಅರ ವಿಂದರ ರಾಜನೀತಿ ಶಾಸ್ತ್ರದಂತೆ, ಒಂದಾನೊಂದು ಕಾಲಕ್ಕೆ ಈ ಲೋಕದಲ್ಲಿ ರಾಜ್ಯ ಸೂತ್ರಗಳು ಆಧ್ಯಾತ್ಮ ಜೀವಿಗಳ ಕೈಗೇ ಬರುತ್ತವೆ. ಆಗಲೇ ಲೋಕಕ್ಕೆ ಮುಕ್ತಿ. ಶ್ರೀ ಜತ್ತಿಯವರು, ಶ್ರೀ ಅರವಿಂದರು ಬಯಸಿದ ರಾಜಕೀಯ ವ್ಯವಸ್ಥೆಯ ಪ್ರಥಮ ರಾಜಕೀಯ ವ್ಯಕ್ತಿ ಎಂದು ನಾನು ನಂಬಲಿಚ್ಛಿ ಸುತ್ತೇನೆ. ಶ್ರೀ ಮಾತೆ ಯಾರ ಯಾರಿಂದ ಏನೇನು ಕೆಲಸ ಮಾಡಿಸಿಕೊ ಳ್ಳುತ್ತಾಳೆಂಬುದನ್ನು ಯಾರು ಬಲ್ಲರು ?

## ದೊಡ್ಡ ಗುಣ

ಇಷ್ಟೆಲ್ಲ ಹೇಳಿದರೂ ಶ್ರೀ ಜತ್ತಿಯರಲ್ಲಿರುವ ಇನ್ನೊಂದು ಗುಣವನ್ನು ಹೇಳದಿದ್ದರೆ ಏನೂ ಹೇಳಿದಂತಲ್ಲ. ಅದೇನೂ ಅವರ ರಹಸ್ಯ ಗುಣವಲ್ಲ. ಎಲ್ಲರಿಗೂ ಕಾಣುವಂಥಾದ್ದು. ಆದರೆ ಯಾರೂ ಹವಣಿಸದಿರುವುದು. ಅದು ಅವರ ಸರಳ ನಡೆ — ನುಡಿ. ಅವರು ರಾಜಕೀಯ ಕ್ಷೇತ್ರದಲ್ಲಿ ಯಾವುದೇ ಉನ್ನತ ಸ್ಥಾನ ಪಡೆದಿದ್ದರೂ ಅವರು 'ಎನಗಿಂತ ಕಿರಿಯರಿಲ್ಲ' ಎಂಬು ದನ್ನು ಮರೆತಿಲ್ಲ. ಉನ್ನತ ಸ್ಥಾನ ಕಂಡೊಡನೆ ತಲೆ ಎತ್ತಿಕೊಂಡು, ಬೀಗಿ ನಡೆ ಯುವ ಅಣ್ಣಗಳೇ ತುಂಬಿರುವ ಈ ನಾಡಿನಲ್ಲಿ, ಕ್ಷುದ್ರ ಜನರ ಮಧ್ಯದಲ್ಲಿ ಹಾಗೆ ಬಾಗಿ ನಡೆಯುವ ಜನ ಬಹು ವಿರಳ. ಇದು ಶ್ರೀ ಜತ್ತಿಯ ವರ ಎಲ್ಲಕ್ಕಿಂತ ದೊಡ್ಡಗುಣ ಎಂದು ನಾನು ಭಾವಿಸುತ್ತೇನೆ. ಆ ಸರಳ ಸ್ವಭಾವ ಇಲ್ಲದೆ ಹೋದರೆ — ತಾನು ಎಲ್ಲರಂತೆ ಸಾಮಾನ್ಯರೊಳಗೊಬ್ಬ ಸಾಮಾನ್ಯ

ನೆಂಬ ವಿನಯ ಇಲ್ಲದೆ ಹೋದರೆ, ಶ್ರೀ ಜತ್ತಿಯವರನ್ನು ತಮಗೆ ತಾವು ಜಟ್ಟಿಗಳಾಗಿ ಮೆರೆಯಬಹುದಾಗಿತ್ತೇ ಹೊರತು, ಜನಪ್ರಿಯರಾಗುತ್ತಿರಲಿಲ್ಲ. ಇದು — ಈ ಸರಳ ನಡವಳಿಕೆ — ಇಂದು ರಾಜಕಾರಣಿಗೆ ಬೇಕು. ಯಾವನು ಈ ಸಾಮಾನ್ಯ ಜನರನ್ನು ಅರಿಯನೋ, ಅವರಂತೆ ಬದುಕನೋ ಅವನಿಗೆ ಹೃದಯವೇ ಇಲ್ಲ. ಅವನು ಆಡಳಿತಗಾರನಾಗಲಾರ. ಗಾಂಧೀಜಿ ಮೊಳಕಾಲ ಮೇಲೆ ಪಂಚೆ ಉಟ್ಟು, ಬರಿಮೈಲಿ ಬದುಕಿದ್ದ ಅವರಿಗೆ ಅರಿವೆಯ ಅಭಾವ ವಿತ್ತೆಂದಲ್ಲ. ಅಹಮದಾಬಾದಿನ ಗಿರಿಣಿ ಮಾಲಕರೆಲ್ಲ ಅವರ ಅಂಕೆಯಲ್ಲಿದ್ದರು. ಅದಲ್ಲ ಅವರ ಬರೀ ಮೈ ಸಂಕೇತ. ಈ ದೇಶದಲ್ಲಿ ಅರೆಬತ್ತಲೆಯಿರುವವರ ಸಂಕಟ ವನ್ನು ಹೊದ್ದುಕೊಂಡ ಸಂಕೇತ ಅವರ ಬರೀ ಮೈ. ಗಾಂಧೀಜಿಯ ಈ ಜೀವನ ಸರಿಯೆಂದು ಒಪ್ಪುವ ಜನಕ್ಕೆ ರಾಜಕಾರಣಿ ಶ್ರೀ ಜತ್ತಿಯವರಂತೆ ಸರಳ ಜೀವನ ನಡೆಸಬೇಕೆಂದು ಬಯಸುತ್ತಾನೆ. ವಿಯಟ್‌ನಾಮ್ ಅಧ್ಯಕ್ಷ ಹೋಚಿ ಮಿನ್ ಹಾಗೇ ಬದುಕಿದ್ದ. ಅದನ್ನು ನಾವು ಮೆಚ್ಚಿಕೊಂಡೆವು. ಆದರೆ ನಮ್ಮ ರಾಷ್ಟ್ರಾಧ್ಯಕ್ಷರು ಹಾಗೆ ಬದುಕುವುದನ್ನು ನಾವು ಇನ್ನೂ ಕಾಣಬೇಕಾಗಿದೆ. ಶ್ರೀ ಜತ್ತಿಯವರು ರಾಷ್ಟ್ರಪತಿ ಭವನಕ್ಕೆ ಹೋದಾಗ, ಅವರು ಸರಳ ಜೀವನ ದಿಂದ ಹೋಚಿಮಿನ್‌ನ ಆದರ್ಶವನ್ನು ಅನುಸರಿಸುವರೆಂದು ನಂಬುತ್ತೇನೆ. ಗಾಂಧೀಜಿಯ ಆತ್ಮಕ್ಕೆ ಅವರಿಂದಲಾದರೂ ಒಂದಿಷ್ಟು ನೆಮ್ಮದಿ ಸಿಗಲಿ.

## ಶ್ರೀಮತಿ ಸಂಗವ್ವ

ಶ್ರೀ ಜತ್ತಿಯವರು, ಕಚ್ಚೆ ಕೈ ಬಾಯಿಗಳನ್ನು ತಮ್ಮಿಚ್ಛೆಯಲ್ಲಿಟುಕೊಂಡು ದಕ್ಕೆ ಅವರ ಸ್ವಭಾವ, ಹುಟ್ಟು ಗುಣ ಕಾರಣವೆಂಬುದೇನೋ ನಿಜ. ಆದರೆ, ಒಳ್ಳೆಯವರು ಕೆಟ್ಟವರ ಸಹವಾಸಕ್ಕೆ ಬಿದ್ದು ಕೆಟ್ಟುಹೋದದ್ದು ಬಹು ಸಾಮಾನ್ಯ. ಆದ್ದರಿಂದ ಶ್ರೀ ಜತ್ತಿಯವರ ಈ ಪರಿಶುದ್ಧ ಜೀವನಕ್ಕೆ ಅವರ ಒಡನಾಡಿಗಳೂ ಅಷ್ಟೇ ಕಾರಣ. ಅವರ ಒಡನಾಡಿಗಳಲ್ಲಿ ಅತ್ಯಂತ ಸಮೀ ಪದವರೆಂದರೆ ಅವರ ಅರ್ಧಾಂಗಿ, ಶ್ರೀಮತಿ ಸಂಗವ್ವನವರು. ಜೀವನ ಸಂಗಾತಿ ಕೈ ಹಿಡಿದ ಗಂಡನನ್ನು ಕೈ ಹಿಡಿದು ನಡೆಸದಿದ್ದರೆ, ಗಂಡನ ಬಾಳು ನಾಯಿಬಾಳು ಆದೀತು. ಹಾಗೆ ವೈಯಕ್ತಿಕವಾಗಿ ಪರಿಶುದ್ದನಾಗಿದ್ದ ಗಂಡ, ಹೆಂಡತಿಯ ಕೆಟ್ಟ ಬಾಳಿನಿಂದ ತಾನೂ ಕೆಟ್ಟು, ನಾಡಿಗೂ ಕೇಡು ತಂದ ಉದಾಹರಣೆಗಳು ಕಣ್ಣೆದುರಿಗೇ ಇವೆ. 'ಸಾಹೇಬರೇನೋ ಅಪರಂಜಿಯಂಥ ವರು; ಆದರೆ ಅಮ್ಮನವರಿಂದ ಕೆಟ್ಟರು. ಅಮ್ಮನವರ ಕೈ ಬೊಂಬೆ' ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆದಕಾರಣ ನಾನುಭಾವಿಸುತ್ತೇನೆ ಶ್ರೀ ಜತ್ತಿ

ಯವರ ಈ ಶುಭ್ರ ಜೀವನದ ಜುನಾದಿ ಶ್ರೀಮತಿ ಸಂಗವ್ವನವರೇ ಎಂದು. ಅವರು ಗಂಡನ ದೊಡ್ಡ ಸ್ಥಾನಕ್ಕೆ ಚ್ಯುತಿ ಬಾರದಂತೆ ನಡೆದುಕೊಳ್ಳದೆ ಹೋಗಿದ್ದರೆ, ಶ್ರೀ ಜತ್ತಿಯವರು ಶುಭ್ರ ಜೀವನ ನಡೆಸಲು ಸಾಧ್ಯವಿರ ಲಿಲ್ಲ. ಅಧಿಕಾರ ಏನೆಲ್ಲವನ್ನೂ ಮಾಡಿಸುತ್ತದೆ. ಗಂಡನ ಅಧಿಕಾರ ಮಡ ದಿಯ ನೆತ್ತಿಗೇರಿದರೆ ಏನೆಲ್ಲ ಅನಾಹುತಗಳಾಗಬಹುದಲ್ಲ ! ಶ್ರೀ ಜತ್ತಿಯವರ ಪುಣ್ಯದಿಂದ ಅವರ ಜೀವನವನ್ನು ದಾರಿ ತಪ್ಪಿಸದೆ ನಡೆಸುವಂಥ ಜೀವನ ಸಂಗಾತಿ ಸಿಕ್ಕಿದ್ದಾರೆ.

ಶ್ರೀ ಜತ್ತಿಯವರು ಮುಖ್ಯಮಂತ್ರಿಯಾಗಿರಲಿ, ಅರ್ಥ ಮಂತ್ರಿಯಾಗಿರಲಿ ಶ್ರೀಮತಿ ಸಂಗವ್ವನವರು ತಮ್ಮ ಪಾಲಿಗೆ ಬಂದದ್ದಕ್ಕಿಂತ ಹೆಚ್ಚಿಗೆ ಬಯಸಿದ ವರಲ್ಲ. ಬೆಂಗಳೂರಿನಲ್ಲಿ ಅವರು ಹಯನು ಕಟ್ಟಿ ಹಾಲು ಮಾರಿ ಕಾಯಕ ಜೀವನ ನಡೆಸಿದರು. ಅರ್ಥಮಂತ್ರಿಗಳ ಮಡದಿ ಹಾಲು ಮಾರುವುದೇ ? ಎಂದು ಆಕ್ಷೇಪಿಸುವವರು ಇರಬಹುದು. ಅಧಿಕಾರದಲ್ಲಿರುವವರ ಹೆಂಡಂದಿರು ನೌಕರರ ವರ್ಗಾವಣೆಗೆ, ವಿದ್ಯಾರ್ಥಿಗಳ ಪ್ರವೇಶಕ್ಕೆ ಒಳಹೊಡೆತ ಹೊಡೆದು ವೈಭವ ಜೀವನ ನಡೆಸುವುದು ನಾಚಿಕೆ ಪಡಬೇಕಾದ ನಡತೆಯಲ್ಲ ಎಂದು ಭಾವಿ ಸುವವರು, ಹಾಲು ಮಾರಿ ಜೀವಿಸುವುದು ಕ್ಷುಲ್ಲಕ ಎಂದು ಭಾವಿಸ ಬಹುದು. ಆದರೆ, ನಾನು ಹಾಗೆ ಭಾವಿಸುವುದಿಲ್ಲ. ನೌಕರಿ ಕೊಡಿಸಲು ನೌಕರರ ವರ್ಗಾವಣೆ ಮಾಡಿಸಲು ಒಳಹೊಡೆತ ಹೊಡೆಯುವ ಭಂಡ ಬಾಳಿಗಿಂತ ಕಾಯಕದಿಂದ ಬದುಕುವವನು ಕೋಟಿ – ಕೋಟಿ ಪಾಲು ಮಿಗಿಲು ಎಂದು ಕಾಯಕದಲ್ಲಿ ನಂಬುಗೆಯಿದ್ದವರೆಲ್ಲರೂ ಒಪ್ಪುತ್ತಾರೆ. ಈ ನಂಬುಗೆಯಿದ್ದವರು ಶ್ರೀ ಜತ್ತಿಯವರ ಜೀವನದ ಯಶಸ್ಸಿಗೆ, ಪರಿಶುದ್ಧತೆಗೆ ಅವರ ಅರ್ಧಾಂಗಿ ಅರ್ಥಕ್ಕಿಂತಲೂ ಹೆಚ್ಚು ಕಾರಣ ಎಂದು ಭಾವಿಸಿದ್ದಾರೆ.

## ಒಂದೇ ಒಂದು ವಿದ್ಯೆ

ಹಾಗಾದರೆ ಶ್ರೀಮತಿ ಸಂಗವ್ವನವರು ಅಷ್ಟೊಂದು ಜಾಣರೆ ? ಕಲಿತವರೆ ? ಬಹುಶಃ ಅವರು ಕಲಿಯದೆ ಇದ್ದುದೇ ಅವರಿಗೆ ವರವಾ ಗಿದೆ ಎನ್ನಬಹುದು.ಆ ದರೆ ಲೋಕ ವ್ಯವಹಾರವನ್ನು ಬಲ್ಲವರೆಂಬುದರಲ್ಲಿ ಸಂಶ ಯವಿಲ್ಲ. ಅವರು ಕಲಿತಿರುವ ಒಂದೇ ವಿದ್ಯೆ ಗಂಡನಿಗೆ ಒಳ್ಳೆಯದನ್ನು ನೆನೆಯುವುದು ಹಾಗೂ ಅದರಂತೆ ನಡೆಯುವುದು. ಈ ಬೀಜ ಮಂತ್ರ ಸಿಕ್ಕರೆ ಮುಂದಿನ ದಾರಿ ಸರಳ; ಸುಲಭ. ಹಾಗೆ ಶ್ರೀಮತಿ ಸಂಗವ್ವನವರು

ನಡೆದುಕೊಂಡು ಬಂದಿದ್ದಾರೆಂದೇ ಶ್ರೀ ಜತ್ತಿಯವರು ಎಡಹದೆ ದಾರಿ ನಡೆದಿದ್ದಾರೆ. ಶ್ರೀ ಜತ್ತಿಯವರು ಹಾರಾಡುವ ಪತಾಕೆ. ಆ ಪತಾಕೆ ಯನ್ನು ಎತ್ತಿ ಹಿಡಿದಿರುವ ಬಿದಿರು, ಗಳು ಅವರ ಮಡದಿ. ಪತಾಕೆಗೇ ಎಲ್ಲ ಗೌರವ ! ಆದರೆ ಆ ಪತಾಕೆ ನಿಂತಿರುವುದು ಬಿದಿರುಗಳುವಿನ ಆಧಾ ರದಿಂದ ಎಂಬುದನ್ನು ಮರೆಯತಕ್ಕದ್ದಲ್ಲ.



## ವೀರಶೈವಾಚಾರ

ತನು ಮುಟ್ಟಿ ಮನ ಮುಟ್ಟದೆ
ದೂರವಾದರಯ್ಯಾ ಬೆಲೆವೆಣ್ಣಿನಂತೆ
ಸೂಳೆ ತನು ಮುಟ್ಟಿ ಅಪ್ಪುವಳಲ್ಲದೆ
ಮನಮುಟ್ಟಿ ಅಪ್ಪಳಯ್ಯಾ
ಅರಿವು ಆಚಾರವನರಿಯದ ಅರೆಮರುಳುಗಳು
ಪರಮಾನಂದದ ಶಿವಸುಖವನೆತ್ತ ಬಲ್ಲರಯ್ಯಾ ?
ಕೋಟಿ ಸುಕೃತದ ಫಲವು
ಒಂದು ವೇಳೆ ಕೈಸಾರಿದಂತಿರ್ದ
ವೀರಶೈವಾಚಾರ ಸಂಪನ್ನರಾದ ಘನ ಮಹಿಮರೇ
ಬಲ್ಲರಯ್ಯಾ ಕೂಡಲ ಚೆನ್ನಸಂಗಮದೇವಾ

— ಚೆನ್ನಬಸವಣ್ಣನವರು

# ಲೌಕಿಕ – ಪಾರಮಾರ್ಥಿಕ ಸವ್ಯಸಾಚಿ

● ಬ. ಮ. ಏಳುಕೋಟಿ

● [ ಶ್ರೀ ಬ. ಮ. ಏಳುಕೋಟಿಯವರು "ಜನಜೀವಾಳ" ಪತ್ರಿಕೆಯ ಸಂಪಾದಕರು ಮತ್ತು ಶ್ರೀ ಬಿ. ಡಿ. ಜತ್ತಿ ಅವರ ಸಹಪಾಠಿಗಳು. ಶ್ರೀ ಜತ್ತಿ ಅವರು ಬಾಲ್ಯದಿಂದಲೇ ಹೇಗೆ ಬಸವತತ್ವ ಪ್ರಿಯರಾಗಿದ್ದರು ಮತ್ತು ಸಂಘಟನಾ ಚತುರರಾಗಿದ್ದರೆಂಬುದನ್ನು ವಿವರಿಸಿದ್ದಾರೆ. ಶ್ರೀ ಏಳುಕೋಟಿಯವರು ಸ್ಪಷ್ಟವಾದಿಗಳು. ಉತ್ತಮವಾದುದನ್ನು ಪುರಸ್ಕರಿಸಲೂ ಹೀನವಾದುದನ್ನು ತಿರಸ್ಕರಿಸಲೂ ಪತ್ರಿಕೆಯನ್ನು ವಾಹಕವನ್ನಾಗಿ ಮಾಡಿಕೊಂಡು ಅವರು ಜನಸೇವೆ ಸಲ್ಲಿಸುತ್ತಿದ್ದಾರೆ. — ಸಂ. ]

ಭಾರತದ ಈಗಿನ ಉಪರಾಷ್ಟ್ರಪತಿ ಶ್ರೀ ಬಸಪ್ಪ ದಾನಪ್ಪ ಜತ್ತಿಯವರನ್ನು ನಾನು ವಿದ್ಯಾರ್ಥಿ ದೆಸೆಯಿಂದಲೂ ಅಂದರೆ ೧೯೩೩ ರಿಂದ ೧೯೭೩ ರ ವರೆಗಿನ ೪೦ ವರ್ಷಗಳವರೆಗೂ ಚೆನ್ನಾಗಿ ಬಲ್ಲೆ.

ಶ್ರೀ ಜತ್ತಿಯವರು ಕೊಲ್ಲಾಪುರದ ರಾಜಾರಾಮ ಕಾಲೇಜಿನಲ್ಲಿ ವಿಧ್ಯಾರ್ಥಿಯಾಗಿದ್ದುಕೊಂಡು, ಸ್ಯಾಕ್ಸ ಲಾ ಕಾಲೇಜಿನಿಂದ ಎಲ್. ಎಲ್. ಬಿ ಪದವಿ ಪಡೆದರು. ಆಗಿನ ಕಾಲದಲ್ಲಿ ಕೊಲ್ಲಾಪುರದ ಕನ್ನಡ ವಿದ್ಯಾರ್ಥಿ ವೃಂದವು ಬಹು ಪ್ರಭಾವಶಾಲಿ ಆಗಿತ್ತು. ಪ್ರಾ. ಭೂಸನೂರುಮಠ, ಪ್ರಾ. ಮಾಳವಾಡ, ಕೆ. ಎಫ್. ಪಾಟೀಲ, ಎಸ್. ಆರ್. ಕಂಠಿ, ರತ್ನಪ್ಪ ಕುಂಬಾರ, ಬ. ದಾ. ಜತ್ತಿ, ಪಿ. ಎಮ್. ನಾಡಗೌಡ ಮುಂತಾದ ಎಷ್ಟೋ ಹಿರಿಲಿಂಗ – ಚಿಕ್ಕಲಿಂಗರು ಅಲ್ಲಿ ಅಭ್ಯಾಸ ಮಾಡುತ್ತಿದ್ದರು. ಕೊಲ್ಲಾಪುರದ ಅಂದಿನ ಮಹಾರಾಜ ರಾಜಾರಾಮರು ಎಲ್ಲ ಸಮಾಜಗಳಿಗೂ ವಸತಿ, ಊಟಗಳ ಸೌಕರ್ಯ ಒದಗಿಸಿ, ವಿದ್ಯಾರ್ಥಿಗಳು ಹಾಯಾಗಿ ಅಭ್ಯಾಸ ಮಾಡುವಂತೆ ಏರ್ಪಾಡು ಮಾಡಿದ್ದರು. ಜತ್ತಿಯವರು ವಿದ್ಯಾರ್ಥಿ ಇದ್ದಾಗಿನಿಂದಲೂ ಖಾದಿಧಾರಿಗಳು. ಅವರು ನಿರುಪದ್ರವಿಗಳೂ, ಮಿತಭಾಷಿಗಳೂ ಅಹುದು. ಯಾರೊಂದಿಗೂ ಅತಿಯಾಗಿ ನಡೆದು

ಕೊಳ್ಳುವ ಕೆಲಸವನ್ನು ಅವರು ಎಂದೂ ಮಾಡಿಲ್ಲ. ಅವರು ಎಲ್ಲರ ಕೂಡ ಬೆಲ್ಲದ ಹೇರಾಗಿ ನಡೆದುಕೊಳ್ಳುತ್ತಿದ್ದರು.

ಕೊಲ್ಹಾಪುರದಲ್ಲಿ ಕನ್ನಡ ವಿದ್ಯಾರ್ಥಿಗಳಲ್ಲಿ ಒಂದು ತರಹದ ಹುರುಪು – ಹುಮ್ಮಸ್ಸು, ಭಾಷೆಯ ಬಗ್ಗೆ ಅಭಿಮಾನ, ರಾಷ್ಟ್ರದ ಆಗು – ಹೋಗುಗಳ ಬಗ್ಗೆ ಪ್ರಚಂಡ ನಿಷ್ಠೆಗಳು ಒಡೆದು ಕಾಣುತ್ತಿದ್ದವು. ಅವರ ಈ ಚಟುವಟಿಕೆಗಳ ಮನೋಭಾವದಿಂದಾಗಿ ಚಿತ್ರದುರ್ಗ ಮಠದಲ್ಲಿ ಬಸವನ ಬಳಗವೆಂಬ ಕನ್ನಡ ಸಂಸ್ಥೆಯೊಂದು ಒಡಮೂಡಿದುದೇನೂ ಸೋಜಿಗವಲ್ಲ. ಶ್ರೀ ಏಳುಕೋಟಿಯವರು ಈ ಬಳಗದ ಕಾರ್ಯದರ್ಶಿಯಾಗಿದ್ದರು. ಶ್ರೀ ಜತ್ತಿ, ಮಾಳವಾಡರು ಅದಕ್ಕೆ ಸ್ಫೂರ್ತಿಯ ಸೆಲೆ, ನೆಲೆ ಯಾಗಿದ್ದರು.

## ಪಂಚಪ್ರಾಣ

ವಿದ್ಯಾರ್ಥಿ ದೆಸೆಯಿಂದಲೂ ಬಸವಣ್ಣನವರು ಮತ್ತು ಅವರ ತತ್ವಗಳೆಂದರೆ ಜತ್ತಿಯವರಿಗೆ ಪಂಚ ಪ್ರಾಣ. ವಿದ್ಯಾರ್ಥಿ ದೆಸೆಯಲ್ಲಿಯ ಬಸವನ ಬಳಗದ ಪ್ರೇರಣೆಯೇ ಮುಂದೆ ಅವರು ಮಂತ್ರಿಯಾದಾಗ ೧೯೬೪ ರ ಸುಮಾರಿಗೆ ಬೆಂಗಳೂರಿನಲ್ಲಿ ಬಸವ ಸಮಿತಿ ಎಂಬ ಅಪ್ರತಿಮ ಸಂಸ್ಥೆ ಸ್ಥಾಪಿಸಲು ಕಾರಣವಾಯಿತೆಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಶ್ರೀ ಜತ್ತಿಯವರು ಎಲ್ ಎಲ್. ಬಿ. ಮುಗಿಸಿಕೊಂಡು ಜಮಖಂಡಿಯಲ್ಲಿ ವಕೀಲಿ ಮಾಡಲಾರಂಭಿಸಿದರು. ವಕೀಲಿ ಮಾಡ ಮಾಡುತ್ತಲೇ ಅವರು ಮನೆಯ ಉದ್ಯೋಗವಾದ ಅಡತಿ ಅಂಗಡಿಯ ಕಡೆಗೂ ಲಕ್ಷ್ಯ ಹಾಕುತ್ತಿದ್ದುದನ್ನು ಈ ಲೇಖಕ ಒಂದೆರಡು ಸಲ ಜಮಖಂಡಿಗೆ ಹೋದಾಗ ಕಂಡುದುಂಟು.

ಶ್ರೀ ಜತ್ತಿಯವರು ಬಹು ಸರಳ ಜೀವಿ, ಲವಲೇಶವೂ ಆಡಂಭರದ ಡಂಭಾಚಾರ ಅವರಲ್ಲಿ ಇಲ್ಲವೆಂದೇ ಹೇಳಬೇಕು. ಅವರು ಸಾಮಾನ್ಯರಲ್ಲಿ ಸಾಮಾನ್ಯರಾಗಿ ಇರುತ್ತಿದ್ದರು. ಎಲ್ಲರೊಂದಿಗೆ ಹೊಂದಿಕೊಂಡು ಹೋಗುವದು ಅವರ ಹುಟ್ಟು ಗುಣವೇ ಆಗಿದ್ದಿತು. ವಕೀಲಿ ವೃತ್ತಿಯಲ್ಲಿದ್ದಾಗ ಬಹಳಷ್ಟು ದಿನ ಸೈಕಲ್ಲನ್ನೇ ಹತ್ತುತ್ತಿದ್ದರು. ಕಿರಿದು ನುಡಿ, ಹಿರಿದು ಬಗೆ ಎಂಬುದು ಅವರ ಜಪದ ಮಂತ್ರವಾಗಿತ್ತು. ಅವರ ಹುಟ್ಟೂರು ಜಮಖಂಡಿಯ ಸಮೀಪದಲ್ಲಿರುವ ಸಾವಳಗಿ.

ಅವರ ಮನೆಯ ಉದ್ಯೋಗ ವ್ಯಾಪಾರ ಮತ್ತು ಒಕ್ಕಲುತನ; ಅವರದು ಸಾಮಾನ್ಯ ಮನೆತನ. ಅಷ್ಟೇನೂ ಸಿರಿವಂತರಲ್ಲ. ಸಾಮಾನ್ಯ ಮನೆತನದ ಒಬ್ಬ ವ್ಯಕ್ತಿ ಎಂತಹ ಅದ್ಭುತ ಲೌಕಿಕ ಮತ್ತು ಪಾರಮಾರ್ಥಿಕ ಸಾಧನೆಗಳ ಉನ್ನತ ಶಿಖರಕ್ಕೆ ಮುಟ್ಟಬಹುದೆಂಬುದಕ್ಕೆ ಶ್ರೀ ಜತ್ತಿಯವರು ಒಂದು ಅತ್ಯುತ್ತಮ ಉದಾಹರಣೆ. ಅವರು ಎಸಗಿದ ಲೌಕಿಕ ಸಾಧನೆಗಳನ್ನು ಒಂದೊಂದಾಗಿ ಕಂಡುಕೊಳ್ಳುವ :

## ಒಂದೊಂದು ಹೆಜ್ಜೆ

೧) ಅವರು ವಕೀಲಿ ಮತ್ತು ವ್ಯಾಪಾರಗಳನ್ನು ಮಾಡುತ್ತಿರುವಾಗಲೇ ಅಂದಿನ ಜಮಖಂಡಿ ಸಂಸ್ಥಾನದ ರಾಜಕಾರಣದಲ್ಲಿ ಕೈ ಹಾಕುತ್ತ ಮಂತ್ರಿಗಳಾಗುವವರೆಗೂ ಮುಂದುವರಿದರು. ಮತ್ತು ಆ ಸಂಸ್ಥಾನವು ಭಾರತದಲ್ಲಿ ವಿಲಯನ ಹೊಂದುವ ಸಲುವಾಗಿ ಬಹಳಷ್ಟು ದುಡಿದು ಆ ವಿಲಯನದ ಕಾರ್ಯವನ್ನು ಪೂರ್ತಿಗೊಳಿಸಿದರು. ಅಂದಿನಿಂದ ಜತ್ತಿಯವರ ಪ್ರಭಾವ ಒಂದೊಂದು ಹೆಜ್ಜೆಯಾಗಿಯೇ ಮುಂದುವರಿಯ ಹತ್ತಿತು.

೨) ಅವರು ಆ ಬಳಿಕ ಆಗಿನ ದೊಡ್ಡ ಮುಂಬಯಿ ರಾಜ್ಯದ ಸಂಸದೀಯ ಕಾರ್ಯದರ್ಶಿಗಳಾಗಿಯೂ ಉಪಮಂತ್ರಿಯಾಗಿಯೂ ಕೆಲಸಮಾಡಿ, ಆಡಳಿತದಲ್ಲಿ ಅಪಾರ ಅನುಭವ ಪಡೆದರು. ಒಂದೊಮ್ಮೆ ತಾತ್ಪೂರ್ತಿಕವಾಗಿ ಕೂಲಿಕಾರ ಮಂತ್ರಿ ಶಾಖೆಯನ್ನೂ ನೋಡಿಕೊಳ್ಳುತ್ತಿದ್ದುದು ಈ ಬರಹಗಾರನ ಕಣ್ಮುಂದೆ ಅಚ್ಚಳಿಯದೆ ಉಳಿದಿದೆ. ಮತ್ತೊಮ್ಮೆ ಈ ಬರಹಗಾರ ಶ್ರೀ ಜತ್ತಿಯವರು ಉಪಮಂತ್ರಿ ಇದ್ದಾಗ ಮುಂಬಯಿಯಲ್ಲಿ ಅವರನ್ನು ಕಂಡುದುಂಟು. ಗೆಳೆಯರ ಕೆಲಸ ಮಾಡುವದಕ್ಕೆ ಅವರು ತಮ್ಮ ಮಂತ್ರಿ ಪ್ರತಿಷ್ಠೆಗೆ ಎಂದೂ ಒಳಗಾಗುತ್ತಿದ್ದಿಲ್ಲ. ಆಗ ಇಂದಿನಂತೆ ಕೈಕಾಲಿಗೊಂದು ಟೆಲಿಫೋನ ಇರಲಿಲ್ಲ. ಈ ಬರಹಗಾರ ಅವರಿಗೆ ಒಂದು ಕೆಲಸದ ಬಗ್ಗೆ ನಿವೇದಿಸಿದಾಗ ಶ್ರೀ ಜತ್ತಿಯವರು ಮತ್ತೊಂದು ಕೋಣೆಯಲ್ಲಿದ್ದ ಟೆಲಿಫೋನದ ಕಡೆಗೆ ಹೋಗಿ ಕೆಲಸ ನೆರವೇರಿಸಿದರು. ಶ್ರೀ ಜತ್ತಿಯವರು ಹೇಳಿದ ಎಲ್ಲ ಕೆಲಸಗಳನ್ನು ಮಾಡುತ್ತಿರುವರು ಎಂಬುದು ಇದರ ಅರ್ಥವಲ್ಲ. ಅವರು ಕೆಲವೊಂದು ವಿಷಯಗಳಲ್ಲಿ ಸ್ಪಷ್ಟ ಮತ್ತು ನಿಷ್ಠುರವಾದಿಗಳು.. ಅವರು ತಮಗೆ ಸರಿ ಕಂಡ ವಿಷಯಗಳ ಬಗ್ಗೆ ಅಷ್ಟೇ ಲಕ್ಷ್ಯ ಹಾಕುತ್ತಿದ್ದರು. ಅವರು ತಮ್ಮೀ ಸದ್ಗುಣವನ್ನು ಇಂದಿನವರೆಗೂ ಪಾಲಿಸುತ್ತ ಬಂದಿರುವದು ಒಂದು ಆದರ್ಶವೆಂದೇ ಹೇಳಬೇಕು.

೧೯೫೭ರಲ್ಲಿ ಕರ್ನಾಟಕ ರಾಜ್ಯವಾಯಿತು. ಆ ಬಳಿಕ ಶ್ರೀ ಜತ್ತಿಯವರು ತಮ್ಮ ರಾಜಕೀಯ ಚಟುವಟಿಕೆಗಳನ್ನೆಲ್ಲ ಮುಂಬಯಿಯಿಂದ ಬೆಂಗಳೂರಿಗೆ ಸ್ಥಳಾಂತರಿಸಿ ಅಲ್ಲಿ ಬಹು ಅಚ್ಚುಕಟ್ಟುತನದಿಂದಲೂ ಓರಣದಿಂದಲೂ ಕೆಲಸ ಮಾಡುತ್ತಿದ್ದರು. ಅವರು ಭೂಸುಧಾರಣ ಸಮಿತಿಯ ಚೇರಮನ್ನರಿದ್ದುಕೊಂಡು ಬಹು ಬೇಗನೆ ಒಂದು ಸುವ್ಯವಸ್ಥಿತ ವರದಿ ಒಪ್ಪಿಸಿ ಸರ್ವರ ಮನ್ನಣೆ ಮತ್ತು ಮೆಚ್ಚುಗೆಗೆ ಪಾತ್ರರಾದರು. ಅವರ ಕಾರ್ಯ ಕೌಶಲ್ಯ ಮತ್ತು ದಕ್ಷತೆಗಳಿಗೆ ಈ ವರದಿ ಒಂದು ಹೆಗ್ಗುರುತು ಮತ್ತು ಹಿರಿಸಾಕ್ಷಿ ಆಗಿದೆ. ಈ ವರದಿಯ ಫಲವಾಗಿಯೋ ಏನೋ ಅವರು ಮುಂದೆ ೧೯೫೮ ರಿಂದ ೧೯೬೨ ರ ವರೆಗೆ ಮೈಸೂರಿನ ಮುಖ್ಯ ಮಂತ್ರಿಯಾಗಿ ಕೆಲಸ ಮಾಡಿ ಕರ್ನಾಟಕ ರಾಜ್ಯದ ರಾಜಕಾರಣದಲ್ಲಿ ಒಂದು ಗಣ್ಯಸ್ಥಾನ ಗಳಿಸಿಕೊಂಡರು.

## ಕೊರಳೆತ್ತಿ

೪. ಮುಖ್ಯ ಮಂತ್ರಿಯಾಗಿದ್ದ ಶ್ರೀ ಜತ್ತಿಯವರು ಶ್ರೀ ನಿಜಲಿಂಗಪ್ಪನವರ ಮಂತ್ರಿ ಮಂಡಳದಲ್ಲಿ ಹಣಕಾಸು ಮತ್ತು ಆಹಾರ ಶಾಖೆಗಳ ಮಂತ್ರಿಗಳಾಗಿಯೂ ಕೆಲಸ ಮಾಡಿದರು. ಈ ರೀತಿ ಸಣ್ಣ ಮಂತ್ರಿ ಪದವನ್ನು ಅಲಂಕರಿಸುವದಕ್ಕೆ ಅವರ ಹಿಂದಿನ ಮುಖ್ಯ ಮಂತ್ರಿ ಪದದ ಪ್ರತಿಷ್ಠೆ ಅಡ್ಡ ಬಾರದೇ ಇದ್ದುದು ಅವರ ಸಾರ್ವಜನಿಕ ಸೇವಾ ಮನೋವೃತ್ತಿಯನ್ನು ಕೈಯತ್ತಿ, ಕೊರಳೇರಿಸಿ ಸಾರುತ್ತಿದೆ.

೫. ಮುಖ್ಯ ಮಂತ್ರಿಯಾಗಿದ್ದ ಶ್ರೀ ಜತ್ತಿಯವರು ಪಾಂಡಿಚೇರಿಯ ಉಪ ರಾಜ್ಯಪಾಲರಾಗಲೂ ಹಿಂದೆ ಮುಂದೆ ನೋಡಲಿಲ್ಲ. ಮುಖ್ಯ ಮಂತ್ರಿಯಾಗಿದ್ದವರಿಗೆ ಉಪರಾಜ್ಯಪಾಲ ಹುದ್ದೆಯನ್ನು ಕೊಡುವಷ್ಟರ ಮಟ್ಟಿಗೂ ಅಂದಿನ ರಾಜಕಾರಣ ಸಂಕುಚಿತತೆಯ ಆಗರವಾಗಿದ್ದಿತು. ಆದರೆ ಆದನ್ನು ಸಣ್ಣದೆಂದು ಹೊದಲಿಸದೆ ಶ್ರೀ ಜತ್ತಿಯವರು ಆ ಉಪರಾಜ್ಯಪಾಲ ಹುದ್ದೆಯನ್ನು ಸ್ವೀಕರಿಸಿ ಯಶಸ್ವಿಯಾಗಿ ನೆರವೇರಿಸಿದರು.

೬. ಆ ಬಳಿಕ ಶ್ರೀ ಜತ್ತಿಯವರು ಓರಿಸ್ಸಾ ರಾಜ್ಯಪಾಲರಾಗಿ ಎಲ್ಲರೂ ಬೆರಳು ಕಚ್ಚುವಂತೆ ಬಹು ಯಶಸ್ವಿಯಾಗಿ ಕಾರ್ಯ ನೆರವೇರಿಸಿದರು. ಓರಿಸ್ಸಾವು ಒಂದು ಸಮಸ್ಯಾತ್ಮಕ ರಾಜ್ಯ. ಈ ಸಮಸ್ಯಾತ್ಮಕ ರಾಜ್ಯದ ರಾಜಕೀಯ ಕೋಲಾಹಲದಲ್ಲಿ ಶ್ರೀ ಜತ್ತಿಯವರು ಕೊಚ್ಚಿಕೊಂಡು ಹೋಗದೆ ಇದ್ದುದು ಅವರ ಚಾಣಾಕ್ಷತನ ಮತ್ತು ದೂರದೃಷ್ಟಿಯ ದ್ಯೋತಕ.

೭. ಕೊನೆಗೆ, ಕೊಟ್ಟ ಕೊನೆಗೆ, ಭಾರತದ ಅತ್ಯುನ್ನತ ಅಧಿಕಾರ ಸ್ಥಾನಗಳಲ್ಲೊಂದಾದ ಉಪರಾಷ್ಟ್ರಪತಿ ಪದವನ್ನು ಶ್ರೀ ಜತ್ತಿಯವರು ಅಲಂಕರಿಸಿರುವರು. ಇದು ಅವರ ಕರ್ತವ್ಯ ದಕ್ಷತೆಯ ಹೊಂಗಳಸವಾಗಿದೆ.

ನಿಷ್ಠೆಯಿಂದ ಕೆಲಸ ಮಾಡುವ ಒಬ್ಬ ಸಾಮಾನ್ಯ ವ್ಯಕ್ತಿಯು ಕೂಡ ಎಂತಹ ಉನ್ನತ ಸ್ಥಾನಕ್ಕೇರಬಹುದು ಎಂಬುದಕ್ಕೆ ಶ್ರೀ ಜತ್ತಿಯವರು ಒಂದು ಆದರ್ಶ ಉದಾಹರಣೆಯಾಗಿದ್ದಾರೆ.

### ಸ್ಥಿರಕೃತಿ

ಶ್ರೀ ಜತ್ತಿಯವರು ಮೇಲ್ಕಾಣಿಸಿದ ಬರಿಯ ಲೌಕಿಕ ಸಾಧನೆಗಳಿಂದಷ್ಟೇ ತೃಪ್ತಿ ಹೊಂದದೆ, ಪಾರಮಾರ್ಥಿಕ ಪರಮ ಸಾಧನೆಗಳ ಕಡೆಗೂ ಲಕ್ಷ್ಯಹಾಕಿದುದು ಅವರ ಜೀವನದ " ಒಂದು ಅವಿಸ್ಮರಣೀಯ " ಮತ್ತು ಅಮರ ಕೆಲಸವಾಗಿದೆ. ಬಸವ ಸಮಿತಿಯ ಸ್ಥಾಪನೆಯು ಅವರು ಕೈಕೊಂಡ ಅದ್ಭುತ ಪಾರಮಾರ್ಥಿಕ ಸಾಧನೆಯಾಗಿದೆ. ಮಾನವ ಕುಲ ಇರುವವರೆಗೂ ಮರೆಯದಂತಹ ಸಾಧನೆ ಅದು. ಬಸವನ ಸುತ್ತ ಮುತ್ತಲೂ ಬೆಳೆದ ಕಸ, ಕೊಳೆ, ಮೌಢ್ಯವನ್ನೆಲ್ಲ ತೊಡೆದು ಹಾಕಿ ಬಸವನ ಶುದ್ಧ ತತ್ವ ವಿಚಾರ, ಕಾರ್ಯಾಚಾರಗಳನ್ನು ಬೆಳಕಿಗೆ ತರುವದೇ ಈ ಸಮಿತಿಯ ಕಾರ್ಯ. ಬಸವಣ ಸಣ್ಣ — ಪಣ್ಣ ಮನುಷ್ಯನೇನಲ್ಲ ! ಲಿಂಗವಂತರಿಗೆ ಬಸವಣ್ಣ ಏನೆಲ್ಲ ಕೊಟ್ಟಿರಬಹುದು, ಬಸವಣ್ಣನವರು ಪ್ರತಿಪಾದಿಸಿದ ಸ್ವಾವಲಂಬಿ ಸಮ ಸಮಾಜವು ಅವರು ಜಗತ್ತಿನ ಸರ್ವ ಮಾನವತೆಗೆ ಇತ್ತ ಒಂದು ಅಮರ ಕೊಡುಗೆ ಆಗಿದೆ. ಕಾರ್ಲ ಮಾರ್ಕ್ಸರು ಕಮ್ಯೂನಿಜಮ್ಮನ್ನು ಜಗತ್ತಿಗೆ ಕೊಟ್ಟಿದ್ದರೆ, ಬ ಸ ವ ಣ್ಣ ೮೦೦ ವರ್ಷಗಳ ಹಿಂದೆಯೇ ಮಾನವತೆಗೆ ಸ್ವಾವಲಂಬಿ ಸಮ ಸಮಾಜದ ವಿಚಾರ ಸರಣಿ ಮತ್ತು ಪ್ರಚಾರ ಸರಣಿಗಳನ್ನು ಕೊಟ್ಟುದು ಜಗತ್ತಿನ ಘಟನೆಗಳಲ್ಲಿ ಒಂದು ಐತಿಹಾಸಿಕ ಮಹತ್ವದ ಅಂಶವಾಗಿದೆ. ಶ್ರೀ ಜತ್ತಿಯವರು ಬಸವಣ್ಣನು ಮಾನವತೆಯ ಉದ್ಧಾರಕ್ಕಾಗಿ ಆಡಿದ ಅಮರ ಪಾತ್ರವನ್ನು ಮನದಂದು ಬಸವ ಸಮಿತಿಗೆ ಕೈ ಹಚ್ಚಿದುದು ಜತ್ತಿಯವರ ಚಿರ – ಸ್ಥಿರ ಕೃತಿಯಾಗಿದೆ.

ಪವಿತ್ರ ಜೀವನ ನಡೆಸುವವರು, ಸಾರ್ವಜನಿಕ ಜೀವನದಲ್ಲಿ ಸಾತ್ವಿಕ ಆಚಾರ — ವಿಚಾರದವರು ಅ ಪ ರೂ ಪ. ಶ್ರೀ ಜತ್ತಿಯವರು ಇದಕ್ಕೊಂದು ಅಪವಾದ. ಅವರು ಕೈ, ಬಾಯಿ, ಕಚ್ಚೆ ಶುದ್ಧವಿರುವ ಪವಿತ್ರ ಜೀವಿ. ಹೊಲಸಿನಿಂದ ಹೊಲಸು ಹೋಗುವದಾದರೂ ಎಂತು ? ಅದಕ್ಕೆಂದೆ ಬಸವಣ್ಣ

ಅಂತರಂಗ ಮತ್ತು ಬಹಿರಂಗ ಶುದ್ಧಿಯ ಮಾರ್ಗ ಹಾಕಿ ಕೊಟ್ಟ. ಈ ಶುದ್ಧೀಕರಣದ ಮಾರ್ಗವನ್ನು ಹಿಡಿದವರು ಶ್ರೀ ಜತ್ತಿಯವರು ಮಾನ್ಯರು, ಧನ್ಯರು! ಪವಿತ್ರ ಜೀವನಕ್ಕೆ ಬೇಕಾದ ಇನ್ನೂ ಎರಡು ಸದ್ಗುಣಗಳು ಜತ್ತಿಯವರಲ್ಲುಂಟು. ೧) ಸಮಾಧಾನಿಯಾಗಿರಬೇಕು, ಬೆಂಕಿಗೆ ನೀರಿನಂತೆ. ೨) ಸ್ಥಿರನಾಗಿರಬೇಕು, ಮೇಟಿ ಕಟ್ಟಿಗೆಯ ಹಾಗೆ ಎಂಬ ಟಾಲಸ್ಟಾಯ ಮಹರ್ಷಿಯವರು ಉಸುರಿದ ಅಮರ ನುಡಿಗಳು ಜತ್ತಿಯವರ ಮೈ — ಮನ — ಭಾವಗಳಲ್ಲಿ ತುಂಬಿ ತುಳುಕುತ್ತಿವೆ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ!

ಕವಿ ವಿ. ಸಿ. ಯವರು ಹೇಳುವ

ಮಣಿಯದಿಹ ಮನವೊಂದು,
ಸಾಧಿಸುವ ಹಟವೊಂದು,
ನಿಜದ ನೇರಕೆ ನಡೆವ ನಿಶ್ಚಲತೆಯೊಂದು,
ಅನ್ಯಾಯಕೆಂದಿಗೂ ಬಾಗದೆಚ್ಚರವೊಂದು,
ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು.

ಎಂಬ ಐದು ಗಂಡು ಮತ್ತು ಗಟ್ಟಿ ಗುಣಗಳು — ಶ್ರೀ ಜತ್ತಿಯವರ ಜೀವನದಲ್ಲಿ ಹಾಸು ಹೊಕ್ಕಾಗಿ, ಅವರು ಜಗಜಟ್ಟಿಯಾಗಲೆಂದು ಹಾರೈಸದಿರೆವು. ಈ ರೀತಿ ಲೌಕಿಕ, ಪಾರಮಾರ್ಥಿಕಗಳ ಉತ್ನತ ಮಟ್ಟ ಮುಟ್ಟದ ಶ್ರೀ ಜತ್ತಿಯವರಿಗೆ ಇದೋ ನಮ್ಮ ಅನಂತ ಶರಣು ಶರಣಾರ್ಥಿಗಳು.



# ಬಸವಸಮಿತಿ: ಶರಣತನ ಏಕತ್ರಿತ ದ್ಯುತಿ

● ಲಿಂಗಣ್ಣ ಸತ್ಯಂಪೇಟೆ

● [ ಶ್ರೀ ಲಿಂಗಣ್ಣ ಸತ್ಯಂಪೇಟೆ ಅವರು ವಿಚಾರಶೀಲ ತರುಣ ಬರಹಗಾರರು. ಪರಿಣಾಮಕಾರಿಯಾಗಿ ಬರೆಯುವ ಕಲೆ ಅವರಿಗೆ ಸಹಜವಾಗಿ ಕರಗತವಾಗಿದೆ. ಸಮಾಜದ ಬಗ್ಗೆ, ದೇಶದ ಬಗ್ಗೆ ಹಾರ್ದಿಕವಾಗಿ ಕಳಕಳಿ ಇರುವುದರಿಂದ ಅವರು ಅನೀತಿಯನ್ನು ಮತ್ತು ಅತಾತ್ವಿಕತೆಯನ್ನು ಕಂಡು ಕೆರಳುತ್ತಾರೆ. ಆ ಕೆರಳುವಿಕೆಯಲ್ಲಿಯೇ ತಪ್ಪಿತಸ್ಥರ ವಿರುದ್ಧ ಚುಚ್ಚಿ ಬರೆಯುತ್ತಾರೆ. ಬರಹದಂತೆ ಭಾಷಣವೂ ಅಂಕುಶ ಪ್ರಾಯವಾಗಿರುತ್ತದೆ. ಶ್ರೀ ಲಿಂಗಣ್ಣನವರ ಸಮಾಜ ಕಳಕಳಿ ಅರ್ಥ ಮಾಡಿಕೊಳ್ಳದವರು ಅವರ ಬರಹದ, ಭಾಷಣದ ಈಟಿ ಇರಿತದಿಂದ ಘಾಸಿಪಡುವುದೇ ಜಾಸ್ತಿ — ಸಂ. ]

'ಬಸವಸಮಿತಿ' ಈ ಹೆಸರೇ ಸೂಚಿಸುವಂತೆ ಇದು ಮಹಾನುಭಾವ ಬಸವಣ್ಣನವರ ದಿವ್ಯ ಜೀವನದಿಂದ ಪ್ರಭಾವಿತವಾಗಿ ಅವರ ವಿನೂತನ ತತ್ವಗಳ ಪುನರುತ್ಥಾನಕ್ಕಾಗಿ ಹೆಣಗುವ ಒಂದು ಸಮಿತಿ. ಬಸವಣ್ಣನವರು ಎಂದರೆ ಕೇವಲ ಬಸವಣ್ಣನವರಲ್ಲ; ಅವರ ಜೀವಿತಾವಧಿಯಲ್ಲಿದ್ದು ಅವರಿಗೆ ಕೃತುಶಕ್ತಿಯಾಗಿ ನಿಂತು ಸಹಕರಿಸಿದ ಅಲ್ಲಮ, ಅಕ್ಕ, ಸಿದ್ಧರಾಮ, ಮಡಿವಾಳ ಮಾಚಯ್ಯ ಆಯ್ದಕ್ಕಿ ಮಾರಯ್ಯ, ಮಾದಾರ ಚನ್ನಯ್ಯ, ಹರಳಯ್ಯ, ಅಕ್ಕನಾಗಮ್ಮ, ಲಿಂಗಮ್ಮ ಮುಂತಾದ ಶರಣ ಶರಣೆಯರೆಲ್ಲರು ಸಾರಿದ ವಿಶ್ವ ಸತ್ಯಗಳನ್ನು ವಿಶ್ವದ ಗ್ರಹಿಕೆಗೆ ತಂದುಕೊಡುವ ಕೆಲಸಕ್ಕೆ ಕಟಿಬದ್ಧವಾಗಿ ನಿಂತ ಒಂದು ರಾಷ್ಟ್ರಮಟ್ಟದ ಸಂಸ್ಥೆ ಅಥವಾ ಅಂತರರಾಷ್ಟ್ರಮಟ್ಟದ ಸಂಘ.

ಇದಕ್ಕಿಂತಲೂ ಮೊದಲಿನಿಂದಲೆ ಇರುವ ವೀರಶೈವ ಮಹಾಸಭೆಯ ಮುಂದೆಯೂ ಪ್ರಾಯಶಃ ಇವೇ ಉದ್ದೇಶಗಳಿವೆ. ಪ್ರಾಗತಿಕ ವಿಚಾರಗಳಿಂದ ಪ್ರೇರಿತವಾದ ಬೇರೆ ಸಂಘ ಸಂಸ್ಥೆಗಳು ಕೂಡ ಇಂಥವೇ ಆದ ಆಲೋಚನೆಗಳನ್ನು ಇಟ್ಟುಕೊಂಡಿವೆ. ಕರ್ನಾಟಕ ವಿಶ್ವವಿದ್ಯಾಲಯವು ಶರಣರ ವಚನ

ವಿಚಾರಗಳನ್ನು ಪರಿಶೋಧಿಸಿ ಪ್ರಕಟಿಸುವಲ್ಲಿ ಅಧಿಕ ಪರಿಶ್ರಮ ಪಟ್ಟಿದೆ. ಕೆಲವು ಮಠಾಧಿಪತಿಗಳೂ ಈ ಕೆಲಸವನ್ನು ಅಷ್ಟಿಷ್ಟು ಮಾಡಿದ್ದಾರೆ. ಆಸಕ್ತ ವ್ಯಕ್ತಿಗಳೂ ಅಲ್ಲಲ್ಲಿ ಒಂದೊಂದು ಸಂಘ–ಸಮಿತಿಗಳಂತೆ ಶ್ರಮಿಸಿದ್ದಾರೆ.

ಆದರೆ ಇವಾವೂ ಅಖಿಲ ಭಾರತಮಟ್ಟದ–ಅಷ್ಟೇಕೆ ರಾಜ್ಯಮಟ್ಟದ ಸಂಸ್ಥೆಗಳಾಗಿಯೂ ದುಡಿಯಲಿಲ್ಲ. ವ್ಯಕ್ತಿ ಪ್ರಯತ್ನವಾಗಿ ಯಾರೊಬ್ಬರಿಂದಲೂ ರಾಷ್ಟ್ರಮಟ್ಟದಲ್ಲಿ ಶರಣರ ಆಲೋಚನೆಗಳನ್ನು ಹಬ್ಬಿಸುವುದಾಗಲಿಲ್ಲ. ಹೋಗಲಿ, ಅಲ್ಪ ಪರಿಚಯವನ್ನಾಗಲೀ, ಕಿಂಚಿತ್ ಜಿಜ್ಞಾಸೆಯನ್ನಾಗಲೀ ಉಂಟುಮಾಡುವುದು ಕೂಡ ಸಾಧ್ಯವಾಗಲಿಲ್ಲ.

**ಸಂತತ**

ಇಷ್ಟುಮಾತ್ರ ನಿಜ ! ಇಲ್ಲಿಯವರೆಗೆ ಸಂಸ್ಥೆಯಿಂದ ಸಂಸ್ಥೆಗೆ—ವ್ಯಕ್ತಿಯಿಂದ ವ್ಯಕ್ತಿಗೆ ಶರಣತತ್ವಗಳು ಎಲ್ಲಿಯೂ ಹರಿಗಡಿಯದಂತೆ ಸಂತತವಾಗಿ ಚಾಚಿಕೊಂಡು ಬರಲು–ಕೇವಲ ಕರ್ನಾಟಕದಲ್ಲಿ ಮಾತ್ರ–ಇವುಗಳಿಂದ ಸಹಾಯವಾಗಿದೆ. ಅಲ್ಲಲ್ಲಿ ಉದ್ದೀಪನೆ ಉಂಟಾಗಿ ಉತ್ಸಾಹ ಚಿಮ್ಮಲೂ ಕಾರಣವಾಗಿದೆ.

ಇಂಥದೊಂದು ಉದ್ದೀಪನೆಯ ಫಲ " ಬಸವಸಮಿತಿ " ಎಂದರೆ ತಪ್ಪೇನಲ್ಲ. ಮಠ–ಸಂಸ್ಥೆ–ಮಹಾಸಭೆಗಳು ಇಲ್ಲಿಯವರೆಗೆ ಮಾಡಿದ ಕೆಲಸ ಸ್ತುತ್ಯವೇ ಆಗಿದ್ದರೂ ಅವು ಮತೀಯ ತೆರೆಯಿಂದ ಮುಕ್ತವಾಗಿ ಕಾಣಿಸಿಕೊಳ್ಳಲಿಲ್ಲ. ಸಕಲ ಜೀವಾತ್ಮರ ಲೇಸಿಗಾಗಿಯೇ " ಶರಣರ ತತ್ವಗಳು ತುಡಿದಿದ್ದರೂ ಅವು ದುರ್ದೈವದಿಂದ ಕೇವಲ ಒಂದು ವರ್ಗವಾಗಿ ಪರಿಣಮಿಸಿರುವ " ವೀರಶೈವ "ಕ್ಕಾಗಿ ಎಂದು ವೀರಶೈವೇತರರು ಭಾವಿಸಿದರು. ಸ್ವತಃ ವೀರಶೈವರನೇಕರು ಆ ತತ್ವಗಳೆಲ್ಲ ತಮ್ಮ ಗುತ್ತಿಗೆಯೇನೋ ಎಂಬಂತೆ ವರ್ತಿಸಿದರು. ಆಗೀಗ ವೀರಶೈವರಲ್ಲದವರು ಶರಣತತ್ವಗಳ ವಿವೇಚನೆ ನಡೆಸಿದ್ದೇ ಆಗಿದ್ದರೆ, ಅವರ ವಿವೇಚನೆಗಳಲ್ಲಿ ಕೊಂಕನ್ನು ಅರಸಿ ದೂಷಿಸುವುದಕ್ಕೂ ಮೊದಲಾಯಿತು. ಇದರಿಂದ ವೀರಶೈವೇತರರು ಕೂಡ ಶರಣತತ್ವಗಳ ವಿವೇಚನೆಗೆ ಹಿಂದೇಟು ಹಾಕತೊಡಗಿದರು; ಇಲ್ಲವೆ ಬೆದರಿದರು; ಮತ್ತೆ ಕೆಲವರು ತುಟಿ ಹೊಲಿದುಕೊಂಡರು; ಇಲ್ಲವೆ ಅವರೂ ಕೊಂಕು ದೃಷ್ಟಿಯಿಂದಲೇ ಅಳೆದು ನೋಡತೊಡಗಿದರು. ಹೀಗಾಗಿ ಶರಣತತ್ವಗಳು ಮತೀಯ ಸಂಕೋಲೆಯಲ್ಲಿ ನರಳತೊಡಗಿದ್ದವು. ಆರೋಗ್ಯಕರ ದೃಷ್ಟಿಯನ್ನು ತಳೆದ ಒಬ್ಬಿಬ್ಬರನ್ನು ಬಿಟ್ಟರೆ ಬಹುಸಂಖ್ಯಾತರು ಪರಸ್ಪರ ಅಸ್ಪೃಶ್ಯತೆಯಿಂದಲೇ ಆಲೋಚಿಸಹತ್ತಿದರು.

ಮೂಲತಃ ವೀರಶೈವವು ಒಂದು ಮತವಾಗಿರದೆ ಒಂದು ಮಾರ್ಗವಾಗಿದ್ದರೂ ಅದನ್ನು ಒಂದು ಮಾರ್ಗವೆಂಬಂತೆ ವೀರಶೈವರಾದವರು ನಡೆಸಿಕೊಂಡು ಬರಲಿಲ್ಲ. ಇದರ ಪೂರ್ತಿ ಜವಾಬುದಾರಿ ಮಠಗಳ ಮೇಲೆ ಇದೆ. ಸಕಲ ಜೀವಾತ್ಮರ ಲೇಸಿಗಾಗಿ ಒಬ್ಬಿಬ್ಬರು ಸ್ವಾಮಿಗಳನ್ನು ಬಿಟ್ಟರೆ ಬೇರೆ ಇನ್ನಾರೂ ತಮ್ಮನ್ನು ತಾವು ತೆರೆದಿಟ್ಟುಕೊಳ್ಳಲಿಲ್ಲ. ವೇದಿಕೆಯಲ್ಲೊಂದು ಮಾತಾಡಿ ಬಾಗಿಲ ದಾಟಿ ಒಂದು ಮಾತಾಡ ಹತ್ತಿದರು. ಅಷ್ಟೇಕೆ ? ವೀರಶೈವರೇ ಸ್ವತಃ ತಮ್ಮ ಒಳ ಪಂಗಡಗಳನ್ನು ಬಿಡಲು ಈಗಲೂ ಸಿದ್ಧರಿಲ್ಲ. ಉಳಿದ ಜನರಿಗೆ ಈ ಸಂಗತಿ ತಿಳಿಯಲು ಬಹಳ ಸಮಯ ಹಿಡಿಯಲಿಲ್ಲ. ವೀರಶೈವದಿಂದ ತಾವು ಅನ್ಯತ್ರರೇ ಎಂಬ ಅವರ ಭಾವನೆಗಳು ಸಹಜವಾಗಿಯೇ ಬಲಗೊಂಡವು. ಎಲ್ಲ ಕುಲಗೋತ್ರ ಕಂದಾಚಾರಗಳನ್ನು ತೊಡೆದು ಹಾಕಲೆಂದೇ ಮೈವೆತ್ತಿದ ವೀರಶೈವವು ಸಕಲ ಅನಿಷ್ಟಗಳನ್ನು ಒಳಗೊಂಡ ಕಂದಾಚಾರಗಳ ಕೊಂಪೆಯಾಗಿ ಪರಿಣಮಿಸಿತು. ಜಾತಿ–ಮತ–ಪಂಥಗಳ ಎಲ್ಲ ಲಕ್ಷಣಗಳೂ ಅದರಲ್ಲಿ ಕಾಣಿಸಿಕೊಂಡವು. ನೂರಾರು ಜಾತಿಗಳ ಸಾಲಿನಲ್ಲಿ ಇದೂ ಒಂದು ನೂರೆಂಟನೆಯ ಜಾತಿಯಾಗಿ ಸೇರ್ಪಡೆಯಾಯಿತು. ಅಷ್ಟೆ !

## ಅಂಗಡಿ ಫಲಕಗಳು

ಬಸವಣ್ಣನವರು ಮತ್ತು ಶರಣರೆಲ್ಲರು ಮಾಡಿದ ವೀರಶೈವದ ಪುನರುತ್ಥಾನವೆನ್ನಿ — ಪ್ರತಿಷ್ಠಾಪನೆಯೆನ್ನಿ — ಅದೇ ಬೇರೆ. ಇವೊತ್ತಿನ ವೀರಶೈವವೇ ಬೇರೆ. ಇವೊತ್ತಿನದು ಸ್ಪಷ್ಟವಾಗಿ ವರ್ಣಾಶ್ರಮ ಸ್ವರೂಪದ ಒಂದು ಜಾತಿ. ಬಸವಣ್ಣನವರ ಹೆಸರು ದುರ್ದೈವದಿಂದ ಈ ಜಾತೀಯತೆಗೆ ದುರುಪಯೋಗ ಮಾಡಿಕೊಳ್ಳಲ್ಪಟ್ಟಿತು. ಪ್ರಗತಿ ದೃಷ್ಟಿಯು ಕಲ್ಯಾಣದ ಶಿವಶರಣರ ಹೆಸರಿನ ಮೇಲೆ ನಿತ್ಯವೊಂದರಂತೆ ನಡೆದಿರುವ ಹುನ್ನಾರಗಳಿಂದ ಅನೇಕರು ಬೇಸತ್ತರು. ನಿರಾಸಕ್ತರೂ ಆದರು. ಹೆಸರಿನ ಉಪಯೋಗ ಇಲ್ಲಿಯವರೆಗೆ ಬಂತು–ಖಾನಾವಳಿ, ಹೋಟೆಲ್ಲು, ಚುಟ್ಟಾ, ಪಾನ ಬೀಡಿ ಅಂಗಡಿಗಳ ಫಲಕಗಳ ತುಂಬೆಲ್ಲ ಅವೇ ಹೆಸರುಗಳು ಪ್ರತಿಫಲಿಸಿದುವು.

ಈ ಮತೀಯ ಸಂಕೋಲೆಯಿಂದ ಶರಣತತ್ವಗಳನ್ನು ಪಾರುಗೊಳಿಸುವುದು ಹೇಗೆಂಬುದೇ ಹಲವರ ಚಿಂತನೆಯಾಯಿತು. ಇವರಲ್ಲಿ ವೀರಶೈವರೂ ಇದ್ದಾರೆ. ವೀರಶೈವೇತರರೂ ಇದ್ದಾರೆ. ಇಂಥ ಚಿಂತನೆಯ ಅಮೂರ್ತ ಕ್ಷಣದಲ್ಲಿ 'ಬಸವ ಸಮಿತಿ'ಯ ಕಲ್ಪನೆ ಮೈದಾಳಿತೆನ್ನಬಹುದು. ಯಾವುದೇ ಮತ–ಪಂಥಗಳ

ನೆರಳನ್ನಾಶ್ರಯಿಸದ ಇಂಥ ಸಂಸ್ಥೆಗಳು ಪ್ರಾದುರ್‌ಭವಿಸಲು ಬೇರೆ ಕಾರಣಗಳು ಅಷ್ಟಾಗಿರಲಾರವೆಂದು ನನ್ನ ಭಾವನೆ. ಬಸವಸಮಿತಿಗೆ ಯಾರ್‍ಯಾರು ಸದಸ್ಯರಾಗಿದ್ದಾರೆಂಬುದನ್ನು ಯಾರಾದರೂ ಪರಿಶೀಲಿಸಿ ನೋಡಿದರೆ ಈ ಮಾತಿಗೆ ಸಾಕ್ಷಿ ದೊರಕುತ್ತದೆ. ವೀರಶೈವರಂತೆ ವೀರಶೈವೇತರರೂ ಬಹು ಸಂಖ್ಯೆಯಲ್ಲಿ ಈ ಸಮಿತಿಗೆ ಸದಸ್ಯರಾಗಿದ್ದಾರೆ.

**ಸಾಕ್ಷಿ**

ವೀರಶೈವ ಮಹಾಸಭೆಗೆ ಸದಸ್ಯನಾಗುವವನು ವೀರಶೈವನೇ ಆಗಿರತಕ್ಕದ್ದೆಂಬ ನಿಯಮವಿದೆಯಂತೆ. ಅಂಥ ನಿಯಮ ಬಸವ ಸಮಿತಿಗೆ ಇಲ್ಲವೆಬುಂದೇ ಅದರ ಶಿವಶರಣತನಕ್ಕೆ ಸಾಕ್ಷಿ. ಲಿಂಗಧಾರಿಗಳು ಮಾತ್ರವೇ ವೀರಶೈವರೆಂಬುದು ಒಂದು ದೃಷ್ಟಿ ಇರಬಹುದು. ಲಿಂಗಧಾರಿಗಳಲ್ಲದವರಲ್ಲಿ ತತ್ವಶಃ ವೀರಶೈವರಾದವರು ಏಕಿರಬಾರದು ? ಲಿಂಗಧಾರಿಗಳಿದ್ದೂ ವೀರಶೈವಕ್ಕೆ ವಿರೋಧವಾದವರು ಎಷ್ಟು ಜನರಿಲ್ಲ ? ಲಿಂಗವು ಮನುಷ್ಯ ಸರಿಸಮಾನತೆಯ ಸಂಕೇತ ಮತ್ತು ಆಧ್ಯಾತ್ಮಿಕ ಸಾಧನೆಯಲ್ಲಿ ಸಹಕರಿಸುವ ಒಂದು ಸಾಧನ ಮಾತ್ರ ! ಲಿಂಗಧಾರಣೆಗಿಂತ ಮುಖ್ಯವಾದದ್ದೆಂದರೆ ತತ್ವಗಳ ತಿಳುವಳಿಕೆ ಮತ್ತು ಆಚರಣೆ.

ಬಸವ ಸಮಿತಿಯ ಎದುರಿಗಿದ್ದ ಪ್ರಧಾನ ಅಂಶವೆಂದರೆ ಶರಣರ ತತ್ವಪ್ರಿಹಿಗಳನ್ನು ಬಿತ್ತುವುದು. ಇವಕ್ಕೆ ನೆರವಾದವರೆಲ್ಲ ಬಸವಾನುಯಾಯಿಗಳೇ, ಸಮಿತಿಯ ಸದಸ್ಯರೇ. ಇವೊತ್ತಿನ ವೈಜ್ಞಾನಿಕ ಜಗತ್ತಿಗೆ ಕೂಡ ಮಾರ್ಗದರ್ಶಕವೂ ವೈಜ್ಞಾನಿಕವೂ ಆಗಿರುವ ಈ ತತ್ವಗಳು ಎಷ್ಟು ಬೇಗ ಪ್ರಚುರಗೊಳ್ಳುತ್ತವೋ ಅಷ್ಟು ಕ್ಷೇಮವೆಂಬ ಭಾವನೆಯಿಂದ ಈ ಸಮಿತಿ ಪ್ರೇರಿತವಾಯಿತು.

ಬಸವ ಸಮಿತಿಯ ಈ ಉದ್ದೇಶವನ್ನು ಗಮನಿಸಿದ ಪ್ರಾಗತಿಕ ವಿಚಾರಕರೆಲ್ಲರಿಗೂ ಆಗ ಎಲ್ಲಿಲ್ಲದ ಸಂತೋಷ ಉಂಟಾಯಿತು. ಅದರ ಅಧ್ಯಕ್ಷರಾಗಿ ಕರ್ನಾಟಕ ರಾಜ್ಯದ ಆಗಿನ ಆಹಾರ ಮಂತ್ರಿಗಳಾಗಿದ್ದ ಶ್ರೀ ಬಿ. ಡಿ. ಜತ್ತಿಯವರು ದೊರೆತರು. ಅವರು ಅಧ್ಯಕ್ಷರಾದುದರಿಂದ ಬಸವ ತತ್ವಗಳಿಗೆ ರಾಷ್ಟ್ರ ಮಟ್ಟದ ವ್ಯಾಪಕತೆ ತಂದು ಕೊಡುತ್ತಾರೆಂದು ಹಲವರಿಗೆ ಹಿಗ್ಗುಂಟಾದರೆ, ಶ್ರೀ ಬಿ. ಡಿ. ಜತ್ತಿಯವರು ಮೂಲತಃ ಓರ್ವ ರಾಜಕಾರಣಿಗಳಾಗಿರುವುದರಿಂದ ಅವರ ರಾಜಕೀಯ ಪ್ರೋಕಸ್ಸಿಗೆ ಇದು ಸಹಾಯಕವಾಗುತ್ತದೆ

ಎಂಬ ಶಂಕೆ ಇನ್ನೂ ಕೆಲವರಲ್ಲಿ ಮೂಡದೆ ಇರಲಿಲ್ಲ. ಈಗಲೂ ಅದು ಸಂಪೂರ್ಣ ಅಳಿಸಿ ಹೋಗಿರುವಂತೆ ಕಾಣಿಸುವುದಿಲ್ಲ.

ಶ್ರೀ ಬಿ. ಡಿ. ಜತ್ತಿ ಅವರಿಗೆ ಬಸವ ತತ್ವಗಳತ್ತ ಯಾವಾಗ ಮನಸ್ಸು ವಾಲಿತೋ ಅಷ್ಟಾಗಿ ತಿಳಿದು ಬರುವುದಿಲ್ಲ; ಅವರು ಆಹಾರ ಮಂತ್ರಿಗಳಾಗಿದ್ದಾಗ 'ಬಸವ ಸಮಿತಿ' ಸ್ಥಾಪನೆ ಬಗ್ಗೆ ಧೃಡ ನಿಷ್ಠೆಯನ್ನು ತಾಳಿದ್ದು ಗೊತ್ತಾಗುತ್ತದೆ. ಅದಕ್ಕಿಂತಲೂ ಪೂರ್ವದಲ್ಲಿ ಅವರು ಕರ್ನಾಟಕದ ಮುಖ್ಯ ಮಂತ್ರಿಗಳಾಗಿದ್ದರು. ಆ ಸಂದರ್ಭದಲ್ಲಿ ಈ ಯಾವ ಪೂರ್ವ ಸೂಚನೆಗಳು ಕಾಣಬರುವುದಿಲ್ಲ. ಯಾವಾಗಲಾದರೂ ಆಗಲಿ, ಅಂತೂ ಅಧಿಕಾರ ಪೀಠವನ್ನಲಂಕರಿಸಿರುವಾಗಲೇ ಅವರು ಇತ್ತ ಒಲುವು ತೋರಿದ್ದು ಗಮನಾರ್ಹವಾಗಿದೆ ಹಲವು ದೃಷ್ಟಿಗಳಿಂದ.

ಪ್ರಾರಂಭದಲ್ಲಿ 'ಬಸವ ಪಾದಯಾತ್ರೆ'ಯನ್ನು ಕೈಕೊಂಡು ಕರ್ನಾಟಕದಲ್ಲಿಯೂ। ಅಭೂತಪೂರ್ವ ಎಚ್ಚರವನ್ನು 'ಬಸವ ಸಮಿತಿ' ತಂದು ಕೊಟ್ಟಿತು. ಶ್ರೀ ಬಿ. ಡಿ. ಜತ್ತಿ ಶ್ರೀ ವಿಶ್ವನಾಥರೆಡ್ಡಿ ಮುಂತಾದವರು ಈ ಸಂದರ್ಭದಲ್ಲಿ ತಮ್ಮನ್ನು ತಾವು ದತ್ತು ಕೊಟ್ಟುಕೊಂಡವರೇನೋ ಎಂಬಂತೆ ದುಡಿದರು. ಬಸವ ಸಮಿತಿಯ ಹಾಗೂ ಬಸವ ತತ್ವಗಳ ಪ್ರಚಾರ ವ್ಯಾಪಕವಾಯಿತು.

## ಶತಮಾನೋತ್ಸವಗಳು

ಬಸವ ಸಮಿತಿಯು ನಂತರ ರಾಷ್ಟ್ರಮಟ್ಟದಲ್ಲಿ ಉತ್ಸವಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಶ್ರೀ ಬಸವೇಶ್ವರ ಅಷ್ಟಶತಮಾನೋತ್ಸವದಂಥ ಐತಿಹಾಸಿಕ ಕಾರ್ಯವನ್ನು ಹಮ್ಮಿಕೊಂಡಿತು. ಕರ್ನಾಟಕದಲ್ಲಿ ಹೇಗೋ ಹಾಗೆಯೇ ಕರ್ನಾಟಕದ ಹೊರಗಡೆಯಲ್ಲಿಯೂ ಅವರ ಶತಮಾನೋತ್ಸವಗಳನ್ನು ಬಲು ಅದ್ದೂರಿಯಿಂದ ನೆರವೇರಿಸಿತು. ಸತಃ ಈ ಕಾರ್ಯದಲ್ಲಿ ಸರಕಾರವೂ ಆಸ್ಥೆ ವಹಿಸಿತು. ರಾಷ್ಟ್ರದ ಉನ್ನತಾಧಿಕಾರವನ್ನು ಹೊಂದಿರುವ ಮಂತ್ರಿ ಮಹೋದಯರಲ್ಲದೆ, ರಾಜ್ಯಪಾಲ – ರಾಷ್ಟ್ರಪತಿಗಳೂ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಬಸವಣ್ಣನವರ ಸಾರ್ವಕಾಲಿಕ ಸತ್ಯಗಳನ್ನು ಪ್ರತಿಪಾದಿಸಿದರು.

ಇಷ್ಟಾದ ಮೇಲೆ "ಬಸವ ಸಮಿತಿ" ಮತ್ತೆ ಯಾವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಿಲ್ಲ. ಶತಮಾನೋತ್ಸವದ ಸಂದರ್ಭದಲ್ಲಿ ಪ್ರಕಟ

ಗೊಂಡ ನಾಲ್ಕಾರು ಗ್ರಂಥಗಳನ್ನು ಬಿಟ್ಟರೆ, ಪ್ರಕಾಶನ ಕಾರ್ಯದಲ್ಲಿ ತದನಂತರವೂ ಅದು ಗಮನಾರ್ಹವೆನ್ನಿಸುವಂಥದ್ದೇನನ್ನೂ ಮಾಡಲಿಲ್ಲ.

ಹೀಗಾದುದಕ್ಕೆ ಮುಖ್ಯ ಕಾರಣವೆಂದರೆ — ರಾಜಕೀಯ ಪಲ್ಲಟ. ಬಸವ ಸಮಿತಿಯ ಸಂಪೂರ್ಣ ಕಾರ್ಯಭಾರವೆಲ್ಲವೂ ಅದರ ಅಧ್ಯಕ್ಷರಾದ ಶ್ರೀ ಬಿ. ಡಿ. ಜತ್ತಿಯವರ ಮೇಲೆಯೇ ಕೇಂದ್ರೀಕೃತವಾಗಿದ್ದರಿಂದ ಶ್ರೀ ಜತ್ತಿಯವರು ಕರ್ನಾಟಕವನ್ನು ಬಿಟ್ಟು ಬೇರೆಡೆಗೆ ಹೋಗುವ ಪ್ರಸಂಗ ಬಂದುದರಿಂದ – ಕೆಲವು ದಿನಗಳ ಮಟ್ಟಿಗೆ ಅದು ನಿಷ್ಕ್ರಿಯೆಗೊಂಡಿತೇನೋ ಎನ್ನಿಸಿತು. ಎಲ್ಲ ಸಂಘ ಸಂಸ್ಥೆಗಳಿಗೆ ಬಂದಡರುವ ರೋಗ ರುಜಿನಗಳು ಇದಕ್ಕೂ ಬಂದಡರಿದವಲ್ಲಾ ! ಅನ್ನಿಸಿತು.

## ಕರ್ತೃತ್ವಶಾಲಿಗಳು

ಈಗಲೂ ಈ ಅನ್ನಿಸಿಕೆಗಳು ಸಂಪೂರ್ಣವಾಗಿ ಇಲ್ಲವಾಗಿವೆಯೆಂದು ಕಂಡುಬರುವುದಿಲ್ಲ. ಶ್ರೀ ಜತ್ತಿಯರೊಬ್ಬರೇ ಬಸವ ಸಮಿತಿಯ ಏನೆಲ್ಲವೂ ಆಗಿ ಮಾಡುವುದು ಸಾಧ್ಯವಿಲ್ಲ. ಇತ್ತೀಚೆಗೆ ಅವರ ಕಾರ್ಯಭಾರಗಳು ಇನ್ನೂ ಹೆಚ್ಚು ವಿಸ್ತೃತಗೊಂಡಿರುವುದರಿಂದ ಬಸವ ಸಮಿತಿಯ ಕಾರ್ಯವು ಅಷ್ಟೊಂದು ಸುಗಮಗೊಂಡೀತೆಂದು ಅನ್ನಿಸುವುದಿಲ್ಲ. ಶ್ರೀ ಜತ್ತಿಯವರ ಪರವಾಗಿ ಅವರಷ್ಟೇ ಉತ್ಸಾಹ ಮತ್ತು ಕಳಕಳಿಯಿಂದ ಕೆಲಸ ಮಾಡುವ ಕರ್ತೃತ್ವಶಾಲಿ ವ್ಯಕ್ತಿಗಳು ಟೊಂಕ ಕಟ್ಟಿ ನಿಂತುಕೊಂಡರೆ ಮತ್ತೆ "ಬಸವ ಸಮಿತಿ" ಕ್ರಿಯಾತ್ಮಕವಾಗಿ ತೊಡಗಬಹುದು. ಅದರ ಉನ್ನತ ಆಸೆ – ಅನ್ನಿಸಿಕೆ – ಆಲೋಚನೆಗಳು ಈಡೇರಬಹುದು.

ಬಸವ ಸಮಿತಿಯ ಬಗ್ಗೆ ಯಾಕೆ ಇಷ್ಟೊಂದು ಆಲೋಚನೆ ಮಾಡಬೇಕಾಗಿದೆಯೆಂದರೆ – ಅದು ರಾಷ್ಟ್ರಮಟ್ಟದ ಸಮಿತಿಯಾಗಿದೆ. ರಾಷ್ಟ್ರಮಟ್ಟದ ನಾಯಕರೇ ಮುಂತಾಗಿ ಪಂಡಿತರೂ ಪ್ರತಿಷ್ಠಿತರೂ ಇದಕ್ಕೆ ಸಹಕಾರ ನೀಡುತ್ತ ಬಂದಿದ್ದಾರೆ. ಬರುತ್ತಾರೆ. ಜಾತಿ, ಮತ, ಪಂಥಗಳ ಸಂಕೋಲೆಗಳಿಂದ ಮುಕ್ತವಾಗಿ ಕೆಲಸ ಮಾಡುವ – ಮಾಡಿದ ಧ್ಯೇಯ ಇದರದಾಗಿದೆ. ಏಕೆಂದರೆ ವ್ಯಾಪಕ ತಳಹದಿಯಿಂದ ಇದು ಪ್ರೇರಿತವಾಗಿದೆ.

ಪ್ರಾಗತಿಕ ವಿಚಾರವಂತರೆಂತೋ ಅಂತು ಶ್ರೀ ಸಾಮಾನ್ಯ ಜನ ವರ್ಗವೂ ಈ ಸಮಿತಿಯ ಬಗ್ಗೆ ಸಂಪೂರ್ಣ ಭರವಸೆ ತಾಳಿದುದುಂಟು. ಪ್ರಾಗ

ತಿಕ ವಿಚಾರಕರು ಇತ್ತೀಚೆಗೆ 'ಬಸವ ಸಮಿತಿ' ಸ್ವಲ್ಪ ಸ್ತಬ್ಧವಾದುದರಿಂದ ನಿರಾಶೆಯನ್ನು ತಾಳಿದ್ದಾರೆ. ಮತ್ತೆ ಕಾರ್ಯಪ್ರವೃತ್ತವಾದರೆ ಅವರೆಲ್ಲರ ಅಖಂಡ ಬೆಂಬಲ ಇದ್ದೇ ಇದೆ. ಸಾಮಾನ್ಯ ಜನವರ್ಗವಂತೂ ಈ ಸಮಿತಿಯ ಬಗ್ಗೆ ಅಪಾರ ವಿಶ್ವಾಸವನ್ನು ತಳೆದಿದೆ. ಅದರ ಅಧ್ಯಕ್ಷರ ಬಗೆಗೆ ಇರುವ ಭಾವನೆಗಳು ತುಂಬಾ ಭಾವುಕ ಹಾಗೂ ಶ್ರದ್ಧಾಪೂರ್ಣವೆನ್ನಬಹುದು. ಅಧ್ಯಕ್ಷರ ಹೆಸರು "ಬಸವಪ್ಪ" ಎಂದಿರುವುದರಿಂದ ಇವರೊಬ್ಬ ಪ್ರತಿ "ಬಸವಣ್ಣ"ನವರೇ ಆಗಿದ್ದಾರೆಂದು ಶ್ಲಾಘನೆಯ ಇತಿ – ಮಿತಿಯನ್ನು ಮೀರಿ ಹೊಗಳಲಾಗುತ್ತಿದೆ. ಈ ಬಗ್ಗೆ ಸ್ವತಃ ಶ್ರೀ ಜತ್ತಿಯವರಿಗೇ ಮುಜುಗುರವಾಗುತ್ತಿರಬಹುದು. ವ್ಯಕ್ತಿ ಶ್ಲಾಘನೆಯಲ್ಲಿ ತೋರುವ ಈ ಉತ್ಸಾಹವೂ ಆ ವ್ಯಕ್ತಿಯ ಕೆಲಸಕ್ಕೆ ಸಹಕರಿಸುವಲ್ಲಿಯೂ ಇಳಿದು ಬಂದೀತೆಂದು ನಂಬಬಹುದಾಗಿದೆ.



## ಆಶೆ — ನಿರಾಶೆ

ಆಸೆಯಿಂದ ಬಿಟ್ಟು ಕಿರಿಯರಿಲ್ಲ
ನಿರಾಸೆಯಿಂದ ಬಿಟ್ಟು ಹಿರಿಯರಿಲ್ಲ
ದಯದಿಂದ ಬಿಟ್ಟು ಧರ್ಮವಿಲ್ಲ
ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ
ಸಚರಾಚರಕ್ಕೆ ಸಕಲೇಶ್ವರ ಬಿಟ್ಟು ದೈವವಿಲ್ಲ.

— ಸಕಳೇಶ ಮಾದರಸ

# ಸಿರಿಗಂಧ ಮಂದಿರದ ವಿಪುಲ ಸಂಪತ್ತಿ !

ಬಯಲ ಮೌನವೆಲ್ಲ ಬಯಸಿ ಕುಡಿದಿಹ ಕೆಚ್ಚು,
ಮಂದಹಾಸದ ಮೊಗದಿ ಭಸಿತ – ರೇಖೆ,
ಮಾತು, ನುಡಿಮುತ್ತುಗಳು ಒಲವಿನಿದುತ್ತುಗಳು
ಮೃದುಹಾಸ ಮಿರುಗುವೊಲು ರಜತರೇಖೆ.

ಕಾಯಕಕ್ಕೊಪ್ಪುವ ಮೊಗವು, ಮೊಗದಿ ಹೊಳೆಯುವ ಕಣ್ಣು
ಕಣ್ಣಕಾಂತಿಯು ಅಜ್ಞ – ರಕ್ಕಸಗೆ ಬಾಣ,
ಶ್ವಾಸದಲಿ ವಿಶ್ವಾಸ, ಕ್ಲೇಶದೊಳು ಸ್ಮಿತಹಾಸ,
ಕಂಡುಂಡ ನಿಮ್ಮೆದೆಯು ಕಾಯಕದ ತಾಣ.

ಸರಳತೆಯ ಎದೆಗಡಲ ವಿರಳ ಮುಕ್ತಾಮಣಿಯು,
ಕನ್ನಡದ ಜಯಸಿರಿಯ ರನ್ನಗನ್ನಡಿಯೇ,
ಭವ್ಯ – ಭಾರತ ಪೀಠದುಪರಾಷ್ಟ್ರಪತಿಯೆನಿಪ
ಭಾರತಾಂಬೆಯ ಕರುಳ ಸಿರಿಗಂಧ ಕುಡಿಯೇ.

ಪ್ರೇಮಜಾಲವ ಬೀಸಿ ಬಿಗಿದಪ್ಪಿ ನಿಷ್ಠೆಯನು,
ಬಸವ ತತ್ವವು ಮಿಡಿವ ಉಸಿರಾಗಿ ಮೊರೆಯೆ,
ಎದೆಯೊಲವಿನಂಬುಧಿಯು ಮೇರೆವರೆದುಕ್ಕುಕ್ಕಿ,
ನಡೆ – ನುಡಿಯೊಳಾ ಬಸವನೊಂದಾಗಿ ಮೆರೆಯೆ.

ಬಸವ ಕಲ್ಯಾಣದೀ ಹೆಬ್ಬಾಗಿಲಲಿ ಮಣಿದು,
ಮಮತೆ – ಕಲ್ಪದ್ರುಮದ ಸ್ನೇಹ – ಸುಮಸೂಸಿ
ಸ್ವಾಗತವ ಗೈಯುವೆವು ಬನ್ನಿ, ಶರಣಾಗ್ರಣಿಯೆ
ಕರೆಯುವೆವು ನಲಿದೆದೆಯ ನಡೆ ಮಡಿಯ ಹಾಸಿ.

ಬಸವ ಚೇತನದೊಡಲ ನವ್ಯ ಕಾಂತಿಯ ಪುಂಜ
ಮನ ಮನದ ಹಣತೆಯಲಿ ಬೆಳಗ ಬನ್ನಿ;
ನೊಂದ ಜಗದೆದೆಗಮೃತ ಬಿಂದುಗಳ ಸುರಿಸುರಿದು
'ಕಲ್ಯಾಣ' ಸತ್ಪಥದಿ ಮುನ್ನಡೆಸ ಬನ್ನಿ

ಬಸವ ಸಮಿತಿಯ ಸರಸಿ ರಾಜಹಂಸರು ನೀವು
ಸಿರಿಗಂಧ ಮಂದಿರದ ವಿಪುಲ ಸಂಪತ್ತಿ.
ಶರಣ ಬಸವರ ವಿಸುತ ದಿವ್ಯಧಾಮಕೆ ಬನ್ನಿ,
ಬನ್ನಿರೊಲವಿನ ನೆಲಕೆ ಬನ್ನಿ, ಶ್ರೀ ಜತ್ತಿ.

● ಎ. ಕೃಷ್ಣ ಸುರಪುರ

---

● [ ಶ್ರೀ ಎ. ಕೃಷ್ಣ ಸುರಪುರ ಅವರು ಬಾಹ್ಯ ನೋಟಕ್ಕೆ ಕವಿಗಳೆಂಬಂತೆ ಕಾಣುವುದೇ ಇಲ್ಲ. ತೆಳ್ಳನೆಯ ಕುಳ್ಳನೆಯ ವ್ಯಕ್ತಿತ್ವ ಮಾತು ಮೃದು — ವಿನಯ ಪೂರ್ಣ. ನಡೆವಳಿಕೆಯೋ ಅತ್ಯಂತ ನಿಗರ್ವಿ — ನಿರಾಡಂಬರ. ಹೊರವೇಷ ಹೇಗೆ ಮೋಸಮಾಡುತ್ತದೆಯೆಂಬುದಕ್ಕೆ ಶ್ರೀ ಕೃಷ್ಣ ಅವರು ನಮ್ಮ ಭಾಗದಲ್ಲಿ ನಿದರ್ಶನವಾಗಿದ್ದಾರೆ.

ಶ್ರೀ ಕೃಷ್ಣ ಅವರು ಕವಿತೆ ಬರೆದರೆ ಹಳೆಗನ್ನಡ ಕಾವ್ಯಗಳ ವಿಪುಲ ಸಂಪತ್ತಿಯೇ ತೆರೆದಿಟ್ಟಂತಾಗುತ್ತದೆ. ಪ್ರಾಥಮಿಕ ಶಾಲಾ ಶಿಕ್ಷಕರಾಗಿರುವ ಅವರಿಗೆ ಆದನ್ನು ತಪ್ಪಿಸಿ ಒಂದೂರು ದತ್ತಿಯ ರಾಜಾಶ್ರಯವನ್ನೇನಾದರೂ ನೀಡಿದರೆ ಈ ಇಪ್ಪತ್ತನೆಯ ಶತಮಾನದಲ್ಲೂ ಅವರು ಚಂಪೂ ಕಾವ್ಯ ಬರೆಯಬಹುದು. — ಸಂ. ]



ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸ್ ಮತ್ತು ರಾಜ್ಯಪಾಲ ಶ್ರೀ ಮೋಹನಲಾಲ ಸುಖಾಡಿಯಾಯೊಂದಿ ?
ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರು



ಭಾರಕ ಸೇವಾದಳದೊಡನೆ ವಕೀಲ ವೃತ್ತಿಯ ಶ್ರೀ ಬಿ. ಡಿ. ಜತ್ತಿ ಅವರು.

# ವಿವೇಕವೇ ಆಕಾರವೆತ್ತಿ ಆಯಿತು ಶ್ರೀ ಜತ್ತಿ

● ಎಂ. ಪಿ. ಜಾಲಿ

● [ ದಕ್ಷ ಅಧಿಕಾರಿಗಳೆಂದು ಹೆಸರು ಪಡೆದಿದ್ದ, ನಿವೃತ್ತ ವಿಭಾಗ ಶಿಕ್ಷಣಾಧಿಕಾರಿ ಶ್ರೀ ಎಂ. ಪಿ. ಜಾಲಿ ಅವರು, ದಕ್ಷ ಆಡಳಿತ ಗಾರರೆಂದು ಹೆಸರು ಪಡೆದಿರುವ ಶ್ರೀ ಬಿ. ಡಿ. ಜತ್ತಿ ಅವರ ಬಗ್ಗೆ ಬರೆಯುತ್ತಿರುವುದು ಅತ್ಯಂತ ಸಮರ್ಪಕವಾದುದು. ಸ್ವತಃ ಶಿಸ್ತಿನ ಮೂರ್ತಿಗಳಾಗಿರುವ ಹಾಗೂ ಸ್ವತಃ ಸರಳ ಜೀವಿ ಆಗಿರುವ ಶ್ರೀ ಜಾಲಿ ಅವರು ಶ್ರೀ ಜತ್ತಿ ಅವರ ಸರಳತೆ ಬಗ್ಗೆ ಬರೆದರೆ ಅಲ್ಲಿ ಅತಿಶಯೋಕ್ತಿಯಾಗಲಿ ಉತ್ಪ್ರೇಕ್ಷೆಯಾಗಲಿ ಇರುವುದಿಲ್ಲವೆಂದು ಭಾವಿಸಬಹುದು. ಶ್ರೀ ಜಾಲಿಯವರು ಮಾತಿನ ಚಮತ್ಕಾರದ ಬರಹಗಾರರಾಗಿರಲಿಕ್ಕಿಲ್ಲ; ಆದರೆ ಶರಣ ತತ್ವವನ್ನು ಚಾಚೂ ತಪ್ಪದೆ ಬಾಳುತ್ತಿರುವ ಅವರಿಗೆ ಶರಣತನದ ಬಗ್ಗೆ ಬರೆಯಲು ಅಧಿಕಾರವಿದೆಯೆಂದು ನಾನು ಭಾವಿಸಿದ್ದೇನೆ. — ಸಂ. ]

ಭಾರತದ ಮಹಾ ಸುಪುತ್ರರಲ್ಲಿ ಒಬ್ಬರಾದ ಮಾನ್ಯ ಶ್ರೀ ಜತ್ತಿ ಸಾಹೇಬರ ವ್ಯಕ್ತಿತ್ವದ ಬಗ್ಗೆ ಬರೆಯುವದು ನನ್ನಂಥವನಿಗೆ ಒಂದು ಎತ್ತರಕ್ಕೆ ಮೀರಿದ ಕೆಲಸ. ಆದಾಗ್ಯೂ ಅವರ ಪರಿಚಯ ನನಗೆ ಎರಡೂವರೆ ದಶಕಗಳಿಂದ ಇರುವದರಿಂದ ಬರೆಯುವ ಸಾಹಸ ಮಾಡಿದ್ದೇನೆ. ಜಮಖಂಡಿ ಕನ್ನಡ ಶಿಕ್ಷಕ–ವಿದ್ಯಾರ್ಥಿಗಳ ತರಬೇತಿ ಕಾಲೇಜಿನ ಕುಲಪತಿ ( ೧೯೫೦ ಇಸ್ವಿಯಲ್ಲಿ ) ಆದಂದಿನಿಂದ ಈ ಮಹಾನುಭಾವರ ಪರಿಚಯ ನನಗಾಗಿದೆ.

ಕಿರಿಯ ವಯದಲ್ಲಿಯೇ ಹಿರಿತನದ ಪಟ್ಟಕ್ಕೇರುವಂಥ ಪ್ರಭಾವಶಾಲಿ ವ್ಯಕ್ತಿತ್ವವನ್ನು ಇವರು ಪಡೆದಿದ್ದರೆಂಬುದು ಆಗಿನ ಜಮಖಂಡಿ ಸಂಸ್ಥಾನದಲ್ಲಿ ದಿವಾಣರ ಹುದ್ದೆಯನ್ನು ಹೊಂದಿದ್ದರೆಂಬ ಸಂಗತಿಯಿಂದ ವಿದಿತವಾಗುತ್ತದೆ. ಆಗಿನಿಂದಲೇ, ಇವರು ಲೋಕವನ್ನು ನೋಡುವ, ಲೋಕದಲ್ಲಿ ಬಾಳುವ ಕಲೆಯನ್ನು ಕರಗತ

ಮಾಡಿಕೊಂಡಿರಬೇಕು. ಸಂಸಾರ ಸಾಗರದ ಆಳ-ಅಳತೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಮನೋಭೂಮಿಕೆಯನ್ನು ಹೊಂದಿರಬೇಕು. ಹುದ್ದೆಯ ನಂತರ ಹುದ್ದೆಗೆ ಒಂದಲ್ಲ ಎರಡಲ್ಲ, ಅನೇಕ ಮಹೋನ್ನತ ಹುದ್ದೆಗಳಿಗೆ ಅನಾಯಾಸವಾಗಿ ಅಂದರೆ ಯಾವ ಅಡೆ-ತಡೆಗಳಿಲ್ಲದೆ ಏರುತ್ತ ಬಂದಿದ್ದಾರೆ. ಎಂಥ ಮಹೋನ್ನತ ಹುದ್ದೆಗೆ ಏರಿದರೂ ಇವರು ಎಂದೂ ಡಂಭಾಚಾರದ ಡೋಲು ಬಾರಿಸಿಲ್ಲ. ಪ್ರಜ್ಞೆ, ಪ್ರಯತ್ನಗಳೆರಡರಿಂದ ಪ್ರಭಾವಶಾಲಿಯಾದ ವ್ಯಕ್ತಿತ್ವವನ್ನು ಬೆಳಸಿಕೊಂಡು ಪುರುಷೋತ್ತಮರಾಗಿದ್ದಾರೆ.

**ಸಮಚಿತ್ತತೆ**

ದೊಡ್ಡವರಲ್ಲಿ ಒಮ್ಮೊಮ್ಮೆ "ಕ್ಷಣಚಿತ್ತ, ಕ್ಷಣಪಿತ್ತ" ಪ್ರವೃತ್ತಿಇದ್ದುದು ನಮಗೆ ಮಾನವ ಇತಿಹಾಸದಿಂದ ಕಂಡುಬಂದ ಸಂಗತಿಯಾಗಿದೆ. ಆದರೆ, ಈ ಮಹನೀಯರಲ್ಲಿ ಯಾವಾಗಲೂ ಸಮಚಿತ್ತತೆ ( Equanimity ) ಇದ್ದುದು ಗಮನಾರ್ಹವಾದ ವಿಷಯವಾಗಿದೆ. ಇದಕ್ಕೆ ಬಲವಾದ ಕಾರಣವೆಂದರೆ ಇವರು ಆದಿಯಲ್ಲಿಯೇ ಶಿವಕೃಪೆಯನ್ನು ಹೊಂದಿರಲಿಕ್ಕೇಬೇಕು. ನೀತಿ, ನಿಯತ್ತುಗಳ ಅಂಕೆಗೆ ಒಳಪಟ್ಟು ನಡೆಯುವದನ್ನು ಇವರು ತಮ್ಮ ಪ್ರೌಢಾವಸ್ಥೆಯಿಂದಲೇ ಕಲಿತಿದ್ದಾರೆ. ಆದುದರಿಂದಲೇ ಇವರ ಅಧಿಕಾರದ ಅಂತಸ್ತು ಏರಿದಂತೆ ನೈತಿಕ ಮಟ್ಟವೂ ಮೇಲೇರುತ್ತ ಹೋಗಿದೆ. ಮೊದಲಿನ ಸಂಸ್ಕಾರವು ಸಾಮಾನ್ಯವಾದಂಥಾದ್ದು ಅಲ್ಲ; ವಜ್ರಲೇಪನವಿದ್ದಂತೆ ಎಂದು ಹಿರಿಯರು ಹೇಳುವದು ಮಿಥ್ಯವಲ್ಲವೆಂಬುದು ಇವರ ಜೀವನದಿಂದ ಕಂಡುಬರುತ್ತದೆ. ವಿವೇಕ ಭ್ರಷ್ಟತೆಯನ್ನು ಇವರು ಮಾಡಿಕೊಳ್ಳದೆ ಇರುವದರಿಂದ ಮಹಾನುಭಾವ ಬಸವಣ್ಣನವರೇ ಇವರ ಕೈಹಿಡಿದು ನಡೆಸುತ್ತಿದ್ದಾರೆಂಬುದು ನಮಗೆ ಭಾಸವಾಗುತ್ತದೆ. ಇವರ ಪೂರ್ಣ ಹೆಸರಾದ "ಬಸಪ್ಪ, ದಾನಪ್ಪ, ಜತ್ತಿ, ಸಾಕೀನ, ಸಾವಳಗಿ" ಇದು ಈ ಮಾತಿಗೆ ಸಾಕಷ್ಟು ಪುಷ್ಟಿಯನ್ನು ಒದಗಿಸುತ್ತದೆ. ಬಸಪ್ಪನವರೇ ! ದಾನ-ಧರ್ಮದ ವಿಚಾರವನ್ನು ಜತನಮಾಡಿಕೊಂಡು ನೀವು ಜೀವನವನ್ನು ಸಾಗಿಸಿದ್ದಾದರೆ ಸಾವನ್ನು ಅಳಿಯುವಂಥ ( ೧೦೦ ವರ್ಷಗಳವರೆಗಾದರೂ ) ಶಕ್ತಿಯನ್ನು ಹೊಂದುವಿರೆಂದು ಅವರ ಪೂರ್ವಜರು ಆಶೀರ್ವಾದವನ್ನು ಮಾಡಿರಲಿಕ್ಕೆ ಸಾಕು. ಸಾಮಾಜಿಕ ದೋಷಗಳನ್ನು ನಿವಾರಿಸುವಲ್ಲಿ ಸಮರ್ಥವಾದ ಸಾಹಿತ್ಯವೆಂದರೆ ವಚನ ಸಾಹಿತ್ಯ. ಈ ಸಾಹಿತ್ಯದಲ್ಲಿ ಬರವಣಿಗೆಗೂ ನಡತೆಗೂ ನಿಕಟ ಸಂಬಂಧವಿದೆ. ಈ ಸಾಹಿತ್ಯದ ಅಭ್ಯಾಸ ಮಾಡುವ ಗೀಳು ನಮ್ಮ ಜತ್ತಿಸಾಹೇಬರಿಗೆ ಬಹಳ ವರ್ಷಗಳಿಂದ ಹಿಡಿದಿದೆ. ಅಂತೆಯೇ ನಡೆ-ನುಡಿಗಳಲ್ಲಿ ಸಮರಸ ತುಂಬಿ ಮಹಾಥಾ

ರ್ಮಿಕ ಬಲಬೆಳೆದು ಬಂದಿದೆ. ಪರೋಪಕಾರವನ್ನೇ ತಮ್ಮ ಸ್ವಾರ್ಥವನ್ನಾಗಿ ಮಾಡಿಕೊಂಡಿದ್ದಾರೆ.

"ಕೊಟ್ಟ ಕುದುರೆಯನ್ನು ಏರಲು ಅರಿಯದೆ ಮತ್ತೊಂದು ಕುದುರೆಯ ಬಯಸುವವರು ವೀರರೂಅಲ್ಲ; ಧೀರರೂಅಲ್ಲ" ಆದರೆ ಜತ್ತಿಸಾಹೇಬರು ಮಾತ್ರ ಯಾವ ಕುದುರೆಯನ್ನೇ ಕೊಡಲಿ ಅದನ್ನೇ ಬಗ್ಗಿಸಿ ದಾರಿಗೆ ತಂದು ಅದನ್ನು ಸಮರ್ಥ ರೀತಿಯಿಂದ ಹತ್ತಿದ್ದಾರೆ. ಈ ಸಂದರ್ಭದಲ್ಲಿ ಒಂದು ಇಂಗ್ಲಿಷ್ ನಾಣ್ಣುಡಿ ನೆನಪಿಗೆ ಬರುತ್ತದೆ. (People who mean to be their own Governors must arm themselves with the power which knowledge gives) ಇಂಥ ಸುಜ್ಞಾನವನ್ನು ಪಡೆದು ತಮ್ಮ ಷ್ಟಕ್ಕೆ ಮೊದಲು governor (ರಾಜ್ಯಪಾಲ) ಆಗಿ ನಂತರ ಭಾರತದ ರಾಜ್ಯ ಗಳ ರಾಜ್ಯಪಾಲರಾಗಿದ್ದಾರೆ. ಇದಾದ ನಂತರ, ಉನ್ನತ ಹುದ್ದೆಯಾದ ಭಾರ ತದ ಉಪರಾಷ್ಟ್ರಪತಿ ಸ್ಥಾನಕ್ಕೆ ಏರಿದ್ದಾರೆ. ಇನ್ನೂ ಏನು ಆಗುವರೋ ಆ ಜಗನ್ನಿಯಾಮಕನಾದ ಬಸವೇಶ್ವರನಿಗೇ ಗೊತ್ತು. ಈ ಎಲ್ಲ ಘಟನೆಗಳಿಂದ, ಜತ್ತಿಸಾಹೇಬರ ಜೀವನದಲ್ಲಿ ವ್ಯಕ್ತಿತ್ವ ಹಿಗ್ಗುತ್ತಾ ಹೋಗಿದೆಯೇ ಹೊರತಾಗಿ ಕುಗ್ಗುತ್ತಾ ಹೋಗಿಲ್ಲ. ಇವರ ಜನಪ್ರಿಯತೆ ಕುಸಿಯತೊಡಗದೆ ದಿನಗಳು ಉರ ಳಿದಂತೆ ಹೆಚ್ಚು ಹೆಚ್ಚು ಕುದುರುತ್ತ ಸಾಗಿದೆ.

## ಅಸಮಾನರು

ಪ್ರಜಾ ಪ್ರಭುತ್ವದಲ್ಲಿ ಎಲ್ಲ ಮಾನವರೂ ಸಮಾನರಾದರೂ ರಾಷ್ಟ್ರದ ಅಧ್ಯಕ್ಷ ಹಾಗೂ ಉಪಾಧ್ಯಕ್ಷರಾದಂಥವರು ಸಮಾನರಲ್ಲಿ ಅಸಮಾನರು, ಸ್ವಲ್ಪ ಅತಿ ಮಾನವರು. ಇವರ ಅತಿ ಮಾನವತ್ವ ಇನ್ನೂ ದೊಡ್ಡ ಪ್ರಮಾಣದಿಂದ ಬೆಳೆಯಲೆಂದು ಹಾರೈಸುತ್ತೇನೆ. ಜತ್ತಿಸಾಹೇಬರ ಎಲ್ಲ ಉತ್ಕರ್ಷಕ್ಕೆ ಅವರ ಧರ್ಮಪತ್ನಿಯರಾದ ಸೌಭಾಗ್ಯವತಿ ಸಂಗಮ್ಮನವರ ಸಹಾಯದ ಹಸ್ತವೂ ಬಲ ವಾದ ಕಾರಣವಾಗಿದೆ. ಅವರು "Nagging wife" ಆಗಿದ್ದರೆ ಜತ್ತಿಸಾಹೇ ಬರು, ಉತ್ಕರ್ಷಕ್ಕೆ ಏರುವುದು ಅಸಾಧ್ಯವಾಗುತ್ತಿತ್ತು. ಭೂತಗಳಿಂದ ಆಗದೇ ಇರುವ ಕೆಲಸಕೂಡ ಒಮ್ಮೊಮ್ಮೆ ಹೆಣ್ಣುಮಕ್ಕಳಿಂದ ಆಗುತ್ತದೆಂಬ ಮಾತನ್ನು ನೆನೆದಾಗ ಸಂಗಮ್ಮನವರ ಶಕ್ತಿಯ ಅರಿವು ನಮಗೆ ಆಗದೆ ಇರಲಾರದು.

ವಿವೇಕಿಯಾದ ಮನುಷ್ಯ ಎಲ್ಲರಿಗೂ ಬೇಕಾಗುವ ರೀತಿಯಲ್ಲಿ ನಡೆದುಕೊಳ್ಳು ತ್ತಾನೆ. ಒಬ್ಬರಿಗೆ ನೋವಾಗದ ರೀತಿಯಲ್ಲಿ ತನ್ನ ಉದ್ದೇಶವನ್ನು ಸಾಧಿಸಿಕೊ

ಳ್ಳುತ್ತಾನೆ. ಈ ಒಂದು ಶ್ರೇಷ್ಠಗುಣವನ್ನು ನಾವು ಶ್ರೀ ಜತ್ತಿಸಾಹೇಬರ ಜೀವ ನಾಸದುದ್ದಕ್ಕೂ ಕಾಣುತ್ತೇವೆ. ಮಂತ್ರಿಯಾಗಿ ಅಪ್ರಿಯರಾದವರೂ ಅಲ್ಲ; ಮುಖ್ಯಮಂತ್ರಿಯಾಗಿ ಆಪಾದನೆಗಳಿಗೆ ಗುರಿಯಾದವರೂ ಅಲ್ಲ. ಅಲ್ಲದೆ ಒಳ್ಳೆಯವ ರೆಂದೇ ಅನ್ನಿಸಿಕೊಳ್ಳಲುಹೋಗಿ ಆಡಳಿತದ ಬಿಗುವನ್ನು ತಪ್ಪಿಸಿದವರೂ ಅಲ್ಲ. ಬೇರೆಯವರ ಭಾವನೆಗಳಿಗೆ ಧಕ್ಕೆಯುಂಟು ಮಾಡದೆ ತಮ್ಮ ನಿಲುವಿನಲ್ಲಿ ಹೇಗೆ ಅಚಲರಾಗಿರುತ್ತಿದ್ದರು ಎಂಬುದಕ್ಕೆ ಒಂದು ಪ್ರಸಂಗ.

ಪತ್ರಿಕಾ ಛಾಯಾಗ್ರಾಹಕರೊಬ್ಬರು ಒಮ್ಮೆ ಶ್ರೀ ಜತ್ತಿ ಅವರ ಸುಂದರ ಫೋಟೋ ಬಯಸಿ ಮನೆಗೆ ಬಂದರು. ಶ್ರೀ ಜತ್ತಿ ಅವರು ಆಗತಾನೆ ಶಿವಪೂಜೆ ಮುಗಿಸಿಕೊಂಡು ಕುಳಿತ್ತಿದ್ದರು. ಹಣೆಯಲ್ಲಿ ಮೂರು ಬೆರಳಿನ ವಿಭೂತಿ ರಾರಾ ಜಿಸುತ್ತಿದ್ದಿತು. ಫೋಟೋ ತೆಗೆದು ಕೊಳ್ಳಬಹುದೇ ಎಂದು ಆ ಫೋಟೋಗ್ರಾ ಫರನು ಕೇಳಿದಾಗ “ಸಂತೋಷದಿಂದ” ಎಂದವರೆ ಆ ಶಿವಕಳೆಯೊಂದಿಗೆ ಅಂಗಳ ಕ್ಕಿಳಿದರು. ಹಣೆಯಲ್ಲಿನ ವಿಭೂತಿ ಫೋಟೋ ಗ್ರಾಫರನಿಗೆ ಮತೀಯ ಚಿಹ್ನೆಯಾಗಿ ಕಂಡಿತು. ಅನೇಕ ಜನರು ತಮ್ಮ ಫೋಟೋ ಸುಂದರವಾಗಿ ಬರಲೆಂದೋ, ನಾಗರಿಕವಾಗಿ ಬರಲೆಂದೋ ಹಣೆಯ ಮೇಲಿನ ವಿಭೂತಿ ಕೆಡಿಸಿಕೊಂಡು ಫೋಟೋ ತೆಗೆಸಿಕೊಂಡದ್ದನ್ನು ಆತನೋಡಿದ್ದನು. ಶ್ರೀ ಜತ್ತಿ ಅವರೂ ಸುಂದರ ಫೋಟೋ ಬಯಸುತ್ತಾರೆ ಎಂದು ಹಾರೈಸಿ “ಸ್ವಲ್ಪ ಹಣೆಯ ಮೇಲಿನ ವಿಭೂತಿ ಅಳಿಸುತ್ತೀರಾ” ಎಂದು ಕೇಳಿದನು.

## ಸೂಕ್ಷ್ಮ

ನಿಜವಾಗಿಯೂ ಇದೊಂದು ಸೂಕ್ಷ್ಮ ಹಾಗೂ ತಾತ್ವಿಕ ತಾಕಲಾಟದ ಪ್ರಶ್ನೆಯಾಗಿತ್ತು. ಧರ್ಮ ಶೂನ್ಯರಾಗಿದ್ದರೆ ಫೋಟೋಗ್ರಾಫರನ ಒತ್ತಾಯಕ್ಕೆ ಮಣಿದು ವಿಭೂತಿಯನ್ನು ಅಳಿಸಿಕೊಳ್ಳಬಹುದಾಗಿತು. ಧರ್ಮಾಂಧರಾಗಿದ್ದರೆ ಫೋಟೋಗ್ರಾಫರನಿಗೆ ಛೀಮಾರಿಹಾಕಿಕಳಿಸಬಹುದಾಗಿತ್ತು. ಫೋಟೋಗ್ರಾಫ ರನಿಗೆ ಅವಮಾನವಾಗದ ಹಾಗೆ ಬಹಳ ವಿವೇಕ ಪೂರ್ಣರಾಗಿ ಶ್ರೀ ಜತ್ತಿ ಅವರು ಹೀಗೆ ಹೇಳಿದರು. “ನಿಮಗೆ ವಿಭೂತಿಯಿಲ್ಲದ ಫೋಟೋ ಬೇಕಾಗಿದ್ದರೆ ನನ್ನ ಹಣೆಯಮೇಲೆ ವಿಭೂತಿ ಇರದಿರುವ ಸಮಯವನ್ನು ನೋಡಿಕೊಂಡು ಬಂದು ಫೋಟೋ ತೆಗೆದುಕೊಳ್ಳಬಹುದು; ಆಗಬಹುದೇ ?” ಫೋಟೋ. ಗ್ರಾಫರನಿಗೆ ಆಗಲಿಯೆಂದು ಹೇಳದೆ ಗತ್ಯಂತರವೇ ಇರಲಿಲ್ಲ.

ವಿವೇಕಿ ಮನಸ್ಯ ಹೀಗೆ ಪರೀಕ್ಷಾಸಮಯದಿಂದ ಬಲು ಸರಳವಾಗಿ ಪಾರಾಗುತ್ತಾನೆ. ಅಂಥ ವಿವೇಕವೇ ಸಾಕಾರಗೊಂಡು ಶ್ರೀ ಜತ್ತಿ ಆಗಿದೆಯೆನ್ನಬಹುದು. ಅವರ ವಿವೇಕಶಾಲಿತ್ವ ಅವರನ್ನು ಇನ್ನೂ ಮೇಲಕ್ಕೆ ಕೊಂಡೊಯ್ಯುತ್ತದೆಯೆಂದು ಆಶಿ ತಳೆದವರಲ್ಲಿ ನಾನೊಬ್ಬ.



## ಅಂದಗೇಡಿಗಳು

ಅಂಗಕ್ಕೆ ಅಂದ ಮಾಡಿಕೊಂಡು ತಿರುಗುವ ಭಂಗಗೇಡಿಗಳು
ನೀವು ಕೇಳಿರೋ; ಅಂಗಕ್ಕೆ ಅಂದವಾವುದೆಂದರೆ :–
ಗುರುವಿಗೆ ತನುವ ಕೊಟ್ಟಿರುವುದೇ ಚೆಂದ;
ಲಿಂಗಕ್ಕೆ ಮನವ ಕೊಟ್ಟಿರುವುದೇ ಚೆಂದ;
ಜಂಗಮಕ್ಕೆ ಧನವ ಕೊಟ್ಟಿರುವುದೇ ಚೆಂದ;
ಅಷ್ಟಾವರಣದಲ್ಲಿ ನಿಬ್ಬೆರಗಿನಿಂದ ಕೂಡಿ
ಭಕ್ತಿಯೆಂಬ ಸಮುದ್ರದಲ್ಲಿ ಈಸಾಡುವುದೇ ಚೆಂದ.
ಈ ಮಾರ್ಗವ ಬಿಟ್ಟು ಸಂಸಾರವೇ ಅಧಿಕವೆಂದು
ತನ್ನ ಹೆಂಡಿರು ಮಕ್ಕಳು ತನಗೆ ಶಾಶ್ವತವೆಂದು
ಒಂದು ಕಾಸನಾದರೂ ಪರರಿಗೆ ಕೊಡದೆ ತಾವೇ ತಿಂದು,
ನೆಲದಲ್ಲಿ ಮಡಗಿ, ಯಮನ ಕೈಯಲ್ಲಿ ಸಿಲ್ಕಿ,
ನರಕ ಕೊಂಡದಲ್ಲಿ ಮುಳುಗೇಳುವುದೇ ನಿಶ್ಚಯ.
ಇಂಥ ಅಂದಗೇಡಿಗಳ ಮುಖವ ನೋಡಲಾಗದು
ಎಂದಾತ ಅಂಬಿಗರ ಚೌಡಯ್ಯ ನಿಜ ಶರಣನು.

— ಅಂಬಿಗರ ಚೌಡಯ್ಯ

# ಚತುರ — ಚಾಣಾಕ್ಷ ವ್ಯಕ್ತಿ ಶ್ರೀ ಜತ್ತಿ

● ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿಗಳು
ಉಪಾಧ್ಯಕ್ಷರು ಅ. ಭಾ. ವೀರಶೈವ ಮಹಾಸಭೆ

● [ ಆಸ್ಥಾನ ವಿದ್ವಾನ್, ಪಂಡಿತರತ್ನಂ, ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿ ಅವರು ಉದ್ಧಾಮ ಕೀರ್ತನಕಾರರೆಂದೇ ಕರ್ನಾಟಕದಾದ್ಯಂತ ಪರಿಚಿತರಾಗಿದ್ದಾರೆ. ಆದರೆ ಅವರು ಸಾಹಿತಿಗಳ ನಡುವೆ ಸಾಹಿತಿಗಳು, ರಾಜಕಾರಣಿಗಳ ನಡುವೆ ರಾಜಕಾರಣಿಗಳು, ಸಮಾಜ ಸೇವಕರ ನಡುವೆ ಸಮಾಜ ಸೇವಕರು, ಪಂಡಿತರ ನಡುವೆ ಪಂಡಿತರು ಎಂಬಿತ್ಯಾದಿ ಬಹು ಮುಖ ಪ್ರತಿಭೆಯ ಪರಿಚಯ ಬಹಳ ಜನರಿಗಿಲ್ಲ. ವೀರಶೈವ ಮಹಾಸಭೆಯ ಆಧಾರ ಸ್ತಂಭಗಳಲ್ಲೊಬ್ಬರಾದಂತೆ ಬಸವ ಸಮಿತಿಗೂ ಆಧಾರಸ್ತಂಭವಾಗಿದ್ದಾರೆ. ಕರ್ನಾಟಕದ ಸಾಹಿತ್ಯ, ಸಂಸ್ಕೃತಿ, ಕಲೆ, ಪರಂಪರೆ, ಖನಿಜಗಳು, ಮೃಗಗಳು– ಯಾವುದರ ಬಗ್ಗೆಯೇ ಆಗಲಿ ವಿಶೇಷ ತಿಳಿದುಕೊಳ್ಳಬೇಕಾದರೆ ಶ್ರೀ ಶಾಸ್ತ್ರಿ ಅವರನ್ನು ಆಶ್ರಯಿಸಿದರೆ ಸಾಕು; ಎಲ್ಲ ಅನುಮಾನಗಳಿಗೆ ಅಲ್ಲಿ ಆಪ್ಯಾಯಮಾನ ಸಮಾಧಾನ ಸಿಗುತ್ತದೆ. — ಸಂ. ]

ಪ್ರಪಂಚದ ಬಹುದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವೆನಿಸಿರುವ ಭರತ ಖಂಡದ ಉಪರಾಷ್ಟ್ರಪತಿಗಳೂ, ಬಸವ ಸಮಿತಿಯ ಮಾನ್ಯ ಅಧ್ಯಕ್ಷರೂ ಎನಿಸಿರುವ ಶ್ರೀ ಬಿ. ಡಿ. ಜತ್ತಿಯವರನ್ನು ಕುರಿತು ಇಲ್ಲಿ ನಾಲ್ಕು ಮಾತುಗಳನ್ನು ಬರೆಯುತ್ತೀದ್ದೇನೆ. ಶ್ರೀ ಜತ್ತಿಯವರ ಮಾನ್ಯ ಮಿತ್ರರೂ, ಅಭಿಮಾನಿಗಳೂ ಆದವರಿಗೆ ಈ ನನ್ನ ವ್ಯಕ್ತಿ ಚಿತ್ರವನ್ನು ಕುರಿತಾದ ಬರಹವು ಪ್ರೀಯವಾದೀತೆಂದು ನಂಬುತ್ತೇನೆ.

ನಾನು ೧೯೩೬ರಿಂದ ೧೯೪೦ರ ವರೆಗೆ ನನ್ನ ಕೀರ್ತನ ಕಾಯಕದ ನಿಮಿತ್ತವಾಗಿ ಪಿಟೀಲು, ಮೃದಂಗ, ಕಂಜರಿ, ಘಟಂ ಮೊದಲಾದ ವಾದನಗಳನ್ನು ನುಡಿ

ಸುವ ಕಲಾವಿದರನ್ನು ಕೂಡಿಕೊಂಡು ಅಖಂಡ ಕರ್ನಾಟಕವನ್ನು ಸುತ್ತಾಡಿದೆನು. ಆಗ ನನಗೆ ಒಳ್ಳೆಯ ಹರೆಯದ ಕಾಲವಾದ್ದರಿಂದಲೂ, ನಾಡಿನ ಪರಿಸ್ಥಿತಿ ಉತ್ತಮವಾಗಿ ಇದ್ದುದರಿಂದಲೂ ಕನ್ನಡಿಗರಲ್ಲಿ ಕಲಾಭಿವೃದ್ಧಿ ಅಧಿಕವಾಗಿರುವುದರಿಂದಲೂ ನನ್ನ ಸಂಚಾರವು ಸಂತೋಷಪ್ರದವಾಗಿಯೂ, ಲಾಭಪ್ರದವಾಗಿಯೂ ಇತ್ತೆಂದು ಹೇಳಬಹುದು. ಅಂತಹ ಕಾಲದಲ್ಲಿ ಸುಮಾರು ೧೯೪೦ ರ ಸಮಯದಲ್ಲಿ — ನಾನು ಜಮಖಂಡಿಗೆ ಸಂದರ್ಶನವಿತ್ತೆನು. ನಾನು ಬಾಗಲ್ಕೋಟೆಯಿಂದ ಜಮಖಂಡಿಗೆ ಹೋಗುವ ಮೊದಲು ಜಮುಖಂಡಿಯಲ್ಲಿ ಎಲ್ಲಿ ವಸತಿ ಮಾಡಬೇಕೆಂಬ ಬಗ್ಗೆ ಆಲೋಚಿಸಿ ಒಬ್ಬ ದೊಡ್ಡ ಮನುಷ್ಯರಿಂದ ಒಂದು ಪರಿಚಯ ಪತ್ರವನ್ನು ಪಡೆದು ಕೊಂಡೆನು. ಆ ಪತ್ರವನ್ನು ಕೊಟ್ಟ ಹಿರಿಯರು "ಜಮುಖಂಡಿಯಲ್ಲಿ ಈಗ ತಾನೇ ವಕೀಲಿಯನ್ನು ಪ್ರಾರಂಭಿಸಿರುವ ಶ್ರೀ ಬಿ. ಡಿ. ಜತ್ತಿಯವರಿಗೆ ಪತ್ರ ಕೊಟ್ಟಿದ್ದೇನೆ; ಅವರು ಜಂಗಮ ಭಕ್ತರು; ಅಲ್ಲಿ ಹೋದರೆ ನೀವು ಸುಖವಾಗಿ ಪೂಜೆ ಪುನಸ್ಕಾರ ಪ್ರಸಾದ ಪಡೆಯಬಹುದು. ನಿಮ್ಮ ಕೀರ್ತನೆಗಳಿಗೂ ಪ್ರೋತ್ಸಾಹ ಸಿಗಬಹುದು" – ಎಂದು ಹೇಳಿದರು. ಅವರ ಮಾತುಗಳನ್ನು ಕೇಳಿ ನನಗೆ ಸಂತೋಷವಾಯಿತು.

## ದೂರದೃಷ್ಟಿ

ನಾನು ಬಾಗಲ್ಕೋಟೆಯಿಂದ ಜಮುಖಂಡಿಗೆ ಹೊರಡುವ ಮೊದಲು ಶ್ರೀ ಜತ್ತಿಯವರಿಗೆ ಒಂದು ತಂತಿ ವಾರ್ತೆಯನ್ನು ಕಳುಹಿಸಿದೆನು. ಬಸ್ಸಿನಲ್ಲಿ ಜಮುಖಂಡಿಯನ್ನು ತಲುಪಿದಾಗ ಬಸ್ಸು ನಿಲ್ದಾಣದಲ್ಲಿ ಶ್ರೀ ಜತ್ತಿಯವರ ಪರವಾಗಿ ಒಬ್ಬ ಮನುಷ್ಯನು ನಮಗಾಗಿ ಕಾದಿದ್ದನು. ನಾವು ಬಸ್ಸಿನಿಂದ ಇಳಿದ ಕೂಡಲೇ ನಮ್ಮ ಮೇಳದವರ ಕೈಯಲ್ಲಿದ್ದ ಪಿಟೀಲು, ಮೃದಂಗ, ತಂಬೂರಿ ಮೊದಲಾದ ವಾದನಗಳಿಂದ ನಮ್ಮನ್ನು ಗುರ್ತಿಸಿ ಅವನು ನಮ್ಮ ಹತ್ತಿರ ಓಡಿ ಬಂದನು. ಅವನು ನಮ್ಮ ಪೋಶಾಕನ್ನು ನೋಡಿ "ತಾವು ಬಾಗಲ್ಕೋಟೆಯಿಂದ ಬಂದಿರುವಿರೋ ? ಶಿವಮೂರ್ತಿಶಾಸ್ತ್ರಿಗಳು ತಾವೇನೋ !" ಎಂದು ಕೇಳಿದನು. ಆಗ ನಾನು ಅವನ ಜಾಣತನವನ್ನು ನೋಡಿ, "ನೀನು ಯಾರು ? ಯಾರ ಪರವಾಗಿ, ಯಾರಿಗಾಗಿ ಇಲ್ಲಿಗೆ ಬಂದಿರುವೆ ?" ಎಂದು ಕೇಳಿದೆನು. ಅದಕ್ಕೆ ಅವನು "ನಾನು ಜತ್ತಿ ವಕೀಲರ ಅಡತಿ ದುಕಾನಿನ ಕಾರಕೂನನು. ಶಿವಮೂರ್ತಿ ಶಾಸ್ತ್ರಿಗಳು ಬರುತ್ತಾರೆ. ಅವರನ್ನೂ, ಅವರ ಜನರನ್ನೂ ಮನೆಗೆ ಕರೆದುಕೊಂಡು ಬಾ" ಎಂದು ಜತ್ತಿ ವಕೀಲರು ನನ್ನನ್ನು ಕಳುಹಿಸಿದ್ದಾರೆ ಎಂದು ಹೇಳಿದನು. ಆಗ ನಾನು ಕಾರಕೂನನ ಜಾಣತನವನ್ನೂ, ಜತ್ತಿಯವರ ದೂರ ದೃಷ್ಟಿಯ ಸೌಜನ್ಯ

ನನ್ನೂ ಕಂಡು ಬೆರಗಾದೆನು. ನಂತರ ಅವನ ಸಂಗಡ ಜತ್ತಿಯವರ ಮನೆಗೆ ಬಂದೆನು. ಅವರೂ, ಅವರ ಧರ್ಮಪತ್ನಿ ಸಂಗವ್ವನವರೂ ನಮ್ಮನ್ನು ಅಕ್ಕರೆಯಿಂದ ಬರಮಾಡಿಕೊಂಡರು. ನಮಗಾಗಿ ಅವರು ಪ್ರತ್ಯೇಕವಾದ ಸ್ಥಳದ ಏರ್ಪಾಡು ಮಾಡಿದ್ದರು.

ಜತ್ತಿಯವರ ಅಡತಿಯಂಗಡಿಯನ್ನು ಜತ್ತಿಯವರ ಸಹೋದರರು ನೋಡಿಕೊಳ್ಳುತ್ತಿದ್ದರು. ಜತ್ತಿಯವರು ವಕೀಲಿಯನ್ನೂ, ಊರಿನವರ ಯೋಗಕ್ಷೇಮಗಳನ್ನೂ ರಾಜಕೀಯ ವಿಚಾರಗಳನ್ನೂ ತಲೆ ತುಂಬ ತುಂಬಿ ಕೊಂಡಿದ್ದರು. ಜಮಖಂಡಿಯ ರಾಜರಲ್ಲಿಯೂ, ಜನರಲ್ಲಿಯೂ ಅವರಿಗೆ ತುಂಬ ಗೌರವವಿದ್ದಿತು. ಜತ್ತಿಯವರೂ ನಾನೂ ಕರ್ನಾಟಕ ಏಕೀಕರಣ, ಸಂಸ್ಥಾನಗಳ ವಿಲೀನೀಕರಣ, ದೇಶದ ಸ್ವಾತಂತ್ರ್ಯ ಸಾಧನೆ ಮೊದಲಾದ ವಿಷಯಗಳನ್ನು ಕುರಿತು ಮಾತನಾಡಿದೆವು.

## ವಾಮನಮೂರ್ತಿ

ಜತ್ತಿಯವರನ್ನು ಮೊದಲಬಾರಿಗೆ ಕಂಡಾಗಲೇ ಸದ್ಗುಣಶಾಲಿಯಾದ, ಚುರುಕು ಬುದ್ಧಿಯುಳ್ಳ, ಸರಳ ಜೀವನದ ಈ ವಾಮನ ಮೂರ್ತಿಯು ಮುಂದೆ ನಾಡಿನ ಒಬ್ಬ ಮುಂದಾಳಾಗುತ್ತಾನೆ ಎಂಬ ಭಾವನೆಯು ನನ್ನ ಮನಸ್ಸಿಗೆ ಬಂದಿತು. ಜತ್ತಿಯವರನ್ನು ಮೊಟ್ಟ ಮೊದಲು ಕಂಡದ್ದು ಈ ಸಂದರ್ಭದಲ್ಲಿ.

೧೯೫೦ ರ ಸುಮಾರಿನಲ್ಲಿ ಕರ್ನಾಟಕ ಕಾಂಗ್ರೆಸ್ಸಿನಲ್ಲಿ ಎರಡು ಪಕ್ಷಗಳಾದುವು. ಒಂದು ಪಕ್ಷಕ್ಕೆ ಶ್ರೀ ಎಸ್. ನಿಜಲಿಂಗಪ್ಪನವರು ಮುಖಂಡರು. ಇನ್ನೊಂದು ಪಕ್ಷಕ್ಕೆ ಕೈ॥ ಶ್ರೀ ಅಂಬಲಿ ಚನ್ನಬಸಪ್ಪನವರು ಮುಖಂಡರು. ಶ್ರೀ ಎಸ್. ನಿಜಲಿಂಗಪ್ಪನವರಿಗೆ ಎಸ್. ಆರ್. ಕಂಠಿಯವರ ಮತ್ತು ಜಿ. ವಿ. ಹಳ್ಳಿಕೇರಿಯವರ ಬೆಂಬಲ. ಆಗ ಕಂಠಿಯವರು ಬೊಂಬಾಯಿ ಶಾಸನ ಸಭೆಯ ಉಪಾಧ್ಯಕ್ಷರಾಗಿದ್ದರು. ಚನ್ನಬಸಪ್ಪನವರ ಪಕ್ಷಕ್ಕೆ ಸಹಕಾರ ಮಂತ್ರಿ ಎಂ. ಪಿ. ಪಾಟೀಲರು, ಉಪ ಮಂತ್ರಿ ಬಿ. ಡಿ. ಜತ್ತಿಯವರೂ ಶ್ರೀ ಮಾಗಡಿಯವರೂ ಮೊದಲಾದವರು ಬೆಂಬಲವಾಗಿದ್ದರು. ಆಗ ಶಾಸನ ಸಭೆ ಬೊಂಬಾಯಿಯಲ್ಲಿ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ನನಗೆ ಚಿರಪರಿಚಿತರಾಗಿದ್ದ ಶ್ರೀ ಎಂ. ಪಿ. ಪಾಟೀಲರು ಫೋನ್ ಮಾಡಿ ಮುಂಬೈಗೆ ಬಂದು ಶ್ರೀ ಅಂಬಲಿ — ಶ್ರೀ ನಿಜಲಿಂಗಪ್ಪನವರ ಮಧ್ಯ ರಾಜಿ ಉಂಟುಮಾಡಿ ಕರ್ನಾಟಕ ಏಕೀಕರಣ ಸುಲಭ ಸಾಧ್ಯವಾಗುವಂತೆ ಮಾಡಬೇಕೆಂದು ಕೋರಿದರು.

ನಾನು ಕೊಟ್ಟ ಮಾತಿನಂತೆ ಮರುದಿನ ಬೆಳಿಗ್ಗೆ ಬೆಂಗಳೂರಿನಿಂದ ಹೊರಡುವ ಪುಣೆಯ ಗಾಡಿಯಲ್ಲಿ ಮುಂಬಯಿಗೆ ಹೊರಟೆನು. ಗಾಡಿ ವೇಳೆಗೆ ಸರಿಯಾಗಿ ಮುಂಬಯಿಯನ್ನು ಮುಟ್ಟಿತು. ಮರುದಿನ ಬೆಳಿಗ್ಗೆ ನಾನು ಸ್ನಾನ ಪೂಜೆ ಮುಗಿಸಿಕೊಂಡು ಶ್ರೀ ಜತ್ತಿಯವರ ಮನೆಗೆ ಹೊರಟೆನು. ಅಲ್ಲಿ ನನ್ನ ಓಡಾಟಕ್ಕೆ ಶ್ರೀ ಎಂ. ಪಿ. ಪಾಟೀಲರ ಕಾರು ಮೀಸಲಾಗಿತ್ತು. ನನಗೆ ಚಿರಪರಿಚಿತರಾಗಿದ್ದ ಶ್ರೀ ಜತ್ತಿಯವರೂ, ಶ್ರೀ ಅಂಬಲಿಯವರೂ, ನಾನು ಅನಿರೀಕ್ಷಿತವಾಗಿ ಬಂದದ್ದನ್ನು ಕಂಡು ಆಶ್ಚರ್ಯ ಪಟ್ಟರು. ಆಗ ಶ್ರೀ ಜತ್ತಿಯವರು ಬೊಂಬಾಯಿ ರಾಜ್ಯದ ಆರೋಗ್ಯ ಶಾಖೆಯ ಉಪ ಮಂತ್ರಿಗಳಾಗಿದ್ದರು. ಅಂಬಲಿಯವರು ಕರ್ನಾಟಕದಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಶ್ರೀ ಅಂಬಲಿಯವರ ಬೆಂಬಲದಿಂದಲೇ ಶ್ರೀ ಜತ್ತಿಯವರು ಶ್ರೀ ನಿಜಲಿಂಗಪ್ಪನವರನ್ನು ಸೋಲಿಸಿ ವಿಶಾಲ ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾದರೆಂಬ ವಿಷಯ ಎಲ್ಲರಿಗೂ ಗೊತ್ತಿರುವ ಸಂಗತಿ.

## ಸಮಾಗಮ

ನಾನು ಬೊಂಬಾಯಿನಲ್ಲಿ ನಾಲ್ಕಾರು ದಿನ ನಿಲ್ಲಬೇಕಾಯಿತು. ಕರ್ನಾಟಕದ ಎಂ. ಎಲ್. ಎ. ಗಳೆಲ್ಲರನ್ನೂ ಸಂಧಿಸಿ ಮಾತನಾಡಬೇಕಾಯಿತು. ಸರ್ವಶ್ರೀ ಎಸ್. ಆರ್. ಕಂಠಿ, ಜಿ. ವಿ. ಹಳ್ಳಿಕೇರಿ, ಕೆ. ಎಫ್. ಪಾಟೀಲ, ಮಾಗಡಿ ಮೊದಲಾದವರ ಕೂಡೆ ಮಾತು ಕತೆ ನಡೆಸಿದನು. ಶ್ರೀ ಅಂಬಲಿಯವರ ಕಡೆ ಜತ್ತಿಯವರು ಬಲವಾದ ಬೆಂಬಲಿಗರಾಗಿದ್ದರು. ಶ್ರೀ ಕಂಠಿಯವರು ನಿಜಲಿಂಗಪ್ಪನವರ ಅಂಧಭಕ್ತರಾಗಿದ್ದರು. ಶ್ರೀ ಎಂ. ಪಿ. ಪಾಟೀಲರು ಅಂಬಲಿಯವರ ಕಡೆಯಿದ್ದರೂ ನಿಜಲಿಂಗಪ್ಪ — ಅಂಬಲಿ ಸಮಾಗಮ ಅಗತ್ಯವೆಂದು ಭಾವಿಸಿದ್ದರು. ಹೀಗೆ ನಾನು ಬೊಂಬಾಯಿನಲ್ಲಿ ನಡೆಸಿದ ಮಾತುಕತೆಗಳು ಅಂಬಲಿ — ನಿಜಲಿಂಗಪ್ಪನವರ ಸ್ನೇಹ ಅಗತ್ಯವೆಂದೂ, ಇಲ್ಲವಾದಲ್ಲಿ ಏಕೀಕರಣಕ್ಕೆ ಅಪಾಯವೆಂದೂ ಎಲ್ಲರೂ ಭಾವಿಸುವಂತಾಯಿತು. ಈ ಚರ್ಚೆಯು ಫಲವಾಗಿ ಶ್ರೀ ಅಂಬಲಿ ಶ್ರೀ ಜತ್ತಿ, ಶ್ರೀ ಕಂಠಿ, ಒಬ್ಬಿಬ್ಬರು ಶಾಸನ ಸಭಾ ಸದಸ್ಯರೂ ಬೆಂಗಳೂರಿಗೆ ಹೋಗಿ ಶ್ರೀ ನಿಜಲಿಂಗಪ್ಪನವರನ್ನು ಕಂಡು ಕೊನೆಯ ತೀರ್ಮಾನಕ್ಕೆ ಬರಬೇಕೆಂದು ಗೊತ್ತಾಯಿತು.

ಬೊಂಬಾಯಿಯಿಂದ ಬೆಂಗಳೂರಿಗೆ ಬರುವ ಮೊದಲು ಟೆಲಿಫೋನಿನಲ್ಲಿ ಈ ವಿಷಯವನ್ನು ಮುಖ್ಯ ಮಂತ್ರಿ ಶ್ರೀ ಕೆ. ಹನುಮಂತಯ್ಯನವರು, ಗೃಹ ಮಂತ್ರಿ ಎಚ್. ಸಿದ್ಧವೀರಪ್ಪನವರು, ಧರ್ಮಪ್ರಕಾಶ, ಎನ್. ರುದ್ರಯ್ಯನವರು ಮೊದ

ಲಾದವರಿಗೆ ತಿಳಿಸಿದೆನು. ಕರ್ನಾಟಕ ಕಾಂಗ್ರೆಸ್ ಅಧ್ಯಕ್ಷರಾಗಿ ಬೆಂಗಳೂರಿಗೆ ಬರುವ ಶ್ರೀ ಅಂಬಲಿ ಚನ್ನಬಸಪ್ಪನವರನ್ನು ಸರ್ಕಾರದ ಮುಖ್ಯ ಅತಿಥಿಯಾಗಿ ಬರಮಾಡಿಕೊಳ್ಳಬೇಕೆಂದು ಶ್ರೀ ಹನುಮಂತಯ್ಯನವರನ್ನು ಕೇಳಿಕೊಂಡೆನು. ನನ್ನ ಈ ಕೋರಿಕೆಯನ್ನು ಶ್ರೀ ಕೆ. ಹನುಮಂತಯ್ಯನವರು ಗೌರವದಿಂದ ಅಂಗೀ ಕರಿಸಿದರು. ಈ ವಿಷಯಗಳನ್ನೆಲ್ಲಾ ಆಗ ಬೆಂಗಳೂರಿನಲ್ಲಿದ್ದ ಶ್ರೀ ಎಸ್. ನಿಜ ಲಿಂಗಪ್ಪನವರಿಗೆ ಟೆಲಿಫೋನಿನ ಮೂಲಕ ತಿಳಿಸಲಾಯಿತು. ಅದರಂತೆ ಬೆಂಗ ಳೂರಿಗೆ ಬಂದ ಕರ್ಣಾಟಕದ ಮುಖಂಡರುಗಳನ್ನು ರೈಲು ನಿಲ್ದಾಣದಲ್ಲಿ ವೈಭವ ದಿಂದ, ಏಕೀಕರಣ ಸಂಘದ ಪರವಾಗಿ ಸ್ವಾಗತಿಸಲಾಯಿತು. ಈ ಮೊದಲೇ ನಿಶ್ಚ ಯವಾಗಿದ್ದಂತೆ ಶ್ರೀ ಅಂಬಲಿಯವರು ಸರ್ಕಾರದ ಅತಿಥಿಗಳಾದರು. ಶ್ರೀ ಜತ್ತಿ, ಕಂಠಿ, ಮೊದಲಾದವರು ಏಕೀಕರಣದ ಅತಿಥಿಗಳಾಗಿ ಬೆಂಗಳೂರು ತಾಜ್‌ಮಹಲ್ ಹೋಟೇಲ್‌ನಲ್ಲಿ ಉಳಿದು ಕೊಂಡರು.

ನಿಜಲಿಂಗಪ್ಪ — ಅಂಬಲಿ ಐಕಮತ್ಯಕ್ಕಾಗಿ ನಾನು, ಧರ್ಮಪ್ರಕಾಶ, ಎನ್. ರುದ್ರಯ್ಯನವರೂ ನಾಲ್ಕಾರು ದಿನ ಓಡಾಡಿದೆವು. ಮೊದ ಮೊದಲು ಪರಿಸ್ಥಿತಿ ಬಿರುಸಾಗಿದ್ದರೂ ಕಡೆ ಕಡೆಗೆ ಸರಳವಾಯಿತು. ಈ ಕಾರ್ಯದಲ್ಲಿ ಶ್ರೀ ಕೆ. ಹನು ಮಂತಯ್ಯನವರೂ, ಎಚ್. ಸಿದ್ಧವೀರಪ್ಪನವರೂ, ಶ್ರೀ ಜತ್ತಿಯವರೂ, ಶ್ರೀ ಕಂಠಿ ಯವರೂ ಬಹಳವಾಗಿ ಸಹಕರಿಸಿದರು. ಕಡೆಗೆ ನಮ್ಮಗಳ ಅಂತಃಕಲಹದಿಂದ ಏಕೀಕರಣಕ್ಕೆ ಅಡಚಣೆಯಾಗಬಾರದೆಂದು ಇಬ್ಬರೂ ರಾಜಿಗೆ ಒಪ್ಪಿಕೊಂಡರು.

ಏಕೀಕರಣವನ್ನು ಸುಗಮಮಗೊಳಿಸುವ ಸಲುವಾಗಿ ಆಗ ನೀಲಗಿರಿ ಅರ ಅರಮನೆಯಲ್ಲಿ ವಿಶ್ರಾಂತಿಯಲ್ಲಿದ್ದ ಶ್ರೀ ಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರರನ್ನು ಕಾಣಬೇಕೆಂದು ನಿರ್ಧಾರವಾಯಿತು.

## ಸತ್ಕಾರಕೂಟ

ಮರುದಿನ ನೀಲಗಿರಿಯ ಅರಮನೆಯಲ್ಲಿ ಸಂಜೆ ಆರುಗಂಟೆಗೆ ಶ್ರೀಮನ್ಮ ಹಾರಾಜರನ್ನು ಭೇಟಿಮಾಡಲಾಯಿತು. ಏಕೀಕರಣ ಧುರೀಣರ ಗೌರವಾರ್ಥ ಮಹಾರಾಜರು ಒಂದು ಔತಣಕೂಟ ಏರ್ಪಡಿಸಿದ್ದರು. ಶ್ರೀಯುತರಾದ ಅಂಬಲಿ ಚನ್ನಬಸಪ್ಪನವರು, ಶ್ರೀ ಜತ್ತಿ, ಶ್ರೀ ಕಂಠಿ ಮತ್ತು ಬೋಂಬಾಯಿನ ಇಬ್ಬರು ಎಂ. ಎಲ್ ಎ. ಗಳು ಅವರ ಸಂಗಡ ನಾನೂ ಆ ಕೂಟದಲ್ಲಿ ಭಾಗವಹಿಸಿದ್ದೆವು. ಈ ಕೂಟದ ಏರ್ಪಾಡನ್ನು ಮಹಾರಾಜರ ಆಪ್ತಕಾರ್ಯದರ್ಶಿ ಮೇಜರ್ ಎಲ್. ಮಹದೇವಯ್ಯನವರು ತೃಪ್ತಿಕರವಾಗಿ ಏರ್ಪಡಿಸಿದ್ದರು. ನಾನು ಮಹಾರಾಜರಿಗೆ

ಎಲ್ಲರ ಪರಿಚಯವನ್ನೂ, ಬಂದ ಉದ್ದೇಶವನ್ನೂ ಅರಿಕೆ ಮಾಡಿದೆನು. ಆಗ ಮಹಾರಾಜರು ಕರ್ನಾಟಕ ಏಕೀಕರಣದ ವಿಷಯವನ್ನು ಪ್ರಸ್ತಾಪಕ್ಕೆ ತೆಗೆದುಕೊಂಡು ಕರ್ನಾಟಕದ ಮಹತ್ವ, ಇತಿಹಾಸ, ಸಾಹಿತ್ಯ ಸಂಸ್ಕೃತಿಗಳ ವಿಚಾರ ಪ್ರಸ್ತಾಪಿಸಿ :

## ವಿಶ್ವಮಾನ್ಯ

" ಭರತಖಂಡದಲ್ಲಿಯೇ ಕನ್ನಡನಾಡು ಅಗ್ರಸ್ಥಾನ ಪಡೆಯಬೇಕಾದರೆ ಕರ್ನಾಟಕವು ಒಂದಾಗಬೇಕು. ನಮ್ಮ ಸಿಂಹಾಸನಕ್ಕೆ ಕರ್ನಾಟಕ ರತ್ನ ಸಿಂಹಾಸನವೆಂದು ಹೆಸರಿದೆ. ಕನ್ನಡದ ಅಭಿಮಾನಿಗಳು ಈ ಕಾರ್ಯವನ್ನು ಸಾಧಿಸಬೇಕು. ಕನ್ನಡದ ಗಡಿಗಳು ಕೈಬಿಟ್ಟುಹೋಗಿವೆ. ಇವುಗಳನ್ನು ಘಟನಾತ್ಮಕವಾಗಿ ಪ್ರಯತ್ನಿಸಿ ದೊರಕಿಸಿಕೊಳ್ಳಬೇಕು. ಲೋಹಗಳಲ್ಲೆಲ್ಲಾ ಶ್ರೇಷ್ಠವಾದ ಚಿನ್ನ, ಪ್ರಾಣಿಗಳಲ್ಲೆಲ್ಲಾ ಉತ್ತುಂಗವಾದ ಆನೆ, ವೃಕ್ಷಗಳಲ್ಲಿ ಶ್ರೇಷ್ಠವಾದ ಶ್ರೀಗಂಧ, ನದಿಗಳಲ್ಲಿ ಪವಿತ್ರವಾದ ಕಾವೇರಿ, ಇವು ಇರುವುದು ನಮ್ಮ ಕರ್ನಾಟಕದಲ್ಲಿ. ನಮ್ಮ ದೇಶದ ಶಿಲ್ಪವು ವಿಶ್ವದಲ್ಲಿಯೇ ಉನ್ನತವಾದುದು. ಎಲ್ಲೋರ, ಅಜಂತ, ಕನ್ಹೇರಿ, ಎಲಿಫೆಂಟಾ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಶ್ರವಣಬೆಳಗೊಳ, ಶೃಂಗೇರಿ, ಹಂಪೆ, ಬಿಜಾಪುರ, ಮೊದಲಾದ ಕಡೆಗಳಲ್ಲಿರುವ ಅಪೂರ್ವವಾದ ದೇವಾಲಯಗಳು ಕನ್ನಡಿಗರಿಗೆ ಕೀರ್ತಿತರುವಂತಿವೆ. ಕರ್ನಾಟಕದಲ್ಲಿ ಪ್ರಖ್ಯಾತ ಕವಿಗಳು ಆಗಿಹೋಗಿದ್ದಾರೆ ಆನಂದತೀರ್ಥ, ಸಾಯಣ, ಮಾಧವರು, ಬಸವೇಶ್ವರ, ನಿಜಗುಣಶಿವಯೋಗಿಗಳು ಮೊದಲಾದವರು ಕನ್ನಡಿಗರು ಎಂಬುದನ್ನು ನಾವು ಮರೆಯಬಾರದು. ಕರ್ನಾಟಕದಲ್ಲಿ ಪ್ರಖ್ಯಾತವಾದ ರಾಜ್ಯ, ಸಾಮ್ರಾಜ್ಯಗಳು ಆಗಿಹೋಗಿವೆ. ಕನ್ನಡಿಗರ ಸಂಸ್ಕೃತಿ ವಿಶ್ವಮಾನ್ಯವಾಗಿ, ಕನ್ನಡ ಸಾಹಿತ್ಯವು ವಿಶ್ವಪ್ರಸಿದ್ಧಿಯನ್ನೂ ಪಡೆದಿದೆ. ನಾವು ಕೂಡ ಫಜಲಾಲಿ ಕಮೀಶನ್ ಮುಂದೆ ಕರ್ನಾಟಕ ಏಕೀಕರಣವನ್ನು ಸಮರ್ಥಿಸಿ, ಸಾಕ್ಷಿಯನ್ನು ಕೊಟ್ಟಿರುತ್ತೇವೆ. ಹೀಗೆ, ಕರ್ನಾಟಕವು ಉಳಿಯಬೇಕಾದರೆ, ಬೆಳೆಯಬೇಕಾದರೆ ಕರ್ನಾಟಕ ಏಕೀಕರಣ ಅತ್ಯಗತ್ಯ. ಅದನ್ನು ಸಾಧಿಸುವ ಹೊಣೆ ನಿಮ್ಮಗಳದಾಗಿದೆ. ಕರ್ನಾಟಕವು ಸಮುದ್ರತೀರ, ಅರಣ್ಯಪ್ರದೇಶ, ನದಿಗಳು, ಜಲಪಾತಗಳ, ಫಲವತ್ತಾದ ಭೂಮಿ ಇವುಗಳಿಂದ ಕೂಡಿದೆ ಎಂಬುದನ್ನು ನೀವು ಸದಾ ಜ್ಞಾಪಕದಲ್ಲಿಟ್ಟಿರಬೇಕು. ಬಲವಿದ್ದವರು ಮಾತ್ರ ಬದುಕುವುದು ಪ್ರಪಂಚದ ಧರ್ಮ; ಇದನ್ನು ನೀವು ಐಕ್ಯಮತದಿಂದ ಸಾಧಿಸಬೇಕು." ಎಂದು ಅಮೋಘವಾಗಿ ಅಪ್ಪಣೆ ಕೊಡಿಸಿದರು. ಬಂದಿದ್ದ ಕನ್ನಡ ಬಂಧುಗಳು ಮಹಾರಾಜರ ಉಪದೇಶವನ್ನು ಕೇಳಿ ತಲೆದೂಗಿದರು. " ಇವರು ನಿಜವಾಗಿಯೂ ಕರ್ನಾಟಕ

ರತ್ನ ಸಿಂಹಾಸನಾಧೀಶ್ವರರು" ಎಂದು ಉದ್ಗಾರ ತೆಗೆದರು. ಶ್ರೀ ಜತ್ತಿಯವರ ಸಂಪರ್ಕಬಂದುದು ಇದು ಎರಡನೆಯ ಸಲ.

ಫಜಲಾಲಿ ಕಮಿಶನ್ ಕರ್ನಾಟಕಕ್ಕೆ (೧೯೫೫) ಬಂದಿತು. ಕನ್ನಡಿಗ ಜನತೆ ಅವರಿಗೆ ಮನವಿಯನ್ನು ಸಲ್ಲಿಸಿತು. ಕಮಿಶನ್‌ನವರು ಕರ್ನಾಟಕದ ವಾದವನ್ನು ಒಪ್ಪಿಕೊಂಡು ಭಾರತ ಸರಕಾರಕ್ಕೆ ಕರ್ನಾಟಕವಾಗುವಂತೆ ಶಿಫಾರಸ್ಸು ಮಾಡಿದರು. ಆದರ ಫಲವಾಗಿ ೧-೧೧-೧೯೫೬ ರಂದು ಕರ್ನಾಟಕ ರಾಜ್ಯೋದಯವಾಗಿ ವಿಶಾಲ ಮೈಸೂರು ಎಂದು ಹೆಸರಾಯಿತು. ಶ್ರೀ ಎಸ್. ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾದರು. ತತ್ಫಲವಾಗಿ ಕರ್ನಾಟಕ ಏಕೀಕರಣ ಮಾಡಿದವರು ಮೂಲೆಗೆ ಬಿದ್ದರು. ಏಕೀಕರಣ ವಿರೋಧಿಗಳು ಮಂತ್ರಿಗಳಾದರು. ಆದರೆ ಶ್ರೀ ನಿಜಲಿಂಗಪ್ಪನವರು ಒಂದೆರಡು ವರ್ಷಗಳಲ್ಲಿಯೇ ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಂಡರು. ಅಷ್ಟು ಹೊತ್ತಿಗೆ ಜನಪ್ರಿಯರಾಗಿದ್ದ ಮಾನ್ಯ ಬಿ. ಡಿ. ಜತ್ತಿಯವರು ಮುಖ್ಯಮಂತ್ರಿಗಳಾದರು. (೧೯೫೮) ಎಲ್ಲಾ ರೀತಿಯಿಂದಲೂ ಅವರ ಅಧಿಕಾರವು ಸಮರ್ಪಕವಾಗಿತ್ತು. ತ್ರಿಕರಣ ಶುದ್ಧವಾದ ಶ್ರೀ ಜತ್ತಿಯವರ ಕೀರ್ತಿಯು ಭರತಖಂಡದಲ್ಲಿ ಹಬ್ಬಿತು.

**ಒಳ್ಳೆಯ ಕೀರ್ತಿ**

ಆಮೇಲೆ ಶ್ರೀ ನಿಜಲಿಂಗಪ್ಪನವರು ಏನೇನೋ ಪ್ರಯತ್ನಗಳನ್ನು ಮಾಡಿ ಮತ್ತೊಮ್ಮೆ ರಾಜ್ಯದ ಮುಖ್ಯಮಂತ್ರಿಗಳಾದರು. ಕೇಂದ್ರ ಧುರೀಣರ ಒತ್ತಾಯಕ್ಕೆ ಮಣಿದು ಜತ್ತಿಯವರನ್ನು ಆಹಾರ ಮತ್ತು ಹಣಕಾಸಿನ ಮಂತ್ರಿಗಳನ್ನಾಗಿ ಮಾಡಿಕೊಂಡರು. ಚಾಣಾಕ್ಷರಾದ ಶ್ರೀ ಜತ್ತಿಯವರು ಅದರಲ್ಲಿಯೂ ಒಳ್ಳೆಯ ಕೀರ್ತಿಯನ್ನು ಪಡೆದರು.

ಆನಂತರ ಶ್ರೀ ಎಸ್. ನಿಜಲಿಂಗಪ್ಪನವರು ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷರಾದರು. ತಮ್ಮ ಸ್ಥಾನದಲ್ಲಿ ವೀರೇಂದ್ರಪಾಟೀಲರನ್ನು ಕುಳ್ಳಿರಿಸಿದರು ಹಿರಿಯರಾದ ಜತ್ತಿಯವರನ್ನು ಕೈಬಿಟ್ಟರು. ಅಷ್ಟುಹೊತ್ತಿಗೆ ೧೯೬೮ ರಲ್ಲಿ ಕೇಂದ್ರ ಸರಕಾರದ ಪ್ರೀತಿಗೆ ಪಾತ್ರರಾಗಿದ್ದ ಶ್ರೀ ಬಿ. ಡಿ. ಜತ್ತಿಯವರು ಪಾಂಡಿಚೇರಿಯ ಲೆಫ್ಟಿನೆಂಟ್ ಗೌರ್‍ನರ್‌ರಾದರು: ಅಲ್ಲಿ ಅರವಿಂದರ ಹಾಗೂ ಮಾತಾಜೀಯವರ ಆಶೀರ್ವಾದಕ್ಕೆ ಪಾತ್ರರಾಗಿದ್ದು, ಅವರ ಆಶೀರ್ವಾದದ ಫಲವಾಗಿ ೧೯೭೨ ರಲ್ಲಿ ಒರಿಸ್ಸಾದ ರಾಜ್ಯಪಾಲರಾದರು. ಅವರು ಅಲ್ಲಿ ಅತ್ಯಂತ ದಕ್ಷತೆಯಿಂದ ಕಾರ್ಯನಿರ್ವಹಿಸಿ ರಾಜ್ಯಪಾಲ ಪದವಿಯಲ್ಲಿ ಯಶಸ್ವಿಯಾದರು.

ಅಲ್ಲಿಂದ ಮುಂದೆ ಅವರು ಭಾರತದ ಉಪರಾಷ್ಟ್ರಪತಿಗಳಾಗಿ ಕಂಗೊಳಿಸುತ್ತಿದ್ದಾರೆ. ಈಗ ಅವರ ಕೀರ್ತಿಯು ಸಮಗ್ರ ಭಾರತದಲ್ಲಿಯೂ, ವಿಶ್ವದ ಹಲವಾರು ರಾಷ್ಟ್ರಗಳಲ್ಲಿಯೂ ಹಬ್ಬಿದೆ.

ಶ್ರೀ ಬಿ. ಡಿ. ಜತ್ತಿಯವರು ಉನ್ನತರಾಜಕೀಯದಲ್ಲಿದ್ದರೂ ಅವರ ಮನಸ್ಸು ಸದಾ ಆಧ್ಯಾತ್ಮದಲ್ಲಿ ನೆಲೆಸಿದೆ. ಅವರು ೧೯೬೪ ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿದ ಬಸವಸಮಿತಿ ಇದಕ್ಕೆ ಸಾಕ್ಷಿಯಾಗಿದೆ. ಅದಕ್ಕೆ ಅವರು ಖಾಯಂ ಅಧ್ಯಕ್ಷರಾಗಿದ್ದಾರೆ. ಬೆಂಗಳೂರಿನಲ್ಲಿ ಬಸವಭವನ ಕೆಂಗೇರಿಯಲ್ಲಿ ಬಸವಾಶ್ರಮ, ಕಲ್ಯಾಣದಲ್ಲಿ ಅನುಭವ ಮಂಟಪ, ಇವು ಬಸವಸಮಿತಿಯ ಫಲವಾಗಿ ನಿರ್ಮಾಣವಾಗಿವೆ. ಈಗ ನ್ಯೂಯಾರ್ಕ್, ವಾಷಿಂಗ್ಟನ್ ಮೊದಲಾದ ಪಶ್ಚಿಮ ದೇಶದ ನಗರಗಳಲ್ಲಿಯೂ ಕೂಡ ಬಸವಸಮಿತಿಯ ಶಾಖೆಗಳು ಸ್ಥಾಪನೆಗೊಂಡಿವೆ. ಬಸವಣ್ಣನವರ ವಚನಗಳು ಭಾರತದ ಹಲವಾರು ಭಾಷೆಗಳಿಗೆ ಭಾಷಾಂತರವಾಗಿವೆ. ಸಮಿತಿಯು ಹಲವಾರು ಉಪಯುಕ್ತ ಗ್ರಂಥಗಳನ್ನು ಪ್ರಕಟಣೆಮಾಡಿದೆ. ಇದಕ್ಕೆಲ್ಲ ಶ್ರೀ ಜತ್ತಿಯವರ ಉದಾತ್ತ ಮಾರ್ಗದರ್ಶನವೇ ಕಾರಣವಾಗಿದೆ.

**'ಕಲ್ಯಾಣ'**

ಶ್ರೀ ಜತ್ತಿಯವರು ಕಲ್ಯಾಣದ ಬಸವಣ್ಣನವರಂತೆ, ವಿಜಯನಗರದ ಜಕ್ಕಣ್ಣನವರಂತೆ ಭಕ್ತಿ ಭಂಡಾರಿಗಳೂ, ದಾಸೋಹದ ಮೂರ್ತಿಗಳೂ, ತ್ರಿಕರಣ ಶುದ್ಧಿಗಳೂ ಆಗಿದ್ದಾರೆ. ಆದ್ದರಿಂದಲೇ ಅವರು ಉನ್ನತವಾದ ಸ್ಥಾನಗಳನ್ನು ಕ್ರಮ ಕ್ರಮವಾಗಿ ಏರುತ್ತಿದ್ದಾರೆ. ರಾಜಕೀಯದಲ್ಲಿರತಕ್ಕವರು. ಇವರಂತೆ ಪರಿಶುದ್ಧರಾಗಿರುವುದು. ಅಪೂರ್ವ. ೧೯೭೩ರಲ್ಲಿ ಬೆಂಗಳೂರ ನಗರ ಭವನದಲ್ಲಿ ಶ್ರೀ ಜತ್ತಿಯವರ ೬೦ ನೇ ವರ್ಷದ ಹುಟ್ಟು ಹಬ್ಬವು ವೈಭವದಿಂದ ಆಚರಿಸಲ್ಪಟ್ಟಿತು. ಆಗ ಸಾರ್ವಜನಿಕರ ಪರವಾಗಿ ಅವರಿಗೆ 'ಕಲ್ಯಾಣ' ಎಂಬ ಒಂದು ಸಂಭಾವನಾ ಗ್ರಂಥವನ್ನು ಒಪ್ಪಿಸಲಾಯಿತು.

೧೯೧೨ ರಲ್ಲಿ ಜಮಖಂಡಿ ತಾಲೂಕು, ಸಾವಳಗಿ ಗ್ರಾಮದಲ್ಲಿ ಹುಟ್ಟಿದ ವ್ಯಕ್ತಿಯೊಂದು ಜಮಖಂಡಿಯ ಮುಖ್ಯಮಂತ್ರಿಯಾಗಿ, ಬೊಂಬಾಯಿನ ಉಪಮಂತ್ರಿಯಾಗಿ, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿ, ಪಾಂಡಿಚೇರಿಯ ಲೆ॥ ಗೌರ್ನರ್‌ರಾಗಿ, ಒರಿಸ್ಸಾದ ರಾಜ್ಯಪಾಲರಾಗಿ ಕಡೆಗೆ ಭಾರತ ಉಪರಾಷ್ಟ್ರಪತಿಗಳಾಗಿ ಕಂಗೊಳಿಸುತ್ತಿರುವುದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ಸಂಗತಿಯಾಗಿದೆ.

# ಶ್ರೀ ಜತ್ತಿ ಅವರ ದೇವರ ಕಲ್ಪನೆ

● ವೀರಣ್ಣಗೌಡ ನೀರಮಾನ್ವಿ

● [ ಶ್ರೀ ವೀರಣ್ಣಗೌಡ ನೀರಮಾನ್ವಿ ಅವರು ಪ್ರಧಾನವಾಗಿ ಭಾಷಣಕಾರರು. ಉತ್ತಮ ಪ್ರವಚನಕಾರರೆಂದೂ ಹೇಳಬಹುದು. ಅಲ್ಲದೆ ಇತ್ತೀಚೆಗೆ ಅವರು ಮಡಿವಸ್ತ್ರ ಉಟ್ಟು ಪುರಾಣ ಹೇಳಲೂ ಪ್ರಾರಂಭಿಸಿದ್ದಾರೆ. ತಮ್ಮದು ಗೌಡಿಕೆ ಮನೆತನವಾದರೂ ಈ ಪುರೋಹಿತರು ಮತ್ತು ಪಂಡಿತರು ಪುರಾಣ ಹೇಳಿ ಮತ್ತಷ್ಟು ಮೂಢ ಸಂಪ್ರದಾಯಗಳನ್ನೇ ಬಿತ್ತುವರು ಎಂಬ ಚಿಂತೆಯಿಂದ ಕಲ್ಯಾಣದ ಕ್ರಾಂತಿ ವಿಚಾಗಳನ್ನು ಬಿತ್ತರಿಸಲು ಅವರು ಪುರಾಣ ಪ್ರವಚನಕ್ಕೆ ಇಳಿದಂತೆ ಕಾಣುತ್ತದೆ. ಶಿವಶರಣರ ಜಾತ್ಯಾತೀತತೆಯಿಂದ ಮಾರು ಹೋದ ಶ್ರೀ ವೀರಣ್ಣಗೌಡರು ಆ ಜಾತ್ಯಾತೀತತೆಯನ್ನು ಪ್ರಚಾರ ಮಾಡಲು ಟೊಂಕಕಟ್ಟಿ ನಿಂತ ಶ್ರೀ ಜತ್ತಿ ಅವರ ಬಗ್ಗೆ ವಿಶೇಷ ಅಭಿಮಾನವನ್ನು ತಾಳಿದ್ದಾರೆ. — ಸಂ. ]

ದಿ. ೨೫–೫–೬೬ ರಂದು ಬಾಗಲಕೋಟೆಯ ಧಾರ್ಮಿಕ ಸಮಾರಂಭವೊಂದಕ್ಕೆ ಈಗಿನ ಉಪರಾಷ್ಟ್ರಪತಿಗಳಾದ ಸನ್ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಬಂದಿದ್ದರು. ಅವರು ತಮ್ಮ ಭಾಷಣದಲ್ಲಿ “ ಶಿಲೆ ಸಂಸ್ಕಾರದಿಂದ ಪೂಜಿಸುವ ದೇವರಾಗುವದೆಂಬುದು ನಿಜವಿದ್ದರೆ ಮಾನವನು ದೇವನೇಕಾಗಲಾರ ?” ಎಂಬ ಒಂದು ಮಾತು ಹೇಳಿದರು. ಆ ಒಂದು ಮಾತು ನನ್ನ ವಚನ ಸಾಹಿತ್ಯದ ಅಭ್ಯಾಸದ ಮೇಲೆ ಬೆಳಕು ಬೀರಿತು. ಸಜೀವಗೊಳಿಸಿತು ! ಸಚೇತನಗೊಳಿಸಿತು !! ಆ ಒಂದು ಮಾತಿನಿಂದ ನನ್ನ ತಲೆಯಲ್ಲಿ ವಿಚಾರದ ಬುದ್ಬುದ ತರಂಗಗಳೇಳಹತ್ತಿದವು. ತಟ್ಟನೆ ನೆನಪಾದ ಮೊದಲ ಮಾತೆಂದರೆ, – “ ಒಂದು ಮಾತೆನ್ನಬಹುದೇ, ಶಬ್ದ ಸಾರಾಯವನು ? ಒಂದು ಮಾತೆನ್ನಬಹುದೆ ಶರಣ ಸಂಬಂಧವನು ?............ ” ಈ ಒಂದು ಮಾತಿನಿಂದ ನಿಜವಾಗಿಯೂ ನನ್ನ ವಿಚಾರಗಳು ವಚನ ಸಾಹಿತ್ಯದ ಆಳಕ್ಕಿಳಿ

ದವು. “ ಕೆರೆ, ಹಳ್ಳ, ಬಾವಿಗಳು ಮೈದೆಗೆದರೆ, ಗುಳ್ಳೆ ಗೊರಜೆ, ಚಿಪ್ಪುಗಳು ಕಾಣಬಹುದು. ವಾರಿಧಿ ಮೈದೆಗೆದರೆ ಮುತ್ತು ರತ್ನಂಗಳ ಕಾಣಬಹುದು. ” ಎಂಬಂತೆ ಮಾನ್ಯ ಶ್ರೀ ಜತ್ತಿಯವರ ಮಾತಿನಿಂದ ಅಂದು ನನಗಾದ ಅನುಭವ ಲಿಂಗ ದರ್ಶನವಾದಂತಹದು. ವಚನ ಸಾಹಿತ್ಯದಲ್ಲಿ, ದೇವರ ಬಗೆಗೆ ಬಿಡಿ ಬಿಡಿಯಾಗಿ ಆ ಮಾತು ಬರುತ್ತಿರಬಹುದು. ಆದರೆ ಜತ್ತಿಯವರ ಮಾತಿನಿಂದ, ಸ್ಪಷ್ಟ ಶಬ್ದಗಳಲ್ಲಿ, ನೇರವಾಗಿ ದೇವರ ಬಗೆಗೆ ಹೇಳಿದ ಶಬ್ದಗಳೆಂದು ನನಗನಿಸಿತು.

ಮಹಾನುಭಾವಿ ಬಸವಣ್ಣನವರು ಬರುವ ಪೂರ್ವದಲ್ಲಿ ದೇವರು, ಧರ್ಮ ಎರಡೂ ಕಲ್ಲಾಗಿದ್ದವೆಂದರೂ ಅಡ್ಡಿ ಇಲ್ಲ: ಅಥವಾ ದೇವರನ್ನು ಕಲ್ಲುಮಾಡಿ, ಪುರೋಹಿತರೂ ಪೂಜಾರಿಗಳೂ ತಾವು ಸುಖಪಡಲು, ಬುದ್ಧಿ ಪೂರ್ವಕ ಹೂಡಿದ ತಂತ್ರವಿರಬೇಕು ! ಏಕೆಂದರೆ ದೇವರಿಗೆ ಅದು ಬೇಕು, ಇದು ಬೇಕು, ಇಂತಹದುಕೊಟ್ಟರೆ ಶಾಂತಿಯಾಗುತ್ತದೆಂದಾಗ ದೇವರು ಬಾಯಿ ಬಿಟ್ಟು ಏನೂ ಹೇಳಬಾರದಲ್ಲಾ ! ಅದಕ್ಕಾಗಿಯೇ ದೇವರನ್ನು ಕಲ್ಲುಗೊಳಿಸಿರಬೇಕು.

**ಶರಣ**

ಇದನ್ನು ಗಮನಿಸಿಯೇ, ಸಕಲ ಜೀವಿಗಳ ಲೇಸನ್ನೇ ಗುರಿಯಾಗಿಟ್ಟುಕೊಂಡು ಕಲ್ಲಿನಲ್ಲಿ, ಮಣ್ಣಿನಲ್ಲಿ ದೇವರನ್ನು ಆಹ್ವಾನಿಸಿ, ವಿಸರ್ಜಿಸುವ ಬದಲು, ಮಾನವನಲ್ಲಿ ದೇವರನ್ನು ಬರಿಸುವ ಶಾಶ್ವತ ಕೆಲಸ ಕೈಕೊಂಡ, ಮಹಾನುಭಾವಿ ಬಸವಣ್ಣ. ( ವಿಸರ್ಜಿಸುವ ಮಾತೇ ಇಲ್ಲ. ) ಆತನು ಸೃಜಿಸಿದ ದೇವರ ವರ್ಣನೆ ಇಂತಿದೆ:

“ ಎಲ್ಲರ ದೇವರಂತಲ್ಲ ಎನ್ನ ದೇವರು. ಎನ್ನ ದೇವರು ಉಣುವ, ಉಡುವ, ಮಾತಾಡುವ, ತಪ್ಪಿದರೆ ಬುದ್ಧಿ ಹೇಳುವ ” ಎಂತಹ ಮಾತು ! ? ಎಂತಹ ವಿನೂತನ ಸೃಷಿ !! ಆ ವಿನೂತನ ದೇವರೇ ಭಕ್ತ, ಜಂಗಮ, ಶರಣ.

ಮಹಾನುಭಾವಿ ಬಸವಣ್ಣ ಸೃಷ್ಟಿಸಿದ ಈ ಅಲೌಕಿಕ ಮಾರ್ಗ ಸಕಲ ಜೀವರ ಕಲ್ಯಾಣಕ್ಕಾಗಿ ಮುಕ್ತದ್ವಾರ. ಆತನು ಬರುವ ಮೊದಲಿದ್ದ ದೇವರು, ಧರ್ಮದ ಕಲ್ಪನೆಗಳೆಲ್ಲ ತಲೆಕೆಳಗಾದವು. ಜನರನ್ನು ದೇವರ ಹೆಸರಿನಲ್ಲಿ

ವಂಚಿಸಿ ಭೋಗ ಪಡುವ ಪುರೋಹಿತ ವರ್ಗವೆಲ್ಲ ಚಿಂತಿಸುವಂತಾಯಿತು. "ತನ್ನ ದೇವರಿಗೆ ಮಾಡುವ ನೇಮ ನಿತ್ಯವನು ತಾ ಮಾಡಬೇಕಲ್ಲದೆ ಅನ್ಯರ ಕೈಯಲು ಮಾಡಿಸಬಹುದೆ ?" ಎಂಬುದರಿಂದ, ಮಧ್ಯದ ದಲ್ಲಾಳಿ, ಪುರೋಹಿತ ಇಲ್ಲವಾದ. "ಕಾಡಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟುಕೊಂಡು ಕೂಡಿಕೊಂಡಿಪ್ಪುದು ಕೂಡಲಸಂಗನ" ಎಂಬುದರಿಂದ ಬಡವರಿಗೂ ನಿಲುಕುವ ಧರ್ಮ, ದೇವರುಗಳಾದವು. "ಮಾಡಿದ ಪೂಜೆಯಲೊಪ್ಪುವನ" "ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ" ಎಂಬುದರಿಂದ ಜನರಿಗೆ ತಿಳಿಯದ, ಜನರ ಭಾಷೆಯಾಗಲಸಮರ್ಥವಾದ ಸಂಸ್ಕೃತದ ಬೂಟಾಟಿಕೆ ದೂರವಾಯಿತು. ಇಂದಿನ ಭಾರತಕ್ಕೆ ಅತ್ಯಗತ್ಯವಾದ ಈ ತತ್ವ ಪ್ರಚಾರ ಎಲ್ಲರ ಕರ್ತವಾಗಿದೆ. "ಶಿವ ತತ್ವ ಚಿಂತಾಮಣಿ" ಯಂತಹ ಗ್ರಂಥ ರಚಿಸಿದ ಲಕ್ಕಣ್ಣ ದಂಡೇಶರಂತಹವರೂ, ಶರಣ ಧರ್ಮದ, ಕಟ್ಟ ಕಟ್ಟಳೆಗಳನಳವಡಿಸಲು ಬಂದ, ಬಸವಣ್ಣನಂತಹರೂ, ಮಹಾ ಮಂತ್ರಿಗಳಾಗಿ, ದೇಶದ ಚುಕ್ಕಾಣಿ ಹಿಡಿದು ಸತ್ಯದಲ್ಲಿ ನಡೆವಂತೆಸಗಿದವರಂತೆ, ಇಂದು ಶರಣ ಧರ್ಮವನ್ನರಗಿಸಿಕೊಂಡ ಶ್ರೀ ಬಿ. ಡಿ. ಜತ್ತಿಯವರಿಗೆ ಉಪರಾಷ್ಟ್ರಪತಿ ಸ್ಥಾನ ತನಗೆ ತಾನೇ ಗೌರವ ತಂದುಕೊಂಡಿದೆ. ಆ ಸ್ಥಾನದ ಬಲವನ್ನು ತನಗೆ ತನ್ನ ಮಡದಿ ಮಕ್ಕಳಿಗೆ, ಬಂಧು ಬಾಂಧವರಿಗೆನ್ನದೆ, ಎಲ್ಲರಿಗೆ ಸರಿಸಮನಾಗಿ ಹಂಚುವಲ್ಲಿ, ಶ್ರೀ ಜತ್ತಿಯವರಿಗೆ ಮರವೆಯಾಗದಂತೆ ನೋಡಿಕೊಳ್ಳುವ ಕರ್ತವ್ಯ ಅವರ ಹಿಂಬಾಲಕರದು ಅಂದಾಗ ಅವರಿಗರ್ಪಿಸುವ ಈ ಗೌರವ ಸಾರ್ಥಕವಾದೀತು. ಏಕೆಂದರೆ, ಮಹಾನುಭಾವಿ ಬಸವಣ್ಣನವರಿಗೆ ಸಹ ಮರವೆ ಬಂದಾಗ ಉಳಿದಶರಣರು, ನಿರ್ದಾಕ್ಷಿಣ್ಯವಾಗಿ ಆತನ ಕರ್ತವ್ಯ ನೆನಪು ಮಾಡಿಕೊಟ್ಟ ಪ್ರಸಂಗದ ಉಲ್ಲೇಖ ಸಿಗುತ್ತಿವೆ. ಇನ್ನು ನಮ್ಮಂಥವರಿಗೆ ಮರವೆಯೇ ಹಾಸುಹೋಕ್ಕಾಗಿರುವಾಗ ಕೇಳುವವೇನಿದೆ ? ಶ್ರೀ ಜತ್ತಿಯವರಿಗೂ ಹಾಗಾಗದಂತೆ ನೋಡಿಕೊಳ್ಳುವ ಕರ್ತವ್ಯ ಅವರ ಅನುಯಾಯಿಗಳದು.

## ಅವರದೇ ಕಲ್ಪನೆ

೧೯೩೬ ರಲ್ಲಿ ನಡೆದ ಪಾದ ಯಾತ್ರೆಯಲ್ಲಿ ನಾನು ಭಾಗವಹಿಸಿ ಶ್ರೀ ಬಿ. ಡಿ. ಜತ್ತಿ ಅವರ ಜೊತೆಗಿದ್ದುದರಿಂದ ಅವರ ವಿಚಾರ ಸರಣಿಗಳ ಹಲವಾರು ದೃಷ್ಟಿಕೋನಗಳ ಪರಿಚಯವಾಗಿ ಅವರ ರಾಜಕೀಯ ವಿಚಾರ, ಧಾರ್ಮಿಕ ವಿಚಾರಗಳಿಗೆ ಅವರದೇ ಆಗಿರುವ ಕಲ್ಪನೆ ಮೂಡಿದೆ. ಈಗಿರುವ ರಾಜಕೀಯ ಸಂಸ್ಥೆಯಾದ ಕಾಂಗ್ರೆಸ್ಸಿಗೆ ಆಗ ಹೆಸರಿಡುವವರ.

ಬಹಳಿದ್ದರು. ಸಣ್ಣ ಸಣ್ಣ ಭಿನ್ನಾಭಿಪ್ರಾಯಗಳಿಗೆ ಪ್ರತಿಪಕ್ಷಗಳನ್ನು ಕಟ್ಟಿಕೊಂಡೇ ಈ ದೇಶದಲ್ಲಿ ಇಷ್ಟೊಂದು ಪಕ್ಷಗಳಾಗಿ ದೇಶದ ಮುನ್ನಡೆಗೆ ಅಡ್ಡಿಯಾಗಿದೆ. ಎಲ್ಲಿಯಾದರೂ ಹೊಲಸಿದ್ದರೆ ಅದರ ಸಮೀಪ ಹೋಗಿ ಹಸನಮಾಡುವದೆಷ್ಟು ಸುಲಭ ? ದೂರದಿಂದೆ ಹಸನ ಮಾಡುವುದು ಎಷ್ಟು ಕಡು ಕಷ್ಟ ? ಎಂಬುದನ್ನು ಶ್ರೀ ಜತ್ತಿಯವರು ಚೆನ್ನಾಗಿ ಅರಿತಿದ್ದಾರೆ. ಸಣ್ಣ ಸಣ್ಣ ಮಾತಿಗೆ ಭಿನ್ನಾಭಿಪ್ರಾಯ ಬಂದು ಸಿಡಿದು ಹೋಗುವವರಿಗೆ ರಾಜಕೀಯ ಸಲ್ಲದೇನೋ ಅನಿಸುತ್ತದೆ. ಎಲ್ಲಿಯೇ ಇರಲಿ ಕೆಲಸ ಸಾಧಿಸಿದರೆ ಅದೊಂದು ಮಹಾ ಮುತ್ಸದ್ದಿತನ. ಈ ದೇಶದ ಏಳ್ಗಿ ಇಂಗ್ಲೀಷರಿಂದಾಗದೆಂದೂ ಭಾರತೀಯರು ಸ್ವತಂತ್ರರಾದೆವು. ಆದರೆ ಶ್ರೀ ಜತ್ತಿಯವರು ಇಂಗ್ಲೀಷರಿದ್ದಾಗಲೂ ಆಡಳಿತದಲ್ಲಿದ್ದರು; ಅವರು ಹೋದಬಳಿಕ ದೇಶೀಯರಾದ ನಾವೂ ಅವರನ್ನೇ ಬೇಕೆಂದೆವು. ಅಂದಬಳಿಕ ಅವರಿಗಿರುವ ರಾಜಕೀಯ ಜ್ಞಾನ ಬೇರೆ ರಾಜಕಾರಣಿಗಳು ಅರಿತುಕೊಳ್ಳಬೇಕು. "ಸುಖ ಬಂದರೆ ಪುಣ್ಯದ ಫಲವೆನ್ನೆನು, ದುಃಖ ಬಂದರೆ ಪಾಪದ ಫಲವೆನ್ನೆನು" "ದೇವರು ಕೊಡನೆಂಬ ಭ್ರಾಂತದೇಕೆ ? ಮನಕ್ಕೆ ಮನ ಸಾಕ್ಷಿ ಸಾಲದೇ ತಂದೆ, ಹೇಂಗೆ ಮನ ಹಾಂಗೆ ಘನ; ತಪ್ಪದು, ಕೂಡಲ ಸಂಗಮದೇವಾ" ಎನ್ನುವ ಶರಣರ ವಚನದಂತೆ ಅವರು ಬದುಕಿದ್ದಾರೆ. ಪದವಿಗಳು ಬಂದುದೆಷ್ಟು ಸಾರೆಯೊ ? ಹೋದದೆಷ್ಟು ಸಾರೆಯೋ ? ಆದರೆ ಅವರು ಮಾತ್ರ ತಮ್ಮ ದಾರಿಯಲ್ಲೇ ನಡೆದಿದ್ದಾರೆ.

## ಅನುಯಾಯಿಗಳು

ಇತಿಹಾಸದುದ್ದಕ್ಕೆ ಅದೆಷ್ಟೋ ಮಹನೀಯರು ಆಗಿ ಹೋಗಿದ್ದಾರೆ. ಅವರ ಹೆಸರು ಶಾಶ್ವತವಾಗುಳಿಯಬೇಕಾದರೆ, ಅವರ ನಂತರ ಅನುಯಾಯಿಗಳದು. ತಮ್ಮ ಅನುಯಾಯಿಗಳನ್ನು ತಮ್ಮ ಮಾರ್ಗದಲ್ಲಿ, ಚಾಚೂ ತಪ್ಪದೆ ನಿರಂತರ ಎಚ್ಚರ ಪೂರ್ವಕ ನಡೆವಂತೆ ಸಿದ್ಧಗೊಳಿಸುವುದೂ ಆ ಮಹಾತ್ಮರ ಕೆಲಸವೇ ! ಮೊನ್ನೆ ಮೊನ್ನೆ ಆಗಿಹೋದ, ತಿಲಕ, ಗಾಂಧಿ, ಮೋತಿಲಾಲ ನೆಹರೂ, ಪಟೇಲ, ಶಾಸ್ತ್ರಿಗಳಂಥವರು ದೇಶಕ್ಕಾಗಿ ತಮ್ಮನ್ನೆಷ್ಟು ಅರ್ಪಿಸಿಕೊಳ್ಳಲಿಲ್ಲ ? ಆದರೆ ಮುಂಬರುವ ಪೀಳಿಗೆಯಲ್ಲಿ ತಮ್ಮಷ್ಟೇ ಪ್ರಬಲರಾದವರನ್ನು ನಿರ್ಮಿಸಿದ್ದರೆ, ಇಂದು ಅವರನ್ನು ಮರೆಯುವ ಪ್ರಸಂಗವಿರುತ್ತಿರಲಿಲ್ಲ. ದೇಶಕ್ಕಾಗಿ ತಮ್ಮ ತನು, ಮನ, ಧನಗಳನ್ನು ತೃಣ ಸಮಾನ ಮಾಡಿ ದುಡಿದವರ ನೆನಪು, ಇಂದು ಎಷ್ಟು

ಜನರಿಗುಳಿದಿದೆ ? " ನಾವು ಮಾತ್ರ ವಂಚನೆಯಿಲ್ಲದೆ ದುಡಿದರೆ ಸಾಕೆಂದವರೇ ಬಹಳ. ಮುಂದಿನವರ ಗೊಡವೆ ನಮಗೇಕೆ ಎನ್ನುವ ದೋಷ ಬಹು ದೊಡ್ಡದು ". ಗೆದ್ದಲಿಯು ಮನೆಮಾಡಿ ಸರ್ಪಕ್ಕಿಂಬು ಮಾಡಿ ಕೊಟ್ಟ ತೆಗನಂತಾಗುತ್ತದೆ ಅಷ್ಟೆ. ಶ್ರೀ ಜತ್ತಿ ಅವರು ಈ ಅಂಶ ವನ್ನು ಮನದಂದಿದ್ದಾರೆ ಎನಿಸುತ್ತದೆ. ಹಾಗೇ ನೋಡಿದರೆ, ಮ. ಬಸವಣ್ಣ ನವರಿಗೆ ಸಿಕ್ಕ ಪದವಿಗಿಂತ ಈ ಶ್ರೀ ಬಸಪ್ಪ ದಾನಪ್ಪ ಜತ್ತಿಯ ವರಿಗೂ ಕಡಿಮೆ ಪದವಿಯೇನು ಸಿಕ್ಕಿಲ್ಲಾ. ಆದರೆ ಬಸವಣ್ಣನವರಿಗೆ ಮರ ವೆಯಾದಾಗ ನಿರ್ದಾಕ್ಷಿಣ್ಯವಾಗಿ ವಿಮರ್ಶಿಸುವ, ಆತನ ಸತ್ಪಥದಲ್ಲಿ ರಾಜ ಭೋಗ ಬಿಟ್ಟು ಬರುವ ಅನುಯಾಯಿಗಳು ಸಿಕ್ಕಂತೆ ಶ್ರೀ ಜತ್ತಿಯವರಿಗೂ ಸಿಗಬೇಕಲ್ಲಾ ? ಇಂದು ಗೌರವಿಸುವ ನಾವೆಲ್ಲಾ ಹೇಗಿದ್ದೇವೆಂದು ನಮ್ಮಂತ ರಂಗವನ್ನು ನೋಡಿಕೊಂಡರೆ ಅವರಿಗೆ ಗೌರವ ಸಲ್ಲಿಸಿದಂತೆ- ಅದನ್ನೇ ನಾವೀಗ ಮಾಡೋಣ.



## ಸಿರಿ – ಶಿವಭಕ್ತಿ

ಎಲವದ ಮರ ಹೂತು ಫಲವಾದ ತೆರನಂತೆ
ಸಿರಿಯಾದರೇನು ಶಿವ ಭಕ್ತಿಯಿಲ್ಲದನ್ನಕ್ಕ ?
ಹಣ್ಣಾದರೇನು ಹಾವು ಮೆಕ್ಕೆಯಕಾಯಿ ?
ಶೀಲ ವಿಲ್ಲದ ರೂಹು ಎಲ್ಲಿದ್ದರೇನು ?
ಬಚ್ಚಲನೀರು ತಿಳಿದಲ್ಲಿ ಫಲವೇನು ?
ಅವಗುಣಿಗಳ ಮೆಚ್ಚ ಕೂಡಲಸಂಗಮದೇವ

—ಬಸವಣ್ಣನವರು

# ಬೆಳಕಿನ ಯಾತ್ರೆ

ಕಾಯಕ್ಕೆ ಇತ್ತು ಖಾದೀ ದೀಕ್ಷೆ,
ಗಭೀರ ಹೆಜ್ಜೆ ಹಾಕಿ ನಡೆಯೆ ಮೆಲ್ಲಗೆ:
ಗಾಳಿಗೆ ಪರಿಮಳವನೂಡಿಸುತ ಹೊರಟಂತೆ ಮಲ್ಲಿಗೆ-
ಭಾರಕ್ಕೆ —
ದೇಹ ಕಿರಿದೆನಿಸುವ ಹಾಗೆ
ಕಡೆದು ನಿಲಿಸಿರುವ ಹಿಮನಗದ ವ್ಯಕ್ತಿತ್ವ.
ಸುವಿಶಾಲ ಹಣೆಯ ಹರಹಿನಲಿ
" ನೀರಿಂಗೆ ನೈದಿಲೆಯೆ ಶೃಂಗಾರ "
ಎಂಬ ಬಸವ ವಚನದ ಭಾಷೆ.
ಯಾವತ್ತು —
ಕೆನ್ನೆಯಲಿ ಮೂಡಿರುವ ನಗೆಯುಗೆರೆ
— ಬಿಚ್ಚಿದರೆ ಕಡಲೊಡಲ ಮುತ್ತು – ಹವಳದ ಕಾಂತಿ;
ಮಾತು ಜ್ಯೋತಿರ್ಲಿಂಗ.

ಒಡೆದ ಪ್ರಣತಿಯ —
ಚೂರುಗಳನಾಯ್ದು
ಒತ್ತಿ ಅಂಟಿಸಿ, ಮತ್ತೆ ತೈಲವನೆರೆದು
ಬತ್ತಿ ಹದಗೊಳಿಸಿ, ಹಚ್ಚಿ ಸೊಡರು
ಜಾತ್ಯಂಧರ ಕಣ್ಣು ತೆರೆಯಿಸಿ ಥಳಕು;
ಕಾಣಿಸಿದ ಕಲ್ಯಾಣದ ಬೆಳಕು.

ಅಷ್ಟ ಶತಮಾನಗಳ ದೀರ್ಘ ನಿಶೆಯಲಿ
ನೆಲ ಹಿಡಿದು ಮಲಗಿದ್ದ —
ಶರಣ ಪರಂಪರೆಯ ನುಡಿಗಡಣದೋಲೆಗಳ
ಅಚ್ಚು ಮೊಳೆ ಚುಚ್ಚಿಸಿ
ಎಚ್ಚರಗೊಳಿಸಿ

ಉತ್ಸವಕೆ ಒಡ್ಡಿದವ.
ವಾಗ್ಮಿ ಕೋವಿದರುಗಳ ಕೈ ಹಿಡಿದು ತಂದು —
ನಿಲಿಸಿ ವೇದಿಕೆ ತುಂಬ
ಅನುಭಾವ – ಸಾಹಿತ್ಯ ವ್ಯಾಖ್ಯಾನಗಳ ಗುಡುಗು ಮೊಳಗಿಸಿ
ಅಮೃತ ವರ್ಷ ಕರೆದವ.

ವಾಮನನೆ ಇವನು ?
ತುಳಿದು ಹೊರಟಿದ್ದಾನೆ ತ್ರಿವಿಕ್ರಮನ ಹೆಜ್ಜೆ.

ಒಂದೊಂದೇ ಒಂದೊಂದೇ —
ಸಾಲಿಟ್ಟ ಸರದೀಪ ಹೊತ್ತಿಸುವ ತೆರ
ಮಂತ್ರಿ, ರಾಜ್ಯಪಾಲ, ಮೇಲೆ ಉಪರಾಷ್ಟ್ರಪತಿ............
ಇಂತು ಏನೇನೋ ಏನೇನೋ................
ಅಧಿಕಾರದೊಂದೊಂದು ಸ್ಥಾನದಲಿ ಝಗ್ಗನೆ ಹೊಳೆದವನು.
ಹೀಗೆಯೇ ಸಾಗಿರಲಿ
ಇವನ ಬೆಳಕಿನ ಯಾತ್ರೆ.

● ಶಿವಶರಣ ಜಾವಳಿ

---

● [ ಕಲಬುರ್ಗಿಯ ಶ್ರೀಮತಿ ವೀರಮ್ಮ ಗಂಗಶ್ರೀ ಮಹಿಳಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಶ್ರೀ ಶಿವಶರಣ ಪಾಟೀಲ ಜಾವಳಿ ಅವರು ಉತ್ತಮ ನವ್ಯ ಕವಿಗಳು. ಅವರ ನವ್ಯತೆ ಪಾಶ್ಚಿಮಾತ್ಯ ಸಾಹಿತ್ಯಗಳಿಂದ ಪ್ರಚೋದಿತ ಗೊಂಡಿರದೆ ಕಲ್ಯಾಣದ ಶಿವಶರಣರ ಪ್ರಗತಿಶೀಲ ವಿಚಾರಗಗಳಿಂದ ಪ್ರಭಾವಿತಗೊಂಡಿದೆಯೆಂದು ಹೇಳಬಹುದು. ಈಗಾಗಲೇ ಪ್ರಕಟವಾದ ಎರಡು ಕವನ ಸಂಕಲನಗಳನ್ನು ಓದಿದಾಗ ಶ್ರೀ ಶಿವಶರಣ ಪಾಟೀಲರಲ್ಲಿ ಶಿವಶರಣರ ವಿಮರ್ಶಾ ದೃಷ್ಟಿ ಆಳವಾಗಿ ಬೇರೂರಿದೆಯೆಂಬುದು ತಾನೇ ತಾನಾಗಿ ವೇದ್ಯವಾಗುತ್ತದೆ. — ಸಂ. ]



ಉಪರಾಷ್ಟ್ರಪತಿಗಳಾದ ಬಳಿಕ ಮೊದಲ ಬಾರಿಗೆ ಬೆಂಗಳೂರಿಗೆ ಆಗಮಿಸಿದ ಶ್ರೀ ಬಿ. ಡಿ. ಜತ್ತಿ ಅವರನ್ನು ಸಮಸ್ತ ಕನ್ನಡಿಗರ ಪರವಾಗಿ ಅಭಿನಂದಿಸಲಾಯಿತು. ಬೆಂಗಳೂರಿನ ಮೆಯರ್ ಮತ್ತು ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸ್‌ರೊಡನೆ ಶ್ರೀ ಜತ್ತಿ ಅವರು ಸುಖಾನೀನರಾಗಿದ್ದಾರೆ,



ಬಸವ ಸಮಿತಿ ಪಾದಯಾತ್ರಿಕ ಜೊತೆಯಲ್ಲಿ ಶ್ರೀ ಜತ್ತಿ ಅವರು ಕಾಲು ಬೆರಳು ಒಡೆದರೂ ಕಾಲುನಡಿಗೆ ನಿಲ್ಲಿಸಿರಲಿಲ್ಲ.

# ಶ್ರೀ ಜತ್ತಿ ಸಾಹೇಬರ ತವರು ನೆಲದ ಸೇವೆ

● ವೈ. ಕೆ. ಹೆಬ್ಬಳ್ಳಿ
ಶ್ರೀ ಬಿ. ಡಿ. ಜತ್ತಿಯವರ ಆಪ್ತ ಕಾರ್ಯದರ್ಶಿಗಳು.

● [ ಶ್ರೀ ವೈ. ಕೆ. ಹೆಬ್ಬಳಿ ಅವರು ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿಅವರ ಆಪ್ತ ಕಾರ್ಯದರ್ಶಿಗಳು. 'ಆಪ್ತ' ಎಂಬ ಶಬ್ದಕ್ಕೆ ಅನ್ವರ್ಥಕವಾಗಿ ಶ್ರೀ ಹೆಬ್ಬಳಿ ಅವರು ಶ್ರೀ ಜತ್ತಿ ಅವರ ಜೊತೆಗಾರರಾಗಿದ್ದಾರೆ. ಶ್ರೀ ಜತ್ತಿ ಅವರು ಮುಖ್ಯಮಂತ್ರಿಯಾಗಿದ್ದಾಗಲೂ ಶ್ರೀ ಹೆಬ್ಬಳಿ ಅವರೇ ಆಪ್ತ ಕಾರ್ಯದರ್ಶಿಯಾಗಿದ್ದರು; ಆಹಾರ ಮಂತ್ರಿಗಳಾಗಿದ್ದಾಗಲೂ ಅವರೇ ಇದ್ದರು. ಮುಂದೆ ಪಾಂಡಿಚೇರಿಗೆ ಹೋದರೆ, ಅಲ್ಲಿಂದ ಭುವನೇಶ್ವರ, ಆಮೇಲೆ ನವದೆಹಲಿಗೆ ಹೋಗಿರುವಾಗಲೂ ಶ್ರೀ ಹೆಬ್ಬಳಿ ಅವರು ಪೂರ್ವ ಋಣಾನುಬಂಧದಿಂದ ಎಂಬಂತೆ ಶ್ರೀ ಜತ್ತಿ ಅವರ ಸುಖದುಃಖಗಳಲ್ಲಿ ಸಮಭಾಗಿಗಳಾಗಿದ್ದಾರೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು, — ಸಂ. ]

ಸನ್ಮಾನ್ಯ ಉಪರಾಷ್ಟ್ರಪತಿಗಳಾದ ಶ್ರೀ ಬಿ. ಡಿ. ಜತ್ತಿ ಅವರು ತಮ್ಮ ತವರು ನೆಲವಾದ ಜಮಖಂಡಿಗೆ ಯಾವ ರೀತಿಯಲ್ಲಿ ಸೇವೆಗೈದಿದ್ದಾರೆ ಎಂಬುದನ್ನು ವಿವರಿಸುವ ಮುಂಚೆ ಇದಕ್ಕೆ ಹಿನ್ನೆಲೆಯಾಗಿ ಅವರ ಪ್ರಾರಂಭದ ಜೀವನವನ್ನೂ ಪ್ರಥಮ ಜೀವನೋಪಾಯ ಕ್ರಮವನ್ನೂ ವಿವರಿಸುವುದು ಉಪಯುಕ್ತವಾದುದೆಂದು ಭಾವಿಸುತ್ತೇನೆ.

ಕೊಲ್ಹಾಪುರದ ರಾಜಾರಾಮ ಮತ್ತು ಸೈಕ್ಸ ಕಾಲೇಜಿನಿಂದ ಅನುಕ್ರಮವಾಗಿ ಬಿ. ಎ. ಮತ್ತು ಲಾ ಪದವಿಗಳನ್ನು ಪಡೆದನಂತರ ಶ್ರೀ ಜತ್ತಿಸಾಹೇಬರು ಯುವ ವಕೀಲರಾಗಿ ಜಮಖಂಡಿಯ ವಕೀಲರ ಸಂಘವನ್ನು ಸೇರಿದರು. ಜಿಲ್ಲಾ ಕೇಂದ್ರವಾದ ಬಿಜಾಪುರಕ್ಕೆ ಹೋಗಿ ಅಲ್ಲಿಯ ನುರಿತ ವಕೀಲರ ಸಂಪರ್ಕದೊಡನೆ ವಕೀಲಿ ವೃತ್ತಿಯ ಮೂಲಸಿದ್ಧಾಂತಗಳನ್ನು ಕಲಿತುಕೊಂಡು ಹೆಚ್ಚಿನ ಅನುಭವ

ಪಡೆಯಬೇಕೆಂಬುದು ಅವರ ಯೋಜನೆಯಾಗಿತ್ತು. ಆದರೆ ತರುಣ ಶ್ರೀ ಜತ್ತಿ ಸಾಹೇಬರ ಈ ಯೋಜನೆ ಅವರ ಪೂಜ್ಯ ಮಾತೋಶ್ರೀಗೆ ಇಷ್ಟವಾದುದಾಗಿರಲಿಲ್ಲ. ಶ್ರೀ ಜತ್ತಿಸಾಹೇಬರ ತಂದೆಯವರು ಅಷ್ಟರೊಳಗಾಗಿ ಲಿಂಗೈಕ್ಯರಾಗಿದ್ದುದರಿಂದ, ಮನೆಯಲ್ಲಿ ಯಜಮಾನರೆನಿಸುವವರು ಯಾರೂ ಇರದ ಪರಿಸ್ಥಿತಿಯಲ್ಲಿ, ಅವರು ತಮ್ಮೆಲ್ಲರನ್ನು ಬಿಟ್ಟು ದೂರದ ಬಿಜಾಪುರಕ್ಕೆ ಹೋಗುವುದನ್ನು ತಾಯಿಯವರು ವಿರೋಧಿಸಿದರು. ಆದರೆ ಆ ತಾಯಿಯವರು ಒಂದು ಮಾತಿಗೆ ರಾಜಿಯಾದರು; ಅದೇನಂದರೆ ಶ್ರೀ ಜತ್ತಿಸಾಹೇಬರು ವಕೀಲಿ ವೃತ್ತಿಯನ್ನೇ ಕೈಕೊಳ್ಳುವ ಹಂಬಲವುಳ್ಳವರಾಗಿದ್ದರೆ ಸಾವಳಿಗೆಗೆ ಸಮೀಪವಾದ ಮತ್ತು ಕೌಟುಂಬಿಕ ಸಮಾಲೋಚನೆಗೆ ಅನುಕೂಲವಾದ ಜಮಖಂಡಿಯಲ್ಲಿ ನೆಲಸಬಹುದು ಎಂದು ಹೇಳಿದರು. ತಾಯಿಯವರ ಈ ಇಚ್ಛೆಗನುಗುಣವಾಗಿ ಶ್ರೀ ಜತ್ತಿ ಸಾಹೇಬರು ದೊಡ್ಡ ದೊಡ್ಡ ವಕೀಲರ ಸಂಪರ್ಕದಲ್ಲಿರಬೇಕೆಂಬ ಮಹತ್ವಾಕಾಂಕ್ಷೆಯನ್ನೂ ತ್ಯಜಿಸಿ ಜಮಖಂಡಿಯಲ್ಲಿಯೇ ವಕೀಲಿಯನ್ನು ಆರಂಭಿಸಿದರು. ನಿಜವಾಗಿಯೂ ಅದೊಂದು ಶುಭಗಳಿಗೆ; ಜಮಖಂಡಿಯ ಜನತೆಯ ಸುದೈವದ ಗಳಿಗೆ. ಅವರು ತಮ್ಮ ಮಧ್ಯದಲ್ಲಿ ಒಬ್ಬ ಸರಳ ಮತ್ತು ನಿಸ್ವಾರ್ಥ ಸೇವಾ ಧುರೀಣನನ್ನು ಪಡೆದರು.

## ಕ್ರಿಮಿನಲ್ ವಕೀಲರು

ಶ್ರೀ ಜತ್ತಿ ಸಾಹೇಬರು ತಾವು ಕೋರ್ಟಿಗೆ ಹಾಜರಾದ ಪ್ರಥಮ ದಿನವೇ ಒಂದು ಸಣ್ಣ ಕ್ರಿಮಿನಲ್ ಪ್ರಕರಣದೊಡನೆ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ಅವರು ಪ್ರಥಮ ಪ್ರಕರಣವನ್ನು ಇಷ್ಟು ಯಶಸ್ವಿಯಾಗಿ ನಿರ್ವಹಿಸಿದರು; ಇದರಿಂದ ಕಕ್ಷಿದಾರರು ಬಹಳಷ್ಟು ಪ್ರಭಾವಿತರಾದರು. ಹಿರಿಯರೂ ಅನುಭವಿಗಳೂ ಸಾಕಷ್ಟು ಜನರಿದ್ದರು ಕಕ್ಷಿದಾರರು ಇವರನ್ನೇ ಹುಡುಕಿಕೊಂಡು ಬರತೊಡಗಿದರು. ಕೆಲವೇ ದಿನಗಳಲ್ಲಿ ನಮ್ಮ ಸಾಹೇಬರು ಕ್ರಿಮಿನಲ್ ಪ್ರಕರಣಗಳಿಗೆ ಎತ್ತಿದ ಕೈ ಎನಿಸತೊಡಗಿದರು. ಸೆಷೆನ್ಸ ಕೋರ್ಟುಗಳಲ್ಲಿ ಕೊಲೆ ಪ್ರಕರಣಗಳನ್ನೂ ಯಶಸ್ವಿಯಾಗಿ ಮತ್ತು ಸ್ವತಂತ್ರವಾಗಿ ನಿಭಾಯಿಸುವಷ್ಟು ಅನುಭವ ಗಳಿಸಿದರು.

ಶ್ರೀ ಜತ್ತಿ ಸಾಹೇಬರು ಯಾವುದೇ ಪ್ರಕರಣವನ್ನು ಬಹು ಚಾಣಾಕ್ಷತನದಿಂದ ನಿರ್ವಹಿಸುತ್ತಿದ್ದುದರಿಂದ, ಕಕ್ಷಿದಾರರನ್ನು ಬಹು ಆತ್ಮೀಯತೆಯಿಂದ ನೋಡಿಕೊಳ್ಳುತ್ತಿದ್ದುದರಿಂದ, ಕಕ್ಷಿದಾರರು ಶ್ರೀಮಂತರೇ ಇರಲಿ ಬಡವರೇ ಇರಲಿ ಕಾನೂನಿನ ಒರೆ ಕೋರೆಗಳನ್ನು ತಿಳಿದುಕೊಳ್ಳಲು ಆಳವಾಗಿ ಅಭ್ಯಾಸಮಾಡುತ್ತಿ

ದ್ದುದರಿಂದ ಕಕ್ಷಿದಾರರಿಗೆ ಬಹು ಬೇಗ ಸಾಹೇಬರ ಬಗ್ಗೆ ವಿಶ್ವಾಸ ಹುಟ್ಟಿತು. ನ್ಯಾಯಾಧೀಶರ ಎದುರು ಕಿಂಚಿತ್ತೂ ಭಯ ಮತ್ತು ಭಿಡೆ ಇಲ್ಲದೆ ಆಕರ್ಷಕ ವಾದ ರೀತಿಯಲ್ಲಿ ವಾದಮಾಡಿ ತಮ್ಮ ವಾದಕ್ಕೆ ಬೆಂಬಲವಾಗಿ ಅನುರೂಪ ಸಾಕ್ಷಿಗಳನ್ನೂ, ಕಾನೂನಿನ ಕಲಮುಗಳನ್ನೂ, ಸಾದರ ಪಡಿಸುತ್ತಿದ್ದುದರಿಂದ ಅವರು ಹಿಡಿದ ಪ್ರಕರಣಗಳೆಲ್ಲವೂ ಜಯಶಾಲಿಯೇ ಎನ್ನುವಷ್ಟು ಜನಪ್ರಿಯತೆ ಹಬ್ಬಿತು

## ಪ್ರಮುಖ ವಕೀಲರು

ವಕೀಲಿ ಉದ್ಯೋಗದಲ್ಲಿ ಕಕ್ಷಿದಾರರಿಂದ ಫೀ ತೆಗೆದುಕೊಳ್ಳುವುದರ ಬಗ್ಗೆ ಸಾಹೇಬರು ಮಾನವೀಯ ದೃಷ್ಟಿಯನ್ನು ಹೊಂದಿದ್ದರೆಂದು ಹೇಳಬಹುದು. ಅವ ರೆಂದೂ ಹಣದ ಹಪಾಪಿತನವನ್ನು ತೋರಿದವರಲ್ಲ. ವಕೀಲಿ ಫೀ ಮುಂಚಿತ ವಾಗಿ ನಿರ್ಧರಿಸಿದವರೇ ಅಲ್ಲ. ಪ್ರಕರಣಗಳನ್ನು ನಿರ್ವಹಿಸುವಲ್ಲಿ ಎಷ್ಟೇ ದಿಸ ಗಳು ಹಿಡಿದಿರಲಿ ಬಡವರಿಂದ ಅವರು ರಿಯಾಯಿತಿ ತೋರಿಯೇ ಸಂಭಾವನೆ ಪಡೆಯುತ್ತಿದ್ದರು. ಹಣದ ಲಾಭ ಇರಲಿ ಇಲ್ಲದಿರಲಿ ಪ್ರಕರಣಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಕಾನೂನಿನ ಜ್ಞಾನ ಪಡೆಯುವ ದೃಷ್ಟಿಯಿಂದ ಅವರು ಬಹು ಆಳವಾಗಿ ರಾತ್ರಿಯೆಲ್ಲ ಓದುತ್ತಿದ್ದರು. ಈ ಗುಣಗಳು ಅವರನ್ನು ವರ್ಷಾರು ತಿಂಗಳುಗಳಲ್ಲಿಯೇ ಪ್ರಮುಖ ವಕೀಲರನ್ನಾಗಿ ಪರಿವರ್ತಿಸಿದುವಲ್ಲದೆ ವೈಯಕ್ತಿಕ ವಾಗಿ ಅವರಿಗೆ ಸಂಪತ್ತನ್ನೂ, ಸ್ಥಾನಮಾನಗಳನ್ನೂ, ಸತ್ಕೀರ್ತಿಯನ್ನೂ ತಂದಿತ್ತವು.

ಜಮಖಂಡಿಯು ಆ ಕಾಲದಲ್ಲಿ ಮಾಜಿ ರಾಜರೊಬ್ಬರ ರಾಜಧಾನಿಯಾ ಗಿತ್ತೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿರಬಹುದು. ಆ ರಾಜ್ಯದಲ್ಲಿ ಹೆಸರಿಸಬಹುದಾದ ಒಂದೇ ಒಂದು ರಾಜಕೀಯ ಪಕ್ಷವಿದ್ದಿತು. ಅದೇ "ಪ್ರಜಾ ಪರಿಷತ್ತು". ಆ ಚಿಕ್ಕ ರಾಜ್ಯದಲ್ಲಿ ಕೆಲವು ಪಟ್ಟ ಭದ್ರ ಹಿತಾಸಕ್ತಿಗಳು ರಾಜಕೀಯ ಮತ್ತು ಸಮಾಜ ಸೇವೆಯನ್ನು ತಾವೇ ಗುತ್ತಿಗೆ ಹಿಡಿದು ಹಲವು ಗೊಂದಲ ಉಂಟು ಮಾಡುತ್ತಿದ್ದರು. ೧೯೪೨ ರಲ್ಲಿ ಸ್ವಾತಂತ್ರ್ಯ ಹೋರಾಟವು ಪ್ರಾರಂಭವಾದಾಗ ಹಲವು ಸುಧಾರಣೆಗಳು ಕಾಗದದಲ್ಲಿಯೇ ಉಳಿದಿದ್ದವು ಮಾತ್ರವಲ್ಲ ಅರಸೊತ್ತಿಗೆಯ ರಾಜ್ಯಗಳಲ್ಲಿಯಂತೂ ಸುಧಾರಣೆಗಳ ಹೆಸರೇ ಗೊತ್ತಿರಲಿಲ್ಲ. ಜಮಖಂಡಿಯು ಭಾರತದ ೫೬೨ ಅರಸೊತ್ತಿಗೆಗಳಲ್ಲಿ ಒಂದಾಗಿದ್ದಿತು. ರಾಜ ಮಹಾರಾಜರು ತಾವೇ ಶ್ರೇಷ್ಠರೆಂದು ಪರಿಗಣಿಸುತ್ತ ಪ್ರಜೆಗಳನ್ನು ಅತಿ ಕೀಳಾಗಿ ನೋಡುತ್ತಿದ್ದರು. ಇಂಥ ಸೂಕ್ಷ್ಮ ಮತ್ತು ಸಂದಿಗ್ಧ ಸನ್ನಿವೇಶದಲ್ಲಿ ಶ್ರೀ ಜತ್ತಿ ಸಾಹೇಬರು ಜಮಖಂಡಿಯ ಹೆಸರಾಂತ ವಕೀಲರಾಗಿದ್ದರು.

ಸ್ವಾತಂತ್ರ್ಯ ಹೋರಾಟದ ನಾಯಕರು ಶ್ರೀ ಜತ್ತಿ ಸಾಹೇಬರನ್ನು ಬಹಳ ದಿವಸಗಳವರೆಗೆ ರಾಜಕೀಯದಿಂದ ಅಲಿಪ್ತರಾಗಿರಲು ಬಿಡಲಿಲ್ಲ. ರವಿವಾರ ಮತ್ತು ರಜಾದಿನಗಳನ್ನು ರಾಜಕೀಯ ಚಟುವಟಿಕೆಗಳಿಗೆ ವಿನಿಯೋಗಿಸಬೇಕೆಂದು ಪುಸಲಾಯಿಸತೊಡಗಿದರು. ಪ್ರಜಾ ಪರಿಷತ್ ಪಕ್ಷದ ಕಾರ್ಯದರ್ಶಿಯನ್ನಾಗಿಯೂ ನೇಮಕ ಮಾಡಿದರು. ಈ ಹುದ್ದೆಯಲ್ಲಿರುವಾಗಲೇ ಮಾನ್ಯ ಸಾಹೇಬರು ಸಂಪುಟದ ಸಚಿವರಾಗಿ ನೇಮಕಗೊಂಡರು.

ಮಂತ್ರಿಗಳಾದ ನಂತರ ಶ್ರೀ ಸಾಹೇಬರು ಕೆಲವು ಜನೋಪಯುಕ್ತ ಕಾರ್ಯಗಳನ್ನುಆಲೋಚಿಸ ತೊಡಗಿದರು. ಬೊಕ್ಕಸದ ಹಣದಲ್ಲಿ ರಾಜಮನೆತನದ ವೆಚ್ಚಕ್ಕೆ ಹಾಗೂ ಆಡಳಿತಕ್ಕೆ ಖರ್ಚಾದ ನಂತರ ಉಳಿದ ಹಣದಿಂದ ಜನಕಲ್ಯಾಣ ಕಾರ್ಯಗಳನ್ನು ಕೈಕೊಂಡರು. ಅವರು ತಮ್ಮ ಆಡಳಿತದ ವಿಧಾನದಿಂದ ಜಮಖಂಡಿಯ ರಾಜರನ್ನು ಎಷ್ಟರಮಟ್ಟಿಗೆ ಆಕರ್ಷಿಸಿಕರೆಂದರೆ ಮಾರನೆಯ ವರ್ಷವೇ ಜಮಖಂಡಿಯ ರಾಜರು ತಮ್ಮ ದ್ವಿಪ್ರಭುತ್ವದ ಮುಖ್ಯಮಂತ್ರಿಯನ್ನಾಗಿ ಶ್ರೀ ಜತ್ತಿ ಸಾಹೇಬರನ್ನು ನೇಮಿಸಿದರು.

## ಸಮತೋಲನ

ಈಗ ಮುಖ್ಯಮಂತ್ರಿಯಾಗಿ ಅವರು ಬಹಳಷ್ಟು ಜನಸೇವೆ ಮಾಡಲು ಸಾಧ್ಯವಾಯಿತು. ಸ್ವತಂತ್ರ ಮತ್ತು ಸಮತೋಲನದ ಈ ಆಡಳಿತ ವಿಧಾನವು ನೆರೆಯ ಅರಸೊತ್ತಿಗೆಗಳಿಗೆ ಅನುಕರಣೀಯವಾಯಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಆಗಿನ ದಿನಗಳಲ್ಲಿಯೂ ಸಾಮಾನ್ಯರ ಭಾಷೆ ನ್ಯಾಯಾಲಯಗಳ ಭಾಷೆಯಾಗಿರಲಿಲ್ಲ ಅಥವಾ ವಿದ್ಯಾಲಯಗಳ ಭಾಷೆ ಆಗಿರಲಿಲ್ಲ. ಬಹುಮತ ಜನರಿಗೆ ಇದು ಜ್ವಲಂತ ಸಮಸ್ಯೆಯಾಗಿದ್ದಿತು. ರಾಜರಿಗೆ ಅಂಜಿ ಪ್ರಜೆಗಳು ತಮ್ಮ ಮನೋಬಯಕೆಯನ್ನು ಹೇಳಿಕೊಳ್ಳುತ್ತಿರಲಿಲ್ಲ. ಆದರೆ ಶ್ರೀ ಜತ್ತಿ ಸಾಹೇಬರು ಕೆಲವೇ ದಿನಗಳಲ್ಲಿ ಒಂದು ಸರ್ವಸಮ್ಮತ ಭಾಷಾ ಸೂತ್ರವನ್ನು ರೂಪಿಸಿದರು. ಅದರಿಂದ ಸರ್ಕಾರವೂ ಸಂತೋಷಗೊಂಡಿದ್ದಿತು; ಪ್ರಜೆಗಳೂ ತೃಪ್ತಿ ಪಡೆದಿದ್ದರು. ಬಹು ದಿನಗಳಿಂದ ಹಾಗೇ ಉಳಿದಿದ್ದ ತಮ್ಮ ಬೇಡಿಕೆಯನ್ನು ವಕೀಲರು, ವ್ಯಾಪಾರಿಗಳು ಮತ್ತು ರೈತರು ಈಡೇರಿಸಿಕೊಂಡಿದ್ದರು. ಹೀಗಾಗಿ ಈ ಪುಟ್ಟ ಸಂಸ್ಥಾನವು ಕೆಲವೇ ದಿನಗಳಲ್ಲಿ ಮಾದರಿ ಸಂಸ್ಥಾನ ಎನಿಸಿಕೊಂಡಿದ್ದಿತು.

ಅರಸೊತ್ತಿಗೆಯ ರಾಜ್ಯಗಳನ್ನೆಲ್ಲ ಭಾರತ ಒಕ್ಕೂಟದಲ್ಲಿ ವಿಲೀನಗೊಳಿಸುವ ಕಾರ್ಯದಲ್ಲಿ ಶ್ರೀ ಜತ್ತಿ ಸಾಹೇಬರು ಸಲ್ಲಿಸಿದ ಸೇವೆಯನ್ನು ಇತಿಹಾಸಕಾರರು ಸುವರ್ಣಾಕ್ಷರಗಳಿಂದ ಬರೆದಿಡಬೇಕಾಗಿದೆ. ಸು. ೫೬೦ ರಾಜಮಹಾರಾಜರ ಸಂಸ್ಥಾನಗಳನ್ನು ಒಕ್ಕೂಟದಲ್ಲಿ ವಿಲೀನಗೊಳಿಸಿಕೊಳ್ಳುವ ಮಹಾನ್ ಕಾರ್ಯವನ್ನು ಸರ್ದಾರ ಪಟೇಲರು ಕೈಕೊಂಡಿದ್ದರು. ದಕ್ಷಿಣದ ಸಂಸ್ಥಾನಗಳೆಲ್ಲವೂ ದಕ್ಷಿಣ ರಾಜ್ಯಗಳ ಒಕ್ಕೂಟವೆಂಬ ಹೆಸರಿನಲ್ಲಿ ಅಸ್ತಿತ್ವಕ್ಕೆ ಬರಬಹುದೆಂದು ಭಾರತ ಸರ್ಕಾರವು ಅನುಮತಿ ನೀಡಿದ್ದಿತು. ಈ ಆಲೋಚನೆಗೆ ಎಲ್ಲ ರಾಜಮಹಾರಾಜರ, ಅವರ ಮಂತ್ರಿ ಮಂಡಳಗಳ ಮತ್ತು ಪ್ರಜೆಗಳ ಅವಿರೋಧ ಒಪ್ಪಿಗೆಯಿದ್ದರೆ ತಮ್ಮದೇನೂ ಅಭ್ಯಂತರವಿಲ್ಲವೆಂದೂ ಸರ್ದಾರ ವಲ್ಲಭ ಬಾಯಿ ಪಟೇಲರು ತಿಳಿಸಿದರು. ಪುಣೆಯಲ್ಲಿ ನಡೆದ ಪೂರ್ವಭಾವಿ ಸಭೆಗೆ ಜಮಖಂಡಿ ಸಂಸ್ಥಾನದ ಪ್ರತಿನಿಧಿಯಾಗಿ ಸ್ವತಃ ಶ್ರೀ ಜತ್ತಿ ಸಾಹೇಬರೇ ಹೋಗಿದ್ದರು. ದಕ್ಷಿಣ ರಾಜ್ಯಗಳ ಒಕ್ಕೂಟದ ರಚನೆ, ಅಧಿಕಾರಗಳು, ವ್ಯಾಪ್ತಿ ಮೊದಲಾದವುಗಳೆಲ್ಲ ನಿರ್ಧರಿತವಾಗಿ ಹೋಗಿದ್ದವು. ಕೊನೆಗೆ ಈ ಒಕ್ಕೂಟದ ಆಡಳಿತ ಭಾಷೆ ಯಾವುದಿರಬೇಕೆಂಬ ಪ್ರಶ್ನೆ ಬಂದಾಗ ಶ್ರೀ ಜತ್ತಿ ಸಾಹೇಬರು ಎದ್ದುನಿಂತು ಬಹು ಸಂಖ್ಯಾತ ಪ್ರಜೆಗಳ ಭಾಷೆಯೇ ಆಡಳಿತ ಭಾಷೆಯಾಗಬೇಕೆಂದು ಹಟಹಿಡಿದರು. ಶ್ರೀ ಜತ್ತಿ ಸಾಹೇಬರ ವಾದ ಹಲವು ಅರಸೊತ್ತಿಗೆ ರಾಜ್ಯಗಳ ಪ್ರತಿನಿಧಿಗಳಿಗೆ ಒಪ್ಪಿಗೆಯಾಗಲಿಲ್ಲ; ಅವರು ಆಡಳಿತ ಭಾಷೆ ಬಗ್ಗೆ ತಮ್ಮವೇ ಆದ ವಿಚಾರಗಳನ್ನು ಇಟ್ಟುಕೊಂಡು ಬಂದಿದ್ದರು. ಪೂರ್ವಭಾವಿ ಸಭೆ ಈ ಕಾರಣ ಮುಂದಕ್ಕೆ ಹೋಯಿತು.

## ಪರಮೋಚ್ಚತ್ಯಾಗ

ತಮ್ಮ ಭಾಷಾ ನಿಲುವನ್ನು ಮಂಡಿಸಿ ಪುಣೆಯಿಂದ ಹಿಂತಿರುಗಿದವರೇ ಶ್ರೀ ಜತ್ತಿ ಸಾಹೇಬರು ತಮ್ಮ ರಾಜರಿಗೆ ಸಭೆಯ ಕಾರ್ಯಕಲಾಪಗಳ ವರದಿ ಒಪ್ಪಿಸಿ ಭಾರತ ಒಕ್ಕೂಟದಲ್ಲಿ ಸೇರುವುದರಲ್ಲೇ ಶ್ರೇಯಸ್ಸಿದೆಯೆಂದು ಸಲಹೆಯಿತ್ತರು. ನಿಜವಾಗಿಯೂ ಈ ಸಲಹೆ ಶ್ರೀ ಜತ್ತಿ ಸಾಹೇಬರ ತ್ಯಾಗದ ಪರಮೋಚ್ಚ ಕಾರ್ಯವಾಗಿತ್ತು. ಏಕೆಂದರೆ ಜಮಖಂಡಿಯು ಭಾರತ ಒಕ್ಕೂಟದಲ್ಲಿ ಸೇರಿದ ದಿನವೇ ಅವರು ಮುಖ್ಯಮಂತ್ರಿ ಪದದಿಂದ ಇಳಿಯಬೇಕಾಗುತ್ತಿತ್ತು. ಇದಾವುದನ್ನೂ ಲಕ್ಷಿಸದೆ ಕೇವಲ ಜಮಖಂಡಿ ಸಂಸ್ಥಾನದ ಸಾಮಾನ್ಯ ಜನತೆಯ ಹಿತ ದೃಷ್ಟಿಯಿಂದ ಅವರು ಅಂಥ ಸಲಹೆಯಿತ್ತಿದ್ದರು. ಬಹುಶಃ

ಇಡೀ ಭಾರತದಲ್ಲಿಯೇ ಮೊದಲನೆಯದಾಗಿ ಒಕ್ಕೂಟದಲ್ಲಿ ವಿಲೀನವಾದ ಶ್ರೇಯಸ್ಸು ಜಮಖಂಡಿಗೆ ಮೀಸಲಾಗಿರಬೇಕು !

ಶ್ರೀ ಜತ್ತಿ ಸಾಹೇಬರು ನಂತರ ಮುಂಬೈ ರಾಜ್ಯದಲ್ಲಿಯೂ ಆಮೇಲೆ ಕರ್ನಾಟಕ ರಾಜ್ಯದಲ್ಲಿಯೂ ವಿವಿಧ ಹುದ್ದೆಗಳ ಸೇವೆ ಸಲ್ಲಿಸುತ್ತಿರುವಾಗ ಜಯಖಂಡಿಯ ಮಹಾಜನತೆ ಕಾನೂನು ಪರಿಧಿಯಲ್ಲಿಯೇ ಬಹಳಷ್ಟು ಲಾಭ ಅನುಕೂಲಗಳನ್ನು ಪಡೆದರು.

**ಸಂತುಷ್ಟರು**

ತಮ್ಮ ತವರು ನೆಲವಾದ ಜಮಖಂಡಿ ಬಗ್ಗೆ ಅವರಿಗೆ ಎಲ್ಲಿಲ್ಲದ ಅಭಿಮಾನ ಮತ್ತು ಅಕ್ಕರೆ ಇದ್ದುದರಿಂದ ಜಮಖಂಡಿಗೆ ಸಾಕಷ್ಟು ಸೌಲಭ್ಯಗಳು ದೊರೆತವು ಮಾತ್ರವಲ್ಲ ಇಡೀ ಬಿಜಾಪುರ ಜಿಲ್ಲೆಯು ಶ್ರೀ ಜತ್ತಿ ಸಾಹೇಬರಿಂದ ಲಾಭ ಪಡೆಯಿತು. ಸುಧಾರಿಸಿದ ಬೀಜಗಳು ಮತ್ತು ಗೊಬ್ಬರಗಳಿಂದ ಅಲ್ಲಿಯ ಕೃಷಿ ಪ್ರಗತಿ ಸಾಧಿಸಿತು. ಸಾಂಪ್ರದಾಯಿಕ ಉದ್ಯೋಗವಾದ ನೇಕಾರಿಕೆಯು ಗಮನಾರ್ಹ ಏಳಿಗೆ ಪಡೆದಿದೆ. ತಾಲೂಕಿನ ನಗರ ಪ್ರದೇಶಗಳಲ್ಲಿ ಉದ್ದಿಮೆಗಳೂ ಬೆಳೆದಿವೆ. ಜಮಖಂಡಿಯ ಜನತೆಯ ಕಲ್ಯಾಣದ ಬಗ್ಗೆ ಅವರು ವಿಶೇಷ ಚಿಂತಾತುರಗೊಂಡಿರುತ್ತಾರೆ ಎಂಬುದಕ್ಕೆ ಅವರು ಕರ್ನಾಟಕದಲ್ಲಿ ಸಂಪುಟದ ಸಚಿವರಾಗಿರುವಾಗ ಎಲ್ಲ ತಾಲೂಕುಗಳಲ್ಲಿ ಮದ್ಯಪಾನ ನಿಷೇಧವನ್ನು ಕೊನೆಗೊಳಿಸಿದ್ದರೆ ಜಮಖಂಡಿಯಲ್ಲಿ ನಿಷೇದ ಜಾರಿಯಲ್ಲಿಯೇ ಇದ್ದಿತು. ಶ್ರೀ ಜತ್ತಿ ಸಾಹೇಬರ ಅಪೇಕ್ಷೆಗನುಗುಣವಾಗಿ ಜಮಖಂಡಿಯಲ್ಲಿ ಮದ್ಯಪಾನ ನಿಷೇಧ ಇದ್ದುದರಿಂದಲೇ ಅಲ್ಲಿಯ ಜನರು ಆರೋಗ್ಯವಂತರೂ, ಸಂತುಷ್ಟರೂ, ಸಮಾಧಾನ ಚಿತ್ತರೂ ಆಗಿದ್ದಾರೆಂದು ಹೇಳಬಹುದು.



# ಸಾವಳಿಗೆಯಿಂದ ನವದೆಹಲಿವರೆಗೆ

● ದಾನಪ್ಪ ಜತ್ತಿ ತಿಕೋಟಾ

● [ ನಾಮ ಸಾದೃಶ ಅನೇಕ ಸಲ ಆತ್ಮೀಯತೆಯನ್ನು ಉಂಟು ಮಾಡುತ್ತದೆ. ಮನೆತನದ ಹೆಸರೂ ಒಂದೇ ಆಗಿದ್ದರೆ ಇನ್ನೂ ಹೆಚ್ಚು ಮಮತೆಯನ್ನು ಮೂಡಿಸಬಹುದಲ್ಲವೆ ? ಶ್ರೀ ದಾನಪ್ಪ ಜತ್ತಿ ತಿಕೋಟಾ ಅವರು ಕರ್ನಾಟಕದ ಹಲವು ಪತ್ರಿಕೆ ಗಳಿಗೆ ಆಧ್ಯಾತ್ಮಿಕ ವಿಷಯಗಳ ಬಗ್ಗೆ ಬರೆದಾಗ ಶ್ರೀ ಬಿ. ಡಿ. ಜತ್ತಿ ಅವರ ತಂದೆಯವರೇ ಈ ಲೇಖಕರಾಗಿರಬಹುದೇ ಎಂದು ಅನುಮಾನಪಟ್ಟವರುಂಟು. ಪಾಪ, ಅವರಿಗೇನು ಗೊತ್ತು ! ಶ್ರೀ ಬಿ. ಡಿ. ಜತ್ತಿ ಅವರು ಚಿಕ್ಕಂದಿನಲ್ಲಿಯೇ ತಂದೆಯ ವಾತ್ಸಲ್ಯದಿಂದ ವಂಚಿತರಾದರೆಂಬುದು. ತಿಕೋಟಾದ ಶ್ರೀ ದಾನಪ್ಪ ಜತ್ತಿ ಅವರು ಈಗ ಶ್ರೀ ಬಿ. ಡಿ. ಜತ್ತಿ ಅವರ ಉತ್ಕರ್ಷ ದಿಂದ ಹರ್ಷಗೊಂಡು ಪಿತೃಸದೃಶ ವಾತ್ಸಲ್ಯದಿಂದಲೇ ಈ ಲೇಖನ ಒರೆದಿದ್ದಾರೆ. — ಸಂ. ]

ರಾಷ್ಟ್ರದ ವಿವಿಧ ನಕ್ಷಗಳ ಮಾಲಿಕೆಯಲ್ಲಿ ಭಾರತಕ್ಕೆ ಒಂದು ವಿಶಿಷ್ಟ ವಾದ ಸ್ಥಾನವಿದೆ; ವಿಶೇಷವಾದ ಮಾನವಿದೆ. ತನ್ನ ಸಂಸ್ಕೃತಿ, ಆಧ್ಯಾತ್ಮ ಪರಂಪರೆಯಿಂದ ಇಂದಿಗೂ ಆ ಸ್ಥಾನವನ್ನು ಉಳಿಸಿಕೊಂಡಿದೆ ಬೆಳಿಸಿಕೊಂಡಿದೆ. ಶರಣರೂ, ದಾಸರೂ, ಸಂತರೂ, ಮುತ್ಸದ್ದಿಗಳೂ ಮಹಾತ್ಮರನ್ನು ಹೊತ್ತು ಹೆತ್ತಾಲಿಸಿದ ಭಾರತಿ ಜಗದ ಉತ್ತುಂಗ ಶಿಖರದಲ್ಲಿದ್ದಾಳೆ. ಭಾರತಿ ವಿಶ್ವ ದೇವಿಯ ಕಂಠಾಭರಣವಾಗಿ ಬೆಳಗುತ್ತಿದ್ದರೆ,ಕನ್ನಡ ತಾಯಿ ಆ ಹಾರ ಮಧ್ಯದ ರನ್ನಪದಕವಾಗಿ ಮಿನುಗುತ್ತಿದ್ದಾಳೆ.

ಕನ್ನಡ ನಾಡು ವೈಶಿಷ್ಟ್ಯಪೂರ್ಣವಾಗಿರುವಂತೆ, ಈ ನಾಡಿನ ವೈಶಿಷ್ಟ್ಯ ಪೂರ್ಣತೆಯ ಪ್ರತೀಕದಂತಿದ್ದಾರೆ. – ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರು. ನಮ್ಮ ನಾಡಿನ ಚರಿತ್ರೆಯು ಕೇವಲ ರಾಜರ ಆಗು ಹೋಗುಗಳಲ್ಲಿಲ್ಲ ಅದು ಮಾನವ ಜೀವನದ ವರ್ತನೆ ಪರಿವರ್ತನೆಯಲ್ಲಿದೆ ಎಂಬುದರ ಸಾಂಕೇತಿಕವಾಗಿದ್ದಾರೆ ಶ್ರೀ ಜತ್ತಿ ಅವರು.

ಹನ್ನೆರಡನೆಯ ಶತಮಾನದ ಯುಗಪುರುಷ ಬಸವಣ್ಣನವರು. ಭಕ್ತಿ ಭಾಂಡಾರಿಗಳಾಗಿ, ಮುಖ್ಯ ಮಂತ್ರಿಗಳಾಗಿ, ಅನುಭವ ಮಂಟಪದ ಅನುಭಾವಿಗಳಾಗಿ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಕ್ರಾಂತಿ ಮಾಡಿದಂತೆ. ಈ ನಮ್ಮ ಬಸವಪ್ಪನವರು ಶರಣ ಸಾಹಿತ್ಯವನ್ನು ಅಭ್ಯಸಿಸಿ, ಅನುಸರಿಸಿ ಅನುಭವದ ಹಂತಕ್ಕೆ ಏರಿ ನಿಂತಿದ್ದಾರೆ.

ತಮ್ಮ ಜನ್ಮಸ್ಥಾನವಾದ ಸಾವಳಗಿಯ ಪಂಚಾಯತಿಯ ಚೇರಮನ್‌ರಾಗಿ, ಎಂ. ಎಲ್ ಎ. ಗಳಾಗಿ, ಮಂತ್ರಿಗಳಾಗಿ, ಮುಖ್ಯ ಮಂತ್ರಿಗಳಾಗಿ, ಲೆ. ಗವರ್ನರರಾಗಿ, ಗವರ್ನರರಾಗಿ ಈಗ ಭಾರತದ ಉಪರಾಷ್ಟ್ರಪತಿಗಳಾಗಿ, ತಜ್ಞ ರಾಜಕಾರಣಿಗಳೆನಿಸಿದ್ದಾರೆ. ಹಳ್ಳಿಯಿಂದ ದಿಲ್ಲಿಯವರೆಗೂ ( ಸಾವಳಗಿಯಿಂದ — ದಿಲ್ಲಿಯವರೆಗೂ ) ಅವರ ಕಾರ್ಯ ಕ್ಷೇತ್ರ ಹಬ್ಬಿ ನಿಂತಿದೆ.

ಬಸವಣ್ಣನವರ ಅಷ್ಟ ಶತಮಾನೋತ್ಸವವನ್ನು ನಾಡಿನ ತುಂಬೆಲ್ಲ ವೈವಿಧ್ಯಮಯವಾಗಿ ಜರುಗಿಸಲು ಕಾರಣಕರ್ತರಾಗಿ ಜನ ಜೀವನಕ್ಕೆ ಸಾಂಸ್ಕೃತಿಕ ಪ್ರಜ್ಞೆಯನ್ನು ತಂದು ಕೊಟ್ಟಿದ್ದಾರೆ. ಬಸವಣ್ಣನವರ ಹೆಸರಿಟ್ಟುಕೊಂಡದ್ದಕ್ಕೆ ಸಾರ್ಥಕತೆ ತಂದಿದ್ದಾರೆ.

## ಭವಿಷ್ಯ

ಎಲ್ಲ ಯೋಗಗಳಲ್ಲಿ ಶಿವಯೋಗವೇ ಶ್ರೇಷ್ಠವಾದುದು. ಶಿವಯೋಗಿಗಳಲ್ಲೆಲ್ಲ ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು ಸರ್ವ ಶ್ರೇಷ್ಠರಾಗಿದ್ದರು. ಅವರ ಹಸ್ತ ಪರುಷ, ಪಾದ ಪರುಷ; ನೇತ್ರ ಪರುಷ; ವಾಣಿ ಪರುಷ. ಅವರಿಂದ ನಮ್ಮ ನಾಡು ಪಾವನ ಬೀಡಾಯೀತು ಆ ಮಹಾತ್ಮರ ಅಸಂಖ್ಯ ಭಕ್ತ ಬಳಗದ ಬಂಧನದಲ್ಲಿ ಶ್ರೀ ದಾನಪ್ಪನವರೂ ಒಬ್ಬರು. ಶಿವಯೋಗಿಗಳವರಲ್ಲಿ ಪರಮ ಭಕ್ತಿಯನ್ನಿಟ್ಟು ಶ್ರದ್ಧೆಯಿಂದ ಅರ್ಚಿಸಿ ನಂಬುಗೆಯಿಂದೆ ನಡೆಯುತ್ತಿದ್ದರು. ಶಿವಯೋಗಿಗಳವರ ಮಂಗಲಾಶೀರ್ವಾದದಿಂದ ಜನಿಸಿದ ಈ ಬಸಪ್ಪನವರನ್ನು ಹಸುಳೆ ಇರುವಾಗಲೇ ಇವರ ತಂದೆಯವರು ಇವರನ್ನು ಶ್ರೀಗಳವರ ಪಾದದರ್ಶನಕ್ಕೆ ಕೊಂಡೊಯ್ದರು. ಪೂಜ್ಯರು ಕಣ್ಣರಳಿಸಿ ಈ ಮಗುವನ್ನು ಕಣ್ತುಂಬಿ ನೋಡಿ, ಮಸ್ತಕಕ್ಕೆ ಹಸ್ತ ಸ್ಪರ್ಶಿಸಿ " ಇವನು ಸಾಮಾನ್ಯನಾಗದೆ ಅಸಾಮಾನ್ಯನಾಗುತ್ತಾನೆ; ರಾಜ ಲಕ್ಷಣದ ಈ ಮಗುವಿನ ಭವಿಷ್ಯ ಉಜ್ವಲವಾಗುವದು; ಇವನ ಸೇವೆಯಿಂದ ನಾಡು ನುಡಿಗೆ ಹೆಚ್ಚಿನ ಮೆರಗು ಬರುವದು – ಎಂದು

ಕಣ್ತೆರೆದು ಕೃಪೆ ನೀಡಿದರು. ಹತ್ತಿರ ಕರೆದು ಹರಕೆ ಸೂಸಿದರು " ಆ ಮಹಾ ಶಿವಯೋಗಿಗಳವರ ಕರುಣೆಯ ಕಂದನೇ ಈ ನಮ್ಮ ಶ್ರೀ ಬಿ. ಡಿ. ಜತ್ತಿ ಅವರು.

* * * * *

ಮಾನವರಾದ ಯಾರನ್ನೂ ಅತಿಯಾಗಿ ಪ್ರೀತಿಸಬೇಡ,
ಅತಿ ಪ್ರಿತಿ ಅನಂತ ದುಃಖಕ್ಕೆ ಬುನಾದಿ,
ದೇವರನ್ನು, ದೇಶವನ್ನು ಪ್ರೀತಿಸು.
ಆ ಪ್ರೀತಿ ಮಾತ್ರ ಶಾಶ್ವತ.

ಎಂಬ ಒಬ್ಬ ಸಾಹಿತಿಯ ನುಡಿಮುತ್ತಿನಂತೆ ಶ್ರೀ ಜತ್ತಿ ಅವರು ದೇವರನ್ನು, ದೇಶವನ್ನು ಪ್ರೀತಿಸಿದರು; ಪ್ರೀತಿಸುತ್ತಿರುವರು. ಕಡಲ ನೀರು ಉಪ್ಪನ್ನಳಿದು ಉಗಿಯಾಗಿ ಸಿಹಿನೀರಿನ ಹನಿ ಘನಿಸುವಂತೆ ಸಾಮಾನ್ಯತೆಯಿಂದ ಅಸಾಮಾನ್ಯತೆಗೇರಿದರು. ನಾಡಿನ ಜನ ಪ್ರೀಯ ಜನ ನಾಯಕರಾಗಿ ಸೇವೆ ಸಲ್ಲಿಸಿದುದು ಈಗ ಸಲ್ಲಿಸುತ್ತಿರುವುದು, ಅವರ ಮುತ್ಸದ್ದಿತನದ ಹಿರಿಮೆಯ ಪ್ರತೀಕವಾಗಿದೆ. ನಾಶವಾಗುವದನ್ನು ಪ್ರೀತಿಸದೆ, ಅವಿನಾಶವಾದುದನ್ನೇ ಪ್ರೀತಿಸಿ ತಮ್ಮ ಪ್ರೀತಿಗೆ ಶಾಶ್ವತತೆಯನ್ನು ತಂದು ಕೊಂಡಿದ್ದಾರೆ. ದೇಶ ನನಗೇನು ಕೊಟ್ಟಿತು ? ಎಂಬೆನ್ನದೆ ದೇಶಕ್ಕೆ ನಾನೇನು ಕೊಡಬಲ್ಲೆ ಎಂದು ಹಂಬಲಿಸಿ ದುಡಿದಿದ್ದಾರೆ ದುಡಿಯುತ್ತಿದ್ದಾರೆ. ಎಲ್ಲಕ್ಕೂ ಹೆಚ್ಚಿನ ಅಧಿಕಾರದಲ್ಲಿರುವವನು ಜನತೆಯ ಪ್ರಥಮ ಸೇವಕನಾಗಬೇಕು ಎಂಬುದರ ಅರಿವು ಇವರ ಆಚರಣೆಯಲ್ಲಿ ಮೈ ಗೂಡಿದೆ.

ರಾಜಕಾರಣಿಯಾಗು ರಾಷ್ಟ್ರ ಭಕ್ತನೆ ಆಗು,
ಕಲೆಗಾರ, ವಿಜ್ಞಾನಿ, ವ್ಯಾಪಾರಿಯಾಗು,
ಏನಾದರೂ ಆಗು ನಿನ್ನೊಲವಿನಂತಾಗು,
ಏನಾದರೂ ಸರಿಯೇ ಮೊದಲು ಮಾನವನಾಗು

ಎಂಬ ಕಾವ್ಯಾನಂದರ ಕಾವ್ಯವಾಣಿಯಂತೆ ರಾಜಕಾರಣಿ, ರಾಷ್ಟ್ರಭಕ್ತ ಆಧ್ಯಾತ್ಮಿ ಆಗಿ ಮಾನವತೆಯನ್ನು ಮೈ ಗೂಡಿಸಿಕೊಂಡ ನಿಜ ಮಾನವರಿವರು. ಇವರ ಸರಳ ಸಾದಾ ಜೀವನ ಕಂಡವರು ಆನಂದಾಶ್ಚರ್ಯದಲ್ಲಿ ಮೈ ಮರೆಯುವರು. ಸಾವಳಗಿಯ ಇವರ ತಂದೆ ತಾಯಿಗಳವರ ಗ್ರಾಮೀಣ ಸರಳ ಸಾದಾ ಜೀವನ ಸಂಸ್ಕೃತಿ ರಕ್ತಗತವಾಗಿ ಇವರಲ್ಲಿ ಬಂದಿದೆ. ಒಮ್ಮೆ ಮುಖ್ಯ ಮಂತ್ರಿಗಳಾಗಿದ್ದಾಗ ಸಾವಳಗಿಗೆ ತಾಯಿಯ ದರ್ಶನಕ್ಕೆ ಬಂದರು. ಅದೇ ಸಮಯದಲ್ಲಿ ತಾಯಿಯವರು ಸೆಗಣಿಯಿಂದ ಬೆರಣಿ ( ಕುಳ್ಳು ) ತಟ್ಟುತ್ತಿದ್ದರು. ಜತ್ತಿ

ಅವರು ಧಾವಿಸಿ ತಾಯಿಗೆ ನಮಸ್ಕರಿಸಿದರು. ನಾಡಿಗೆ ಸಚಿವರಾದರೂ ತಾಯಿಗೆ ಮಗನಲ್ಲವೆ ? ಆನಂದ ಭಾಷ್ಪಗಳನ್ನುದುರಿಸುತ್ತ, ಮಗನ ಮೈದಡವಿದಳು ಆ ತಾಯಿ. ಆ ಸಮಯದಲ್ಲಿ ತಾಯಿಯವರ ಕೈಗೆ ಹತ್ತಿದ ಸೆಗಣಿ ಇವರ ಮೈಗೆ ತಾಕಿತು- ಹೊರನೋಟಕ್ಕೆ ಸಚಿವರ ಮೈಗೆ ಸೆಗಣಿ ಹತ್ತಿದ್ದರೆ ಅಂತರಂಗಕ್ಕೆ ಆ ತಾಯಿಯ ವಾತ್ಸಲ್ಯ ಮೆತ್ತಿ ಮುತ್ತಿ ನಿಂತಿತ್ತು- ಆ ದೃಶ್ಯವನ್ನು ತಿಳಿಗಣ್ಣಿನಿಂದ ಕಂಡವರಿಗೆ ಮಾತ್ರ ಆ ಆನಂದದ ರಸಾನುಭೂತಿ ದೊರೆತೀತು.

ಶ್ರೀ ಬಿ. ಡಿ. ಜತ್ತಿ ಅವರ ಧರ್ಮಪತ್ನಿ ಶ್ರೀಮತಿ ಸಂಗಮ್ಮನವರು ಬಾಬಾ ನಗರದ ಚಿಕ್ಕ ಹಳ್ಳಿಯ ತವರಿನವರಾದರೂ, ಹಿರಿ ಜೀವನದ ಜ್ಯೋತಿಗೆ ತೈಲ ವಾಗಿದ್ದಾರೆ. ಜತ್ತಿ ಅವರ ಬದುಕಿಗೆ ಸ್ಫೂರ್ತಿಯ ನೆಲೆಯಾಗಿದ್ದಾರೆ; ಬಾಳಿಗೆ ಬೆಲೆ ಮುತ್ತಾಗಿದ್ದಾರೆ. ಮನೆಯ ಒಂದು ಗೋಡೆ ಗೃಹಸ್ಥನ ಮೇಲೆ ನಿಂತಿ ದ್ದರೆ, ಮೂರು ಗೋಡೆ ಗೃಹಿಣಿಯ ಮೇಲೆ ನಿಂತಿದೆ ಎಂಬುವಂತೆ ಶ್ರೀ ಜತ್ತಿ ಅವರ ವೈವಿಧ್ಯಮಯ ಜೀವನದ ಮುಂಬೆಳಕಿಗೆ ದಾರಿ ದೀಪವಾಗಿದ್ದಾರೆ. ಹನ್ನೆ ರಡನೆಯ ಶತಮಾನದ ಬಸವಣ್ಣನವರ ಮತ್ತು ಅವರ ಧರ್ಮ ಪತ್ನಿ ನೀಲಾಂಬಿಕೆಯವರ ಶರಣ ದಾಂಪತ್ಯದಂತೆ ಇವರದು ಆದರ್ಶ ದಾಂಪತ್ಯ, ಅನ್ಯೋನ್ಯ ದಾಂಪತ್ಯ, ಸಾಫಲ್ಯ ದಾಂಪತ್ಯ. ಪ್ರಸಿದ್ಧಿ ಪಡೆದ ಕೆಲ ವ್ಯಕ್ತಿಗಳ ಜೀವ ನವನ್ನು ಇಣಿಕಿದಾಗ ಅಲ್ಲಿ ಅರೆ ಕೊರೆಯಾದ ಜೀವನ ಚಿತ್ರಗಳು ಕಂಡು ಬಂದರೆ ಜತ್ತಿ ಅವರದು ತುಂಬು ಜೀವನ ಇಂಬಾದ ಜೀವನ.

### ಮಾತೆಕೃಪೆ

ಕನ್ನಡ ನಾಡಿನಿಂದ ಪಾಂಡಿಚೇರಿಗೆ ತೆರಳಿದ ಜತ್ತಿ ಅವರು ಅಲ್ಲಿ ಹೊಸ ಲೋಕವನ್ನೇ ಕಂಡುಂಡರು. ಅಲ್ಲಿ ಅರವಿಂದಾಶ್ರಮದ ಸವಿ ಸಾನಿಧ್ಯಪಡೆದು, ಪೂಜ್ಯ ಮಾತೆಯವರ ಕೃಪೆ ಪಡೆದರು. ಆ ಆಶ್ರಮದ ಪರಿಸರ ಪರಿಸ್ಥಿತಿಗಳು ಇವರ ಜೀವನಕ್ಕೆ ರಸಚೇತನವನ್ನು ಒದಗಿಸಿದ್ದರೆ, ಮಾತೆಯವರ ಕರುಣೆ ಇವರ ಬಾಳಿಗೆ ಚಿತ್ ಚೇತನವನ್ನು ನೀಡಿತು.

ರಾಜಕೀಯದಲ್ಲಿ, ಆಧ್ಯಾತ್ಮದಲ್ಲಿ, ಸಾಮಾಜಿಕದಲ್ಲಿ, ಸ್ಥಾನಪಡೆದಿರುವಂತೆ ಸಾಹಿತ್ಯದಲ್ಲಿಯೂ ಇವರಿಗೆ ಅಭಿರುಚಿ ಆಸಕ್ತಿಗಳು ಇವೆ ಎನ್ನುವುದಕ್ಕೆ ಇವರ ಲೇಖನ, ಭಾಷಣಗಳೇ ಸಾಕ್ಷಿ ನುಡಿಯುತ್ತಿವೆ. ಇವರಿಗೆ ಶರಣ–ಸಾಹಿತ್ಯದ ಮೇಲೆ ಅದೆಂತಹ ಅಪ್ರತಿಮ ಸ್ನೇಹ ! ಅದೇನು ಆಕರ್ಷಣ ! ಇವರ ಭಾಷಣ ಕೇಳಿದಾಗ ಇವರ ಕೆಲ ಲೇಖನಗಳನ್ನೋದಿದಾಗ ಇದರರಿವು ನಮಗಾಗದಿರದು.

ರಷ್ಯಾದ ಕೊಸಗಿನ್ನರು ಒಮ್ಮೆ ದಿ. ಲಾಲಬಹಾದ್ದೂರ ಶಾಸ್ತ್ರಿಯವರನ್ನು ತಮ್ಮ ದೇಶಕ್ಕೆ ಆಹ್ವಾನಿಸಿದಾಗ "ನಿಮ್ಮಂಥ ದೊಡ್ಡ ದೇಶದಲ್ಲಿ ನನ್ನಂಥ ಸಣ್ಣ ವ್ಯಕ್ತಿಗೆ ಏನು ಕೆಲಸ ?" ಎಂದ ಶಾಸ್ತ್ರಿಯವರ ಮಾತಿಗೆ ಕೊಸಗಿನ್ನರು ನಗುತ್ತ "ನಮ್ಮ ದೇಶದ ಜನತೆ ತಮ್ಮನ್ನು ಇಂಚು–ಫೂಟುಗಳಿಂದ ಅಳೆಯುವದಿಲ್ಲ. ವ್ಯಕ್ತಿತ್ವದ ಮಾನದಂಡದಿಂದ ಅಳೆಯುತ್ತಾರೆ." ಎಂದು ನುಡಿದರಂತೆ. ಅದರಂತೆ ಭಾರತೀಯರಾದ ನಾವು ಶ್ರೀ ಜತ್ತಿಯವರನ್ನು ಮೀಟರಿನಿಂದ ಅಳೆಯದೆ ವ್ಯಕ್ತಿತ್ವದ ಘನತೆ ಗೌರವದ ಮಾನದಂಡದಿಂದ ಅಳೆಯಬೇಕು. ಮೂರ್ತಿ ಚಿಕ್ಕದಾದರೂ, ಕೀರ್ತಿ ಚಿಕ್ಕದಲ್ಲವೆಂಬುದನ್ನು ತಿಳಿಯಬೇಕು.

ಇಂದು ಪೂರ್ಣಜೀವನದಿಂದ ಪರಿಪೂರ್ಣ ಜೀವನಕ್ಕೆ ಏರಿನಿಂತಿರುವ ಶ್ರೀ ಜತ್ತಿ ಅವರು ಕನ್ನಾಡಿನ ಭಾರತದ ಒಬ್ಬ ಶ್ರೇಷ್ಠ ವ್ಯಕ್ತಿಗಳಾಗಿ ನಾಡಸೇವೆ, ದೇಶಸೇವೆ ಸಲ್ಲಿಸುತ್ತಿರುವ ಅವರಿಗೆ ನಾವೆಲ್ಲ ಗೌರವ ನೀಡುವದು, ಭಾರತೀಯರಾದ ನಮ್ಮ ಕರ್ತವ್ಯ. ಅವರನ್ನು ಗೌರವಿಸುವದೆಂದರೆ ನಾಡ–ನುಡಿಯನ್ನೇ ಗೌರವಿಸಿದಂತೆ. ಅವರಿಂದ ಕನ್ನಡನಾಡಿಗೆ, ಭಾರತಕ್ಕೆ ಇನ್ನೂ ಹೆಚ್ಚಿನಸೇವೆ ಸಲ್ಲಲ್ಲಿ. ಅವರನ್ನೂ ನೂರ್ಕಾಲಬಾಳಿ ಬೆಳಗಲೆಂದು ತಾಯಿ ಭಾರತಮ್ಮನಲ್ಲಿ ಪ್ರಾರ್ಥನೆ.



## ವೃಥಾದುಃಖ

ಕಷ್ಟನ ಮನೆಯಲ್ಲಿ ಸೃಷ್ಟಿಗೀಶ್ವರನುಂಬಾಗ,
ಎತ್ತ ಹೋದವೋ ನಿಮ್ಮ ಶಾಸ್ತ್ರಂಗಳು ?
ಕೆತ್ತಿದ ಮುಚ್ಚಳು ಬೇಡಂಗೆ ತೆರೆದಾಗ
ಇಕ್ಕಿದ ಜನಿವಾರ ಬೀಯವಾದವು.
ಮುಕ್ಕುಳಿಸಿದ ನೀರು ಮಜ್ಜನಕ್ಕೆರೆದಾಗ
ಎತ್ತಲಿರ್ದವು ನಿಮ್ಮ ವೇದಂಗಳು ?
ನಿಮ್ಮ ದುಂಃಖ ಬೇಡೆಂದಾತ ಅಂಬಿಗರ ಚೌಡಯ್ಯ

— ಅಂಬಿಗರ ಚೌಡಯ್ಯ

# ಬಿ. ಡಿ. ಜೆ. ನಾ ಕಂಡಂತೆ

● ಸ. ಸ. ಮಾಳವಾಡ

● [ ಪ್ರೊ. ಸ. ಸ. ಮಾಳವಾಡರು ನಮ್ಮ ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳಲ್ಲದೆ ಚಿಂತನಶೀಲ ವ್ಯಕ್ತಿಗಳೂ ಹೌದು. ಅರವಿಂದರ ತತ್ವಜ್ಞಾನದಿಂದ ವಿಶೇಷ ಪ್ರಭಾವಿತರಾಗಿದ್ದಾರೆ. ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರನ್ನು ಸಹಪಾಠಿಗಳಾಗಿ ಪಡೆಯುವುದಲ್ಲದೆ ಸಹ ಸಾಧಕರಾಗಿಯೂ, ಸಹ ಮುಮುಕ್ಷಗಳಾಗಿಯೂ ಪಡೆದಿದ್ದಾರೆ. ಇಂಥ ಸ್ನೇಹಿತರು ಬಹು ಸಂಖ್ಯೆಯಲ್ಲಿ ಇರುವುದರಿಂದಲೇ ಶ್ರೀ ಜತ್ತಿ ಅವರಿಗೆ ಬಸವ ಸಮಿತಿಯಂಥ ಬೃಹತ್ ಸಂಸ್ಥೆಯನ್ನು ಸ್ಥಾಪಿಸಲೂ ಸಾಧ್ಯವಾಗಿದೆ; ಪಾಂಡಿಚೇರಿಯಲ್ಲಿ ಕರ್ನಾಟಕ ನಿಲಯಂ ನಿರ್ಮಿಸಲೂ ಶಕ್ಯವಾಗಿದೆ. — ಸಂ. ]

ಬಿ. ಡಿ. ಜತ್ತಿ ಹೆಸರು ಚಿಕ್ಕದು. ಆ ಹೆಸರನ್ನು ಹೊತ್ತ ಪುರುಷಾಕೃತಿಯೂ ಚಿಕ್ಕದು. ಬಿಟ್ಟ ಮೀಸೆ ಕೂಡ ಚಿಕ್ಕ ಆ ಕಾ ರ ದ ವು. ತೊಟ್ಟವೇಷ ಬಹಳ ಸಾದಾ. ಮೂರು ಬಿಳಿಯ ಬಟ್ಟೆಗಳಿಗನುಗುಣವಾಗುವಂತೆ ಮೂರು ಸಾಲು ಬಿಳಿಯ ವಿಭೂತಿ. ಪಡೆದ ಪ್ರಸಿದ್ಧಿ ಮಾತ್ರ ಬಹಳ ದೊಡ್ಡದು.

ನದಿಯ ಚಿಕ್ಕ ಮೂಲದಂತೆ ಜತ್ತಿಯವರ ಆರಂಭದ ಸಾರ್ವಜನಿಕ ಜೀವನದ ಸ್ಥಾನಮಾನವೂ ಚಿಕ್ಕದೇ. ಆದರೆ ಅದು ಕ್ರಮಶಃ ಬೆಳೆಯುತ್ತ ಇದೀಗ ಮಹಾಪೂರಕ್ಕೆ ತಿರುಗಿದೆ.

೧೯೨೭ ರಲ್ಲಿ ವಿಜಾಪುರ ಹಾಯಸ್ಕೂಲಿನಲ್ಲಿ ಬಿಡಿಜೆ ಯವರೊಂದಿಗೆ ಪಡೆದ ಸಂಪರ್ಕ ಇಂದಿನವರೆಗೆ ಹರಿದು ಬಂದಿದೆ. ಇಷ್ಟೊಂದು ದೀರ್ಘ ಅವಧಿಯ ಸಂಪರ್ಕದ ವ್ಯಕ್ತಿಗಳ ಸಂಖ್ಯೆ ನನ್ನ ಸಂಬಂಧದಲ್ಲಿ ತೀರ ಸಣ್ಣದೇ. ಸಂಪರ್ಕ ಬಹಳ ಕಾಲದ್ದಾದರೂ ನಮ್ಮಿಬ್ಬರ ಜೀವನ ವಾಹಿನಿಗಳು ಬೇರೆ ಬೇರೆ ದಿಸೆಗಳಲ್ಲಿಯೇ ಹರಿದಿವೆ. ಎದ್ದು ಕಾಣದಂತಹ ಆದರೆ ಪರಿಣಾಮಕಾರಿಯಾದ ವ್ಯಕ್ತಿತ್ವ. ಅಭ್ಯಾ

ಸನಿಷ್ಠೆ, ಪರಿಶ್ರಮಯುಕ್ತ ದುಡಿಮೆ. ಸರಳ ಆದರೆ ಅರ್ಥವತ್ತಾದ ಜೀವನದ ಬಗೆ, ಮಾತಿನಲ್ಲಿ ಸೌಮ್ಯ, ಆದರೆ ನಿಲುಮೆಯಲ್ಲಿ ಜಿಗಟುತನ. ಹೀಗೆ ವಿಧ್ಯಾರ್ಥಿದೆಸೆಯಲ್ಲಿ ಬಿ. ಡಿ. ಜೆ. ಯವರನ್ನು ಕುರಿತ ನನ್ನ ಸಂವೇದನೆ.

೧೯೩೭ ರ ನಮ್ಮಿಬ್ಬರ ಪರಿಚಯವು ೧೯೩೮ ರಲ್ಲಿ ಕೊಲ್ಲಾಪುರದಲ್ಲಿ ಹೆಚ್ಚು ನಿಕಟವಾಗಿ ಮುಂದುವರಿಯಿತು. ನಾನಾಗ ಎಂ. ಎ. ವಿಧ್ಯಾರ್ಥಿ. ಬಿಡಿಜೆ ಬಿ. ಎ. ಪರೀಕ್ಷೆಗಾಗಿ ಓದುತ್ತಿದ್ದರು. ಮನೆತನದ ಅನಾನುಕೂಲತೆಯಿಂದಾಗಿ ಒಂದು ವರುಷ ಹಿಂದೆ ಉಳಿದರೆಂದು ತೋರುತ್ತಿದೆ. ಬಿ. ಎ. ಮುಗಿಸಿದ ನಂತರ ಎಲ್. ಎಲ್. ಬಿ. ಆಗುವ ಪೂರ್ವದಲ್ಲಿ ಕೌಟುಂಬಿಕ ತೊಂದರೆಯಿಂದಾಗಿ ಕೆಲ ಕಾಲ ವ್ಯಾಸಂಗವನ್ನು ತಡೆಹಿಡಿಯಬೇಕಾಯಿತು. ಎಂ. ಎ. ವಿಧ್ಯಾರ್ಥಿಯಾಗಿ ನಾನು ಹರಿಹರದೇವ ಕವಿಯನ್ನು ಕುರಿತು ಪ್ರೌಢ ವ್ಯಾಸಂಗ ಕೈಕೊಂಡಿದ್ದೆ. ಬಿಡಿಜೆ ಬಿ. ಎ. ಪರೀಕ್ಷೆಗಾಗಿ ಹರಿಹರದೇವ ಕವಿಯ ಬಸವರಾಜದೇವ ರಗಳೆ ಪಠ್ಯಪುಸ್ತಕವಾಗಿತ್ತು. ಆ ಗ್ರಂಥವನ್ನು ಅವರು ನನ್ನೊಂದಿಗೆ ಓದುತ್ತಿದ್ದರು. ಆಗ ನಾನು ಅವರ ಕನ್ನಡ ಸಾಹಿತ್ಯ ಪ್ರೇಮ, ಶಿವಶರಣರನ್ನು, ಮುಖ್ಯವಾಗಿ ಬಸವಣ್ಣನವರನ್ನು ಕುರಿತ ನಿಷ್ಠೆಯನ್ನು ಗುರುತಿಸಿದೆ. ನಾವಿಬ್ಬರೂ ಒಂದೇ ಕಡೆಗೆ ವಾಸಿಸುತ್ತಿದ್ದೆವು. ನಾವಿಬ್ಬರು ಇನ್ನು ಕೆಲವು ಸಹಪಾಠಿಗಳು ಸೇರಿ 'ಬಸವನ ಬಳಗ' ವನ್ನು ಆರಂಭಿಸಿದೆವು. ಆ ಬಳಗವು ಕನ್ನಡನಾಡು, ನುಡಿ, ಸಾಹಿತ್ಯ, ಶರಣಸಂದೇಶಗಳ ಬಗೆಗೆ ಚಟುವಟಿಕೆಗಳನ್ನು ಸಂಘಟಿಸಿದೆವು. ಅಂದಿನ ಆ ಚಟುವಟಿಕೆಗಳು ಪ್ರಭಾವಪೂರ್ಣವೂ ಆಗಿ ಪರಿಣಮಿಸಿದವು. ಕೀ. ಶೇ. ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ನಮ್ಮ ಚಟುವಟಿಕೆಗಳನ್ನು ಮನವಾರೆ ಮೆಚ್ಚಿಕೊಂಡರು. ಪ್ರೊ. ಕೀ. ಶೇ. . ಕೆ. ಜಿ. ಕುಂದಣಗಾರರ ಮಾರ್ಗದರ್ಶನ ನಮಗೆ ಒದಗಿಬರುತ್ತಿತ್ತು.

## ಕನ್ನಡ ಕಸುವು

೧೯೪೭ ರಲ್ಲಿ ನಾನು ಕರ್ನಾಟಕ ಕಾಲೇಜಿನಲ್ಲಿ ಪ್ರಾಧ್ಯಾಪಕನಾದೆ. ಬಿಡಿಜೆಯವರು ಕೆಲಕಾಲ ಚಿಕ್ಕ ಅಂಗಡಿಯನ್ನು ನಡೆಸಿ ಮುಂದೆ ವಕೀಲರಾಗಿ ಜಮಖಂಡಿಯಲ್ಲಿ ನೆಲಸಿದರು. ಒಮ್ಮೆ ನಾಡಹಬ್ಬದ ಕಾಲಕ್ಕೆ ನನ್ನನ್ನು ಜಮಖಂಡಿಗೆ ಆಮಂತ್ರಿಸಿದರು. ಆಗ ನಾನು ಅವರ ಮನೆಯಲ್ಲಿಯೇ ಉಳಿದುಕೊಂಡಿದ್ದೆ. ಮರಾಠಿ ಭಾಷೆಯ ಪ್ರಭಾವವಿದ್ದ ಅಂದಿನ ಜಮಖಂಡಿಯಲ್ಲಿ ಬಿಡಿಜೆಯವರಿಂದಾಗಿ ಅಲ್ಲಿಯ ಕನ್ನಡದ ಚಟುವಟಿಕೆಗಳಿಗೆ ಒಳ್ಳೆಯ ಕಸುವು ಬರತೊಡಗಿತ್ತು. ಜಮಖಂಡಿಯ ನನ್ನ ವಾಸ್ತವ್ಯದಲ್ಲಿ ನಾನು ಅಲ್ಲಿಯ ಕನ್ನಡದ ಕಾರ್ಯ ಅಪೂರ್ಣ

ವಾಗಿದೆಯೆಂದು ಹೇಳಿದೆನಂತೆ. ಆ ಮಾತನ್ನೇ ಬಳಸಿಕೊಂಡು ಅಂತಹ ಕಾರ್ಯ ಪೂರ್ಣಗೊಳ್ಳುವಂತೆ ಯೋಜನೆ ಹಾಕಿ ಅದನ್ನು ಬಿಡಿಜೆ ಪೂರೈಸಿದ ರೆಂದು ಅವರು ನನಗೆ ಈಚೆಗೆ ಹೇಳಿದರು.

ಅಂತು ಜಮಖಂಡಿ ಸಂಸ್ಥಾನದ ಜತ್ತಿಯವರನ್ನು ನಾನು ಕಂಡದ್ದು ಹೀಗೆ ಮೂರುಸಲ.

ಮುಂದೆ ಜತ್ತಿ ಬರಿಯ ಜಮಖಂಡಿಯವರಾಗಿ ಉಳಿಯಲಿಲ್ಲ. ಮುಂಬಯಿ ಪ್ರಾಂತದ ಉಪಸಚಿವ ಸ್ಥಾನ ಪಡೆದರು. ಸಣ್ಣ ಸಂಖ್ಯೆಯಲ್ಲಾದರೂ ಕನ್ನಡಿ ಗರು ಮುಂಬಯಿ ರಾಜ್ಯದ ಜನಪ್ರಿಯ ಸರಕಾರದಲ್ಲಿ ಸಚಿವ, ಉಪಸಚಿವರಾ ದುದು ಕನ್ನಡಿಗರ ಹಿತಾಸಕ್ತಿಯ ದೃಷ್ಟಿಯಿಂದ ಉಪಯುಕ್ತವಾಗಿ ಪರಿಣಮಿ ಸಿತು. ಕರ್ಣಾಟಕ ವಿಶ್ವವಿದ್ಯಾಲಯ ರಚನೆಯನ್ನು ಕುರಿತ ಮಸೂದೆಯು ಮುಂಬಯಿ ಶಾಸನ ಸಭೆಯಲ್ಲಿ ಮುಂದೆ ಬರಲಿತ್ತು. ಮಸೂದೆಯಲ್ಲಿ ವ್ಯಾಸಂಗ ವಿಭಾಗಕ್ಕೂ ಕರ್ನಾಟಕಕ್ಕೆ ಹೆಚ್ಚು ಅನುಕೂಲವೆನಿಸುವ ಕೆಲವು ಕಲಮುಗಳನ್ನು ಸೇರಿಸುವ ದೃಷ್ಟಿಯಿಂದ ನಾನು ಜತ್ತಿಯವರನ್ನು ಕಂಡಿದ್ದೆ. ಅವರೂ ನನ್ನ ಇನ್ನೊಬ್ಬ ಸಹಪಾಠಿ ಲಿಂಗೈಕ್ಯ ಕಂಠಿ ಶಿವಲಿಂಗಪ್ಪನವರೂ ಈ ದಿಸೆಯಲ್ಲಿ ನಮಗೆ ನೆರವಾದರು.

## ಚೇತನದಾಯಕ

ಹೊಸ ಮೈಸೂರುರಾಜ್ಯ ರೂಪಗೊಂಡಾಗ ಬಿ. ಡಿ. ಜೆ ಕೆಲಕಾಲ ಅಜ್ಞಾತವಾಸದಲ್ಲಿ ಇರಬೇಕಾಯಿತು. ಮುಂದೆ ಅವರು ರಾಜ್ಯದ ಮುಖ್ಯಮಂತ್ರಿ ಯಾಗಿಯೇ ಬಂದುದು ನನಗೆ ಹೆಮ್ಮೆಯ ಸಂಗತಿಯೆನಿಸಿತು. ಒಮ್ಮೆ ಅವರು ಧಾರವಾಡಕ್ಕೆ ಆಗಮಿಸಿದ್ದರು. ಬಿಡುವಿಲ್ಲದ ಕಾರ್ಯಕ್ರಮ. ಪೋಲಿಸ್ ಬಂದೋ ಬಸ್ತು. ಜಿಲ್ಲೆಯ ಪೋಲಿಸ್ ಮುಖ್ಯಾಧಿಕಾರಿ ನನ್ನ ಸ್ನೇಹಿತರಾಗಿದ್ದರು. ಜತ್ತಿಯವರನ್ನು ಕಂಡು ಒಂದು ಹೊಸಬಗೆಯ ಕಾರ್ಯಕ್ರಮ ಸೂಚಿಸಿದೆ. ಅದೆಂದರೆ ಮಂತ್ರಿಗಳ ಪರಿವಾರವನ್ನುಳಿದು ನಮ್ಮ ವಾಸಸ್ಥಳದಲ್ಲಿ ಮೌನಧ್ಯಾನದಲ್ಲಿ ತೊಡ ಗುವುದು. ಬಿಡುವಿಲ್ಲದ ಔಪಚಾರಿಕ–ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿದ್ದ ಬಿಡಿಜೆಯವರು ಕೆಲಕಾಲ ನಮ್ಮೊಂದಿಗೆ ಶಾಂತವಾಗಿ ವೇಳೆಕಳೆದರು. ಅದು ಅವರಿಗೆ ಚೇತನದಾಯಕವಾಯಿತೆಂದು ಹೇಳಿದರು. ಪೋಲಿಸ್ ಅಧಿಕಾರಿಗಳಿಗೆ ವಿವರಿಸಿ ಏಕಾಂಗಿಯಾಗಿಯೇ ನಮ್ಮ ಪ್ರಾರ್ಥನಾ ಕಾರ್ಯಕ್ರಮದಲ್ಲಿ ಪಾಲು

ಕೊಂಡರು. ಉಳಿದ ಮುಖ್ಯಮಂತ್ರಿಗಳು ಹೀಗೆ ಮಾಡಬಲ್ಲರೇನೋ ನನಗೆ ಗೊತ್ತಿಲ್ಲ.

ಅವರು ಮುಖ್ಯಮಂತ್ರಿಗಳಾಗಿರುವಾಗ ಭಿನ್ನಮತೀಯರ ಗುಂಪಿನವರನ್ನು ಸಚಿವರನ್ನಾಗಿ ಸೇರಿಸಿಕೊಂಡು ಕಾರ್ಯಮಾಡುವ ಸನ್ನಿವೇಶವೊದಗಿತು. ಆ ಸಂದರ್ಭ ತೊಂದರೆದಾಯಕವಾಗಿರಬೇಕಲ್ಲವೇ ? ಎಂದು ನಾನು ಕೇಳಿದೆ. “ ಹಾಗೇನೂ ಇಲ್ಲ, ನನಗೆ ಯಾವುದೂ ತೊಂದರೆದಾಯಕವೆನಿಸುವುದಿಲ್ಲ. ಎಲ್ಲ ಸನ್ನಿವೇಶಗಳಲ್ಲಿಯೂ ಹೊಂದಿಕೊಂಡು ಹೋಗಬಲ್ಲೆ ” ಎಂದು ಅವರು ಹೇಳಿದರು. ಇದು ಅವರ ಗೆಲುವಿನ ಗುಟ್ಟು. ಎಂತಹ ಸಂದರ್ಭದಲ್ಲಿಯೂ ಮನಸ್ಸಿನ ಸ್ತಿಮಿತವನ್ನು ಕಾಯ್ದುಕೊಂಡು ವಾಸ್ತವವಾದಿಯಾಗಿ ಆಶಾವಾದಿಯಾಗಿ ಅವರು ಮುಂದುವರಿಯುತ್ತಾರೆ.

## ಕಿರಾಣಿ ವ್ಯಾಪಾರಿ

ಒಮ್ಮೆ ನಾನು ಮುಖ್ಯಮಂತ್ರಿ ನಿವಾಸದಲ್ಲಿ ಬೆಳಗಿನಿಂದ ಹಲವು ಗಂಟೆಗಳನ್ನು ಕಳೆಯಬೇಕಾಯಿತು. ಆ ಅವಧಿಯಲ್ಲಿ ಹಲವಾರು ಸಂದರ್ಶಕರು ಪರಸ್ಪರ ಭಿನ್ನ ನಿಲುಮೆಯುಳ್ಳವರು ಅವರಲ್ಲಿಗೆ ಬಂದು ಹೋದರು. ಹಾಗೆ ಬಂದವರು ವಿವಿಧಬಗೆಯ ಕೆಲಸಗಳನ್ನು ಪರಸ್ಪರ ವಿರೋಧವೆಂದು ತೋರುವ ಕೆಲಸಗಳ ಬಗೆಗೆ ಹೇಳಿಹೋದರು. ಬಿಡಿಜೆಯವರು ಎಲ್ಲರೊಂದಿಗೆ ಅವರವರಿಗೆ ಬೇಕಾಗುವಂತೆಯೇ ಮಾತನಾಡಿ ಅವರವರನ್ನು ಕಳಿಸಿಕೊಟ್ಟರು. ಇದು ನನಗೆ ವಿಚಿತ್ರವೆಂದು ತೋರಿದ್ದನ್ನು ಅವರು ಗಮನಿಸಿದರು. ನನ್ನದು ಒಂದೇ ಬಗೆಯ ಕಟ್ಟುನಿಟ್ಟಾದ ನಿಲುಮೆಯೆಂಬುದು ಅವರಿಗೆ ಗೊತ್ತಿದೆ. ಅವರು ನನಗೆ ಹೇಳಿದರು.

“ ಪ್ರೊಫೆಸರರೇ, ನಿಮ್ಮ ಹಾಗೆ ಇರಲು ನಮಗೆ ಸಾಧ್ಯವಿಲ್ಲ. ನಾವು ರಾಜಕೀಯ ಜನ. ಯಾರಿಗೆ ಏನು ಬೇಕೋ ಅದೆಲ್ಲವೂ ಅವರವರಿಗೆ ದೊರೆಯುವಂತಿರಬೇಕು. ನನಗೆ ಕಿರಾಣಿ ಅಂಗಡಿಯ ಅನುಭವವಿರುವುದು ನಿಮಗೆ ಗೊತ್ತಿದೆ. ನನ್ನದು ಈಗಲೂಕಿರಾಣಿಯ ಅಂಗಡಿಯಿದ್ದಂತೆ. ಬೇಡಿದವರಿಗೆ ಬೇಡುವ ವಸ್ತು ನನ್ನ ಅಂಗಡಿಯಲ್ಲಿ ಇಲ್ಲದಿರುವಾಗಲೂ ತರಿಸಿಕೊಡುವ ಭರವಸೆಯನ್ನು ಕೊಡಬೇಕು. ಕಟ್ಟುನಿಟ್ಟಾದ ನಿಲುಮೆಯ ಪ್ರೊಫೆಸರರು ತಮ್ಮಷ್ಟಕ್ಕೆ ತಾವು ಒಳ್ಳೆಯ ಕೆಲಸಮಾಡಬಹುದು. ನಾವು ಜನರನ್ನು ಕಟ್ಟಿಕೊಂಡು ಕೆಲಸ ಮಾಡಬೇಕಾಗುತ್ತದೆ. ”

ಇದ್ದುದನ್ನು ಇದ್ದಂತೆ ಗಿಲೀಟುಮಾಡದೆ ಪ್ರಾಂಜಲಮನದಿಂದ ಹೇಳುವುದು ಬಿಡಿಜೆಯವರ ಇನ್ನೊಂದು ಗುಣವಿಶೇಷ.

ನಿರಾಡಂಬರ ವ್ಯವಹಾರ, ವಿನಯಶೀಲತೆ, ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಸ್ವಭಾವ, ಮಾತಿನಲ್ಲಿ ಚಾಣಾಕ್ಷತನಗಳಂತೆ ಅವರ ಪ್ರಾಂಜಲತೆಯು ಅವರು ಈಗ ಪಡೆದ ಇನ್ನೂ ಪಡೆಯಲಿರುವ ಗೆಲವಿಗೆ ಕಾರಣ.

ಅವರು ಮಂತ್ರಿಯಾಗಿರುವಾಗಲೂ ಆತ್ಮೀಯರ ಸಭೆಗಳಲ್ಲಿ ಎತ್ತರದ ಇಲ್ಲವೆ ಕೇಂದ್ರ ಸ್ಥಳಗಳಲ್ಲಿ ಆಸನಗಳಲ್ಲಿ ಕೂಡುತ್ತಿರಲಿಲ್ಲ. ಕೆಲವು ಸಭೆಗಳಲ್ಲಿ ನನ್ನನ್ನು ಕೂಡಿಸಿದ್ದು ನನಗೆ ನೆನಪಿದೆ. ಅವರು ಎಲ್ಲರಿಗಿಂತ ಕೆಳಗೆ ಇಲ್ಲವೆ ಹಿಂದೆ ಕುಳಿತುಕೊಳ್ಳುತ್ತಿದ್ದರು.

## ಆಶಾವಾದಿತ್ವ

ಮುಖ್ಯಮಂತ್ರಿಯ ಅವಧಿ ಮುಗಿದ ನಂತರ ಅವರು ಒಂದೆರಡು ತಿಂಗಳು ಅಜ್ಞಾತವಾಸದಲ್ಲಿರಬೇಕಾಯಿತು. ಆಗಲೂ ನಾನು ಅವರನ್ನು ಹುಡುಕಿಕೊಂಡು ಹೋದೆ. ಆಗ ಕೂಡ ಅವರು ಆಶಾವಾದಿತ್ವವನ್ನೇ ವ್ಯಕ್ತಪಡಿಸಿದರು. ಆಶಾವಾದಿತ್ವ ಅವರ ಇನ್ನೊಂದು ವೈಶಿಷ್ಟ್ಯ. ಮುಂದೆ ಅವರು ಸಚಿವರಾಗಿ ತಮ್ಮ ಸ್ವಂತ ಮನೆಯಲ್ಲಿ ವಾಸಿಸತೊಡಗಿದರು ಆಗ ಅವರಲ್ಲಿಗೆ ನಾನು ಹೋದಾಗ ಸ್ವತಃ ತಾವೇ ಚಹದ ( ಅಲ್ಲ ಹಾಲು ) ಕಪ್ಪನ್ನು ತಂದು ನನ್ನ ಕೈಗೆಕೊಟ್ಟರು ಮನೆಗೆಲಸಗಳನ್ನೆಲ್ಲ ಅವರ ಶ್ರೀಮತಿಯವರು ಪೂರೈಸುತ್ತಿದ್ದರು.

ಒಮ್ಮೆ ಬೆಂಗಳೂರಿನಿಂದ ಅವರೊಂದಿಗೆ ಕಾರಿನಲ್ಲಿ ಧಾರವಾಡದ ಪಯಣ ಕೈಕೊಂಡಿದ್ದೆ. ದಾರಿಯ ಬುತ್ತಿಯನ್ನು ಮನೆಯಿಂದ ಕಟ್ಟಿಸಿಕೊಂಡೇ ಅವರು ಹೊರಟಿದ್ದರು. ಚಿತ್ರದುರ್ಗದಲ್ಲಿ ರಾತ್ರಿಯ ವಸತಿ. ಮಂತ್ರಿಗಳಿಗಾಗಿ ಊಟದ ವ್ಯವಸ್ಥೆ ಅವಶ್ಯಕವಿಲ್ಲವೆಂದು ಅಲ್ಲಿಯ ಅಧಿಕಾರಿಗಳಿಗೆ ಹೇಳಲಾಯಿತು.

ಆಹಾರ ಇಲಾಖೆಯಲ್ಲಿ ಜಟಿಲವಾದ ಸಮಸ್ಯೆಗಳು ತಲೆದೋರಿದಾಗ ಅವರು ಆಹಾರ ಮಂತ್ರಿಯಾಗಿದ್ದರು. ಆದರೆ ಅಲ್ಲಿಯ ಜಟಿಲತೆಗಳನ್ನು ತೊಡೆದುಹಾಕಿ ಅದನ್ನು ಸರಾಗಗೊಳಿಸಿದರು. ಆಹಾರ ಇಲಾಖೆಯು ತಮಗೆ ತೊಂದರೆದಾಯಕವಾಗಿಲ್ಲವೆಂದು ಅವರು ನನಗೆ ಹೇಳಿದರು.

ಬಿ. ಎ. ಪರೀಕ್ಷೆಗೆ ಅವರ ಐಚ್ಛಿಕವಿಷಯ ಕನ್ನಡ. ಕನ್ನಡ ಸಾಹಿತ್ಯವನ್ನು ಐಚ್ಛಿಕ ವಿಷಯವೆಂದು ಆರಿಸಿಕೊಂಡವರಿಗೆ ಇತರ ವಿಷಯಗಳ ಪರಿ

ಚಯ ಅಷ್ಟೊಂದು ಇರುವುದಿಲ್ಲವೆಂಬುದು ಸಾಮಾನ್ಯ ಭಾವನೆ. ಬಿಡಿಜೆಯವರು ಅರ್ಥಶಾಖೆಯ ಮಂತ್ರಿಯಾಗಿ ಅಲ್ಲಿಯೂ ಹೆಸರು ಪಡೆದರು. ಅವರೊಮ್ಮೆ ಕರ್ನಾಟಕ ಕಾಲೇಜಿನಲ್ಲಿ ರಾಜ್ಯದ ಆರ್ಥಿಕ ಸಮಸ್ಯೆಗಳನ್ನು ಕುರಿತು ಆಶು ಭಾಷಣ ಮಾಡಿದರು. ಅವರು ಆಗ ತೋರಿದ ಅರ್ಥಶಾಸ್ತ್ರದ ಜ್ಞಾನ, ಸಮಸ್ಯೆಗಳನ್ನು ತಲಸ್ಪರ್ಶಿಯಾಗಿ ವಿಶ್ಲೇಷಿಸುವ ಸಾಮರ್ಥ್ಯ, ಆಂಗ್ಲಭಾಷೆಯಲ್ಲಿಯ ಸರಳ ನಿರೂಪಣೆಗಳು, ಪ್ರಾಧ್ಯಾಪಕರನ್ನು ಬೆರಗುಗೊಳಿಸಿದವು. ಇವರು ಕನ್ನಡವನ್ನು ಐಚ್ಛಿಕ ವಿಷಯವೆಂದು ತೆಗೆದುಕೊಂಡವರೆಂದು ನಾನು ಸಭೆಯಲ್ಲಿ ಗೆಲುವಿನ ಮನೋಭಾವದಿಂದ ಹೇಳಿದೆ.

## ಅಕಾಲ ಮಾವು

ಶ್ರೀ ಬಿ ಡಿ ಜೆ ಪಾಂಡಿಚೇರಿಯ ಉಪ ರಾಜ್ಯಪಾಲರಾದಾಗ ಮತ್ತೆ ನನಗೆ ಅವರೊಂದಿಗೆ ಸಂಪರ್ಕ ಪಡೆಯುವ ಅವಕಾಶ ದೊರೆಯಿತು. ಭವ್ಯವಾದ ಅಲ್ಲಿಯ ರಾಜಭವನದಲ್ಲಿ ಶ್ರೀ ಬಿ ಡಿ ಜೆ ತೀರ ಸಾದಾ ರೀತಿಯ ಜೀವನ ನಡೆಸಿದರು. ರಾಜಭವನದಲ್ಲಿ ಮೂವತ್ತರಷ್ಟು ಸೇವಕರಿರುವ ವ್ಯವಸ್ಥೆ ನನಗೆ ಗೊತ್ತಿದೆ. ನಮ್ಮ ಆತಿಥ್ಯಕ್ಕಾಗಿ ಬಿ ಡಿ ಜೆ ದಂಪತಿಗಳು ಮುಂದಾಗಿರುತ್ತಿದ್ದರು. ' ಅಕಾಲ ಮಾವು ' ಎಂಬ ಮಾತೊಂದು ಪ್ರಸಿದ್ಧವಿದೆ. ನಾವು ಪಾಂಡಿಚೇರಿಯ ರಾಜ ಭವನಕ್ಕೆ ಯಾವ ಕಾಲದಲ್ಲಿ ಹೋದರೂ ಹೋಳಿಗೆ ಮಾವಿನ ಹಣ್ಣಿನ ಸೀಕರಣೆಯ ಸಮಾರಾಧನೆ ನಡೆಯುತ್ತಿತ್ತು. ಪಾಂಡಿಚೇರಿಯ ವಾಸ್ತವ್ಯದಲ್ಲಿ ಬಿ ಡಿ ಜೆ ಆಧ್ಯಾತ್ಮದತ್ತ ಹೆಚ್ಚಾಗಿ ಒಲಿದರು. ಅಲ್ಲಿ ' ಕರ್ನಾಟಕ ನಿಲಯಂ ' ಆರಂಭಿಸಿದರು. ಈ ಮೊದಲೇ ಬಸವ ಸಮಿತಿಯ ಕಾರ್ಯ ಕಲಾಪಗಳ ಸಂದರ್ಭದಲ್ಲಿ ವೀರಶೈವ ಧರ್ಮವನ್ನೇ ಕುರಿತು ಅವರು ಹೆಚ್ಚಾಗಿ ಜ್ಞಾನ ಪಡೆದಿದ್ದರು. ಈಗ ಶ್ರೀ ಅರವಿಂದರ ದರ್ಶನವನ್ನು ವ್ಯಾಸಂಗ ಮಾಡಿದರು. ಆಶ್ರಮದ ಸಾಧಕರಿಗೆ ಅಚ್ಚುಮೆಚ್ಚಿನವರಾದರು. ಶ್ರೀ ಮಾತೆಯವರಿಗೆ ಹತ್ತಿರದವರಾಗಿ ಪರಿಣಮಿಸಿದರು. ಪಾಂಡಿಚೇರಿಯ ಉಪ ರಾಜ್ಯಪಾಲರಾದವರಲ್ಲಿ ಆಶ್ರಮಕ್ಕೆ ಇಷ್ಟೊಂದು ಹಾಸು ಹೊಕ್ಕಾದವರು ಇವರೊಬ್ಬರೇ ಎಂದು ತೋರುತ್ತದೆ.

ಬಸವ ಸಮಿತಿಯ ಸ್ಥಾಪನೆಗೆ ಪೂರ್ವಭಾವಿಯಾಗಿ ಇವರು ಧಾರವಾಡದಲ್ಲಿ ಒಂದು ಸಭೆ ಸೇರಿಸಿದ್ದರು. ಸಾರ್ವಜನಿಕ ಸಭೆಗೆ ಹೋಗುವ ಮೊದಲು ಅವರು ನನ್ನನ್ನು ನವಕಲ್ಯಾಣ ಮಠದ ಪೂಜ್ಯ ಕುಮಾರ

ಸ್ವಾಮಿಗಳನ್ನು ಸೇರಿಸಿ ವಿಚಾರ ವಿನಿಮಯ ಮಾಡಿದರು, ನನ್ನ ಕೆಲವು ಸಲಹೆಗಳನ್ನು ಒಪ್ಪಿಕೊಂಡರು. ಈ ಬಗೆಯ ವಿಶ್ವಾಸವನ್ನು ಅವರು ನನ್ನ ಒಗೆಗೆ ತೋರಿಸಿದರು.

ಬಸವ ಸಮಿತಿಯ ಸಂಘಟನೆಯ ವ್ಯಾಪಕವಾದ ಕಾರ್ಯವು ಈಗ ಜನತೆಗೆ ತಿಳಿದ ಮಾತಾಗಿದೆ. ಬೆಂಗಳೂರಿನಲ್ಲಿಯ ಭವ್ಯ ಕಟ್ಟಡವು ಅವರ ಸಂಘಟನಾ ಶಕ್ತಿಯ ಸಂಕೇತವಾಗಿದೆ. ಭವ್ಯ ಕಟ್ಟಡ ಒಳ್ಳೆಯದೇ ಅಹುದು. ಅದರೊಂದಿಗೆ ಬಸವ ತತ್ವಗಳಿಗನುಗುಣವಾಗುವ ಪರಿಸರವನ್ನು ನಿರ್ಮಿಸುವ ಕಾರ್ಯವೂ ನಡೆಯಬೇಕಾಗಿದೆ.

## ತುಳಸಿ ಮಂದಿರ

ನಾನೊಮ್ಮೆ ಬನಾರಸಕ್ಕೆ ಹೋದಾಗ ಅಲ್ಲಿಯ ತುಳಸಿ ಮಂದಿರ ನೋಡಿದೆ. ಹಾಲುಗಲ್ಲಿನ ಆ ಸುಂದರ ಕಟ್ಟಡದ ಭಿತ್ತಿಗಳಲ್ಲಿ ತುಳಸಿ ರಾಮಾಯಣದ ಎಲ್ಲ ಪದ್ಯಗಳನ್ನು ರೂಪಿಸಿದ್ದಾರೆ. ಪ್ರವೇಶದ್ವಾರದ ಬಳಿ ತುಳಸಿದಾಸನ ಮೂರ್ತಿ. ಎದುರಿಗೆತುಳಸಿ ರಾಮಾಯಣ ಗ್ರಂಥ. ವಿದ್ಯುತ್ ಚಾಲಿತ ಸಾಧನಗಳಿಂದ ಗ್ರಂಥದ ಪುಟ ತಿರುಗಿಸುವ ಮೂರ್ತಿಯ ತುಟಿ ಅಲುಗಾಡಿಸುವ ವ್ಯವಸ್ಥೆ; ಟೇಪ್ ರೆಕಾರ್ಡರ್‌ದಿಂದ ತುಳಸಿ ರಾಮಾಯಣದ ಪಠಣ ನಡೆಯುತ್ತಿದೆ. ಮಂದಿರದ ಸಂದರ್ಶನದ ಅವಧಿಯಲ್ಲೆಲ್ಲ ಈ ವ್ಯವಸ್ಥೆಯಿದೆ. ತುಳಸಿದಾಸನ ಮೂರ್ತಿ, ತುಳಸಿ ರಾಮಾಯಣದ ಪಠಣ ಇವುಗಳಿಂದಾಗಿ ಭಕ್ತಿಭಾವ ಸೂಚಕ ವಾತಾವರಣ ಅಲ್ಲಿ ನೆಲಸಿದೆ. ಅದು ನನ್ನ ಮೇಲೆ ಮಹತ್ವದ ಪರಿಣಾಮ ಬೀರಿತು. ನಾನು ಕೂಡಲೆ ಬಿ ಡಿ ಜೆ ಅವರಿಗೆ ಕಾಗದ ಬರೆದು ಬಸವ ಭವನದಲ್ಲಿ ಈ ಬಗೆಯ ವ್ಯವಸ್ಥೆ ಮಾಡಬೇಕೆಂದು ತಿಳಿಸಿದೆ. ನಮ್ಮಲ್ಲಿ ಅಂತಹ ಪರಿಸರವಿಲ್ಲ, ಕಾರ್ಯಕರ್ತರಿಲ್ಲವೆಂಬ ಮಾತು ನಿಜವಾದರೂ ಪರಿಸರವನ್ನು, ಕಾರ್ಯಕರ್ತರನ್ನು ನಿರ್ಮಿಸುವ ಕಾರ್ಯವೂ ಹೆಚ್ಚು ಅವಶ್ಯಕವೆಂಬುದು ನನ್ನ ನಿಲುವು.

ಪಾಂಡಿಚೇರಿಯ ಉಪರಾಜ್ಯಪಾಲ ಹುದ್ದೆಯಿಂದ ಓರಿಸಾದ ಹಿರಿಯ ರಾಜ್ಯಪಾಲ. ಅಲ್ಲಿಂದ ದಿಲ್ಲಿಯ ಉಪರಾಷ್ಟ್ರಪತಿ ಭವನ. ಹೀಗೆ ಬಿ ಡಿ ಜೆ ಎತ್ತರೆತ್ತರವಾಗಿ ಮುಂದೆ ಸಾಗಿದ್ದಾರೆ. ರಾಷ್ಟ್ರಪತಿ ಭವನಕ್ಕೂ ಅವರು ಸಾಗುವರೆಂಬ ಭರವಸೆ ನನಗಿದೆ. ಅದು ಕನ್ನಡಿಗರಿಗೆ ಅತ್ಯಂತ ಸಂತೋಷದಾಯಕ ಸಂಗತಿಯಾಗುವುದು. ನನಗೆ ವಿಶೇಷ ಹೆಮ್ಮೆಯ ಮಾತಾಗುವುದು.

ಜಮಖಂಡಿ, ಮುಂಬಯಿ, ಬೆಂಗಳೂರು, ಪಾಂಡಿಚೇರಿ, ಭುವನೇಶ್ವರ, ದಿಲ್ಲಿ — ಇವು ಬಿ ಡಿ ಜೆ ಕ್ರಮಶಃ ಏರಿದ ಎತ್ತರ ಸಂಕೇತ ತಾಣಗಳಾಗಿವೆ. ಇವುಗಳಲ್ಲಿ ಕೊನೆಯ ಎರಡು ತಾಣಗಳಲ್ಲಿ ಅವರನ್ನು ಕಂಡು ಮಾತನಾಡುವ ಅವಕಾಶ ನನಗೆ ಒದಗಿಲ್ಲ. ಆದರೆ ನಮ್ಮಿಬ್ಬರಲ್ಲಿ ಮೌನ ಸಂಭಾಷಣೆ ನಡೆದಿದೆಯೆಂದು ನನಗೆ ತೋರುತ್ತಿದೆ. ನನ್ನ ಮಾತಿನಲ್ಲಿ, ಬೆಂಗಳೂರು ಬಸವ ಭವನದಲ್ಲಿ, ಪಾಂಡಿಚೇರಿಯ 'ಕರ್ನಾಟಕ ನಿಲಯಂ' ದಲ್ಲಿ ತಕ್ಕ ಪರಿಸರ, ಕಾರ್ಯಕರ್ತರು ರೂಪುಗೊಳ್ಳಬೇಕು. ದಿಲ್ಲಿಯಲ್ಲಿ ಕರ್ನಾಟಕದ ಉಜ್ವಲ ಸಂಸ್ಕೃತಿಗೆ ಅನುಗುಣವಾಗುವಂತಹ ಮಂದಿರದ ರಚನೆಯಾಗಿ ಅಲ್ಲಿಯೂ ಸಮರ್ಪಕ ಪರಿಸರವು ನಿರ್ಮಾಣಗೊಳ್ಳಬೇಕು — ಈ ಅಂಶಗಳು ಮುಖ್ಯವಾದಂತಿವೆ. ಈ ಅಂಶಗಳನ್ನು ಬಿ ಡಿ ಜೆ ಯವರು ಸಾಧ್ಯಗೊಳಿಸುವರೆಂಬ ಆಶೆಯನ್ನು ನಾನಿಟ್ಟುಕೊಂಡಿದ್ದೇನೆ.



## ನಿಜವಾದ ಪೂಜೆ

ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು
ಮನ ಕರಗದವರಲ್ಲಿ ಪುಷ್ಪವನೊಲ್ಲೆನಯಯ್ಯ ನೀನು
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು
ಅರಿವು ಕಣ್ದೆರೆಯುದವರಲ್ಲಿ ಆರತಿಯನೊಲ್ಲೆಯಯ್ಯ ನೀನು
ಭಾವ ಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು
ಪರಿಣಾಮವಿಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ
ಹೇಳಾ ಚೆನ್ನಮಲ್ಲಿಕಾರ್ಜುನಯ್ಯ

— ಮಹಾದೇವಿಯಕ್ಕನವರು

# ನಡು ಬಾನ ರವಿ

ಇವರು ಯಾರು ? ಏನು ? ಎಂತು ? ಎಂದು
ಭಾರತಾದ್ಯಂತ ಪ್ರಶ್ನೆ ಕೇಳುವವರೇ ಇಲ್ಲ
ಮಕ್ಕಳು, ಯುವಕರು, ಮುದಕರು — ದೇಶದೆಲ್ಲರಿಗೆ
ಚಹದಷ್ಟು ಇವರು ದಟ್ಟ ಪರಿಚಿತರು.

' ಭೃಂಗದ ಬೆನ್ನೇರಿ ಕಲ್ಪನೆ ' ಬಂದಂತೆ
' ಅಧಿಕಾರ ' ವೆಂಬುದು ಇವರ ಬೆನ್ನೇರಿ ಬಂತು
ಇವರೊಡನೆ ಅವಳಿ ಹುಟ್ಟಿದ ಅಧಿಕಾರಕ್ಕೀಗ
ಇವರೊಡನೆಯೇ ಉಪರಾಷ್ಟ್ರಪತಿ ಸ್ಥಾನ.

ರಾಜಕೀಯ ರಾಕೆಟ್ಟಿನಲಿ ಕುಳಿತು ಮೇಲೇರಿ,
ಅಧಿಕಾರದಂತಿಮ ಲೋಕ ಸಂಶೋಧಿಸಿದ,
ಕರ್ನಾಟಕದ ಆರ್ಮಸ್ಟ್ರಾಂಗ್,
ಪಂಚಾಯತಿ ಅಧ್ಯಕ್ಷಗಿರಿಯಿಂದ
ರಾಷ್ಟ್ರಾಧ್ಯಕ್ಷ ಹಿಮಗಿರಿಗೇರಿದ ತೇನಸಿಂಗ್.

ಹೊರಗೆ ಇವರು ಅಧಿಕಾರಾಸಕ್ತರಂತೆ ಕಂಡರೂ
ಒಳಗೆ ಮಾತ್ರ ಪರಮ ವಿರಕ್ತರು :
ಅಪ್ರತಿಮ ಶರಣ ತತ್ವಾನುರಕ್ತರು
ಬಸವ – ಅರವಿಂದರನು ಅರಗಿಸಿಕೊಂಡ ಶಕ್ತರು.

ಅಧಿಕಾರದ ಬಾಂದಳಕ್ಕೇರಿದರೂ,
ನಡು ಬಾನಲ್ಲಿಯ ರವಿಯಂತೆ ಸಣ್ಣವರಾಗಿ ತೋರುವವರು
ಆಗಬೇಕಾದಷ್ಟು ಇನ್ನೂ ಸಣ್ಣವನಾಗಲಿಲ್ಲವಲ್ಲ
— ಎಂಬ ಚಿಂತೆ ಹಚ್ಚಿಕೊಂಡು ಸಣ್ಣಗಾದವರು.

‘ ಎಡೆಯುದನಿಯನು ಧರ್ಮನಿಧಿ ’ ಯಾಗಿಸಿ ಕೊಂಡು
ದೇಶ ಸೇವೆಯ ನಿತ್ಯ ವಿಧಿಯಾಗಿಸಿ ಕೊಂಡವರು
ಹೊರಗಿನ, ಪರಿಶುಭ್ರ – ಸರಳ ಉಡುಗೆಯಂತೆ
ಒಳಗಿನ ಹೃದಯ ಮತ್ತು ಮನಸ್ಸು.
ಹಣೆಯ ಮೇಲೆ ಢಾಳವಾಗಿ ಬರಕೊಂಡ ವಿಭೂತಿಯಂತೆ
ಸತ್ಯ ಶುದ್ಧ ಕಾಯಕದಿಂದ ಕೈಲಾಸಕಾಂಬ ಹುಮ್ಮಸ್ಸು.
ಅನವರತವೂ ದೇಶದ ಲೇಸಿಗಾಗಿಯೇ ಇವರ —
ಸಕಲ — ಧಾರ್ಮಿಕ, ರಾಜಕೀಯ, ತಪಸ್ಸು
ಇವರದೇ – ತಾವೂ ಬದುಕಿ, ದೇಶ ಬದುಕಿಸಿದ ಶ್ರೇಯಸ್ಸು.

● ಗುರುಬಸವಯ್ಯ ಹಿರೇಮಠ

---

● [ ಶ್ರೀ ಗುರು ಬಸವಯ್ಯ ಹಿರೇಮಠ ಅವರು ಉದಯೋನ್ಮುಖ ಕವಿಗಳು. ಇವರ ನವ್ಯತೆಯಾರೂ ಶರಣಸಾಹಿತ್ಯದಿಂದ ಪ್ರೇರಿತವಾದದ್ದೇ. ಬರೆಯುವ ಹಂಬಲಕ್ಕಿಂತ ಅವರಲ್ಲಿ ಹೇಳುವ ಹಂಬಲ ಜಾಸ್ತಿ. ಎಲ್ಲಿಯೇ ಶರಣ ತತ್ವ ಪ್ರಚಾರದ ಕಾರ್ಯಕ್ರಮ ಗಳು ಜರುಗಲಿ, ಶ್ರೀ ಗುರುಬಸವಯ್ಯನವರು ಹಾಜರಿದ್ದು ನಿಜ ವಾದ ಶರಣತನವನ್ನು ಬಿಂಬಿಸಲು ಪ್ರಯತ್ನಿಸುತ್ತಾರೆ. ಶ್ರೀ ಜತ್ತಿ ಅವರ ಬಗ್ಗೆ ಈ ಕವಿಗಳಿಗೆ ಎಲ್ಲಿಲ್ಲದ ಅಭಿಮಾನ. ಏಕೆಂದರೆ ಶ್ರೀ ಜತ್ತಿಯವರು ‘ ಎನಗಿಂತ ಕಿರಿಯರಿಲ್ಲ ’ ಎಂದು ಹಿರಿಯರಾದವರು. — ಸಂ. ]



# ಶ್ರೀ ಜತ್ತಿಯವರ ಅಭ್ಯುದಯದ ಕಥೆ

● ಡಾ. ಪಿ. ಡಿ. ಹುಲ್ಯಾಳಕರ

● [ ಡಾ. ಪಿ. ಡಿ. ಹುಲ್ಯಾಳಕರ ಅವರು ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರ ಹಿರಿಯ ಸಮಕಾಲೀನರು. ಶ್ರೀ ಜತ್ತಿ ಅವರು ಪ್ರಜಾಪರಿಷತ್ತಿನ ಬೆಂಬಲದಿಂದ ಒಂದೊಂದೇ ಮೆಟ್ಟಲು ಹೇಗೆ ಅಭ್ಯುದಯ ಸಾಧಿಸಿದರು ಎಂಬುದನ್ನು ವಿವರಿಸಿದ್ದಾರೆ. ಹಿರಿಯರು ಕೊಟ್ಟ ಯಾವುದೇ ಜವಾಬ್ದಾರಿ ಕೆಲಸವನ್ನು, ಸಣ್ಣದೆನ್ನದೆ ತೃಪ್ತಿಕರವಾಗಿ ನಿರ್ವಹಿಸಿದುದ ರಿಂದಲೇ ಶ್ರೀ ಜತ್ತಿ ಅವರು ಮುಂಬೈ, ಮುಂಬೈಯಿಂದ ಬೆಂಗಳೂರು, ಪಾಂಡಿಚೇರಿ, ಒರಿಸ್ಸಾ ನವದೆಹಲಿ – ಹೀಗೆ ಸೀಮೋಲ್ಲಂಘನ ಮಾಡಲು ಸಾಧ್ಯವಾಯಿತೆಂಬುದು ಶ್ರೀ ಹುಲ್ಯಾಳಕರರ ಲೇಖನದಿಂದ ವೇದ್ಯವಾಗುತ್ತದೆ. — ಸಂ. ]

ಭಾರತದ ಉಪ ರಾಷ್ಟ್ರಪತಿ ಶ್ರೀಮಾನ್ ಬಿ. ಡಿ. ಜತ್ತಿಯವರು ಮೊದಲು ಒಬ್ಬ ಸಾಮಾನ್ಯ ಪದವೀಧರರು. ಅವರ ಬಾಲ್ಯ ನನಗೆ ಅಷ್ಟೊಂದು ಪರಿಚಯ ವಿಲ್ಲದಿದ್ದರೂ ಅವರು ಪದವೀಧರರಾಗಿ ಜಮಖಂಡಿ ಸಂಸ್ಥಾನದ ಸಾವಳಗಿ ಭಾಗ ದಲ್ಲಿ ಸುಮಾರು ೧೯೩೪ರಲ್ಲಿ ' ಪ್ರಜಾ ಪರಿಷತ್ತಿನ ' ಅಧಿವೇಶನ ಕಾಲದಲ್ಲಿ, ಅವರ ಪರಿಚಯವಾಯಿತು. ಆಗ್ಗೆ ಇಂಥ ಉತ್ಸಾಹಿ ಹಾಗೂ ಸುಶಿಕ್ಷಿತ ಕಾರ್ಯಕರ್ತ ನನ್ನು ಕಂಡು ನನಗೂ ಹಾಗೂ ದಿವಂಗತ ಅನಂತರಾವಜಿ ತಾಬಡೆ (ಆಗಿನ ಪ್ರಜಾ ಪರಿಷತ್ತಿನ ಹಿರಿಯರು) ಅವರಿಗೂ ಬಹಳ ಸಂತೋಷವಾಯಿತು. " ನೀವು ಕಾಯಿದೆ ಪದವೀಧರರಾಗಿ ಬನ್ನಿ. ನಿಮಗೆ ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ಉಜ್ವಲ ಭವಿತವ್ಯವಿದೆ " — ಎಂದು ನಾವು ಅವರಿಗೆ ಹೇಳಿದೆವು. ಸಾವಳಗಿ ಗ್ರಾಮದಲ್ಲಿ ತಾವು ಮಾಡುತ್ತಿರುವ ಸಣ್ಣ — ಪುಟ್ಟ ವ್ಯಾಪಾರಗಳನ್ನು ಬಿಟ್ಟು ಶ್ರೀಮಾನ್ ಜತ್ತಿಯವರು ತದನಂತರ ಕೊಲ್ಹಾಪೂರದಲ್ಲಿ ಕಾಯಿದೆ ಪರೀಕ್ಷೆ ಅಭ್ಯಾಸ ಮಾಡಲು ಹೋದರು.

೧೯೩೮ರ ಮಧ್ಯದಲ್ಲಿ ಅವರು ಕಾಯಿದೆ ಪದವೀಧರರಾಗಿ ಮರಳಿ ಬಂದು ಜಮಖಂಡಿಯಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು. ಪ್ರಜಾ ಪರಿಷತ್ತಿನ ಸಕ್ರೀಯ ಸದಸ್ಯರಾಗಿಯೂ ಕಾರ್ಯ ಪ್ರವೃತ್ತರಾಗಿದ್ದರು. ಅವರ ಹಾಗೂ ಸುಸ್ವಭಾವ ಹಿರಿಯರ ಆದೇಶವನ್ನು ಮನ್ನಿಸಿ ಆದರಂತೆ ವರ್ತಿಸುವ ಗುಣ ನಾವು ಅಂದೇ ಕಂಡು ಹಿಡಿದೆವು. ಶ್ರೀ ಮರ್ಾ ಜತ್ತಿಯವರಿಗೆ ಪ್ರಜಾ ಪರಿಷತ್ತಿನಲ್ಲಿ ಏನಾದರೂ ಜವಾಬ್ದಾರಿ ಸ್ಥಾನ ಮಾನ ಕೊಡುವ ದೃಷ್ಟಿಯಿಂದ ಅವರಿಗೆ ನಾವು ಅದರ ಸಹ ಕಾರ್ಯ ದರ್ಶಿಯನ್ನಾಗಿ ನೇಮಿಸಿದೆವು. ಆಗ್ಗೆ ಪ್ರಜಾ ಪರಿಷತ್ತಿನ ಹಿರಿಯರಾಗಿ ದಿ. ಅನಂತರಾವ ತಾಬಡೆ ಅವರು ಇದ್ದರು. ಪರಿಷತ್ತಿನ ಅಧ್ಯಕ್ಷರಾಗಿ ದಿ. ಅಂದಾನೆಪ್ಪ ದೊಡ್ಡ ಮೇಟಿ, ಮಾಜಿ ಮಂತ್ರಿ, ಮೈಸೂರು ರಾಜ್ಯ, ಅವರು ಇದ್ದರು. ಆಗ್ಗೆ ಜಮಖಂಡಿ ಸಂಸ್ಥಾನದಲ್ಲಿ ಕ್ರಮಶಃ ದ್ವಿಪ್ರಭುತ್ವ ರಾಜ್ಯ ಪದ್ಧತಿ ಬಳಕೆಯಲ್ಲಿ ಬಂದಿದ್ದಿತ್ತು. ಜಮಖಂಡಿ ಸಂಸ್ಥಾನಿಕರೇ ಶ್ರೀಮರ್ಾ ಪಿ. ಎಂ. ಬಾಂಗಿ ವಕೀಲರಿಗೆ ಪ್ರಜಾ ಪ್ರತಿನಿಧಿ ಮಂತ್ರಿಯನ್ನಾಗಿ ನಿಯುಕ್ತ ಮಾಡಿದ್ದರು. ಆದರೆ ಪ್ರಜಾ ಪರಿಷತ್ತಿಗೆ ಹಾಗೂ ಬಾಂಗಿಯವರಿಗೆ ಸರಿಯಾದ ಸಂಬಂಧಗಳು ಉಳಿದಿರಲಿಲ್ಲ ಹಾಗೂ ಪರಿಷತ್ತಿನವರು ಹೆಚ್ಚಿನ ಅಧಿಕಾರ ಪಡೆದಿರುವ ಪ್ರಜಾ ಪರಿಷತ್ತು ನೇಮಿಸಿರುವ " ಮಂತ್ರಿ ಮಂಡಳ " ವನ್ನು — ಬೇಡುತ್ತಿತ್ತು.

## ರಾಜಕೀಯ ಬಿಕ್ಕಟ್ಟು

ಶ್ರೀ ಜತ್ತಿಯವರು ಪ್ರಪ್ರಥಮವಾಗಿ ಪರಿಷತ್ತಿನ ಬೆಂಬಲದಿಂದ ೧೯೪೪ರಲ್ಲಿ ಜಮಖಂಡಿ ನಗರ ಪಾಲಕರ ಸಭಾಸದರಾಗಿ ಆರಿಸಿ ಬಂದರು. ತದನಂತರ ಮ್ಯಾನೇಜಿಂಗ್ ಕಮಿಟಿ ಚೇರಮನ್ ಹುದ್ದೆ ಸ್ವೀಕರಿಸಿದರು. ನಗರ ಸಭೆಯಲ್ಲಿಯ ಅವರ ಕಾರ್ಯ ಜನಪ್ರಿಯವಾಯಿತು. ಇದೇ ಸಮಯದಲ್ಲಿ ಜಮಖಂಡಿ ಸಂಸ್ಥಾನಿಕರು ಸಂಸ್ಥಾನದ ಕಾಯಿದೆ ಮಂಡಳದ ಹೊಸ ಚುನಾವಣೆ ಸಾರಿದರು. ಪ್ರಜಾ ಪರಿಷತ್ತಿನ ಪರವಾಗಿ ಎಲ್ಲ ಸ್ಥಳಗಳಿಗಾಗಿ ಚುನಾವಣೆ ನಡೆದು ಕಾಯಿದೆ ಮಂಡಳದಲ್ಲಿಯೂ ಪ್ರಜಾ ಪರಿಷತ್ತಿಗೆ ಬಹುಮತ ಬಂದಿತು. ಸಭಾಪತಿಗಳು ಸರಕಾರ ನಿಯುಕ್ತವಾಗಿದ್ದರೂ ಕಾಯಿದೆ ಮಂಡಳದಲ್ಲಿ ಬಹುಮತ ಪ್ರಜಾ ಪರಿಷತ್ತಿನದಿರುವದರಿಂದ ಪರಿಷತ್ತಿನ ಪಾತ್ರ ಪ್ರಭಾವಿಯಾಗಿ, ರಾಜಕೀಯ ಬಿಕ್ಕಟ್ಟು ಸಂಸ್ಥಾನದಲ್ಲಿ ನಿರ್ಮಾಣವಾಯಿತು. ಗೃಹ ಖಾತೆ, ರೆವೆನ್ಯು ಮುಂತಾದ ಪ್ರಮುಖ ಖಾತೆಗಳು ಪ್ರಜಾ ಪ್ರತಿನಿಧಿಗಳ ಕೈಯಲ್ಲಿ ಬರಬೇಕೆಂಬ ಪರಿಷತ್ತಿನ ಆಗ್ರಹ ಯಶಸ್ವಿ ಆಯಿತು.

ಸಂಸ್ಥಾನಿಕರು ದಿ. ತಾಬಡೆಯವರಿಗೆ ಪತ್ರ ಬರೆದು ಮೂರು ಜನ ಮಂತ್ರಿ ಮಂಡಳವುಳ್ಳ ಒಂದು ಜವಾಬ್ದಾರಿ ಮಂತ್ರಿ ಮಂಡಳದ ಯಾದಿಯನ್ನು ಕೊಡಬೇಕೆಂದು ಕೇಳಿದರು. ಆಗ್ಗೆ ಜಮುಖಂಡಿಯಲ್ಲಿ ದಿ. ಗಾಡಗೀಳ ವಕೀಲರ ಮನೆಯಲ್ಲಿ ದಿ. ಶ್ರೀ ಅಂದಾನಪ್ಪ ದೊಡ್ಡಮೇಟಿ ಅವರ ಅಧ್ಯಕ್ಷತೆಯಲ್ಲಿ ಪ್ರಜಾ ಪರಿಷತ್ತಿನ ಕಾರ್ಯಕಾರಿ ಮಂಡಳ ಸಭೆ ಜರುಗಿತು. ಈ ಸಭೆಯಲ್ಲಿ ಶ್ರೀಮಾನ್ ಜತ್ತಿಯವರು ಗೃಹ ಹಾಗೂ ಲೋಕೋಪಯೋಗಿ ಖಾತೆ, ಶ್ರೀಮಾನ್ ಹೊರ್ತಿ ಕುಂದಗೋಳ — ರೆವೆನ್ಯು ಹಾಗೂ ಕೃಷಿ, ಶ್ರೀಮಾನ್ ಕಾಂಬಳೆ, ಹರಿಜನ ಪ್ರತಿನಿಧಿ, ಆರೋಗ್ಯ ಮುಂತಾದ ಖಾತೆಗಳು. ಹೀಗೆ ಮೂರು ಜನ ಮಂಡಳದ ಪಟ್ಟಿ ಒಮ್ಮತದಿಂದ ಸರಕಾರಕ್ಕೆ ಸಲ್ಲಿಸಲಾಯಿತು. ಶ್ರೀಮಾನ್ ಜತ್ತಿಯವರು ಈ ಮಂತ್ರಿ ಮಂಡಳದ ವರಿಷ್ಠರಾಗಿದ್ದರು. ಶ್ರೀ ಜತ್ತಿಯವರಿಗೆ ದಿ. ತಾಬಡೆ ಹಾಗೂ ನನ್ನ ವಿಶೇಷ ಆಶೀರ್ವಾದ ಮತ್ತು ಮಾರ್ಗದರ್ಶನ ಇದ್ದಿತ್ತು. ಪ್ರಜಾ ಪರಿಷತ್ತಿನ ಪ್ರಮುಖರಾಗಿ ಶ್ರೀಮಾನ್ ತಾಬಡೆಯವರೇ ಮುಖ್ಯಮಂತ್ರಿ ಆಗಬೇಕಾಗಿತ್ತು. ಆದರೆ ಆಗ್ಗೆ ಅವರು ದಕ್ಷಿಣ ಸಂಸ್ಥಾನದ ಪ್ರಜಾ ಪರಿಷತ್ತುಗಳ ಕಾರ್ಯದರ್ಶಿ ಹಾಗೂ ಅಖಿಲ ಭಾರತ ಪ್ರಜಾ ಪರಿಷತ್ತಿನ ಸಮ್ಮೇಲನದಲ್ಲಿ ಈ ಭಾಗದ ಪ್ರತಿನಿಧಿ. — ಹೀಗೆ ಅವರ ಕಾರ್ಯ ಬಾಹುಲ್ಯ ಬಹಳೇ ಬೆಳೆದಿದ್ದರಿಂದ ಅವರು ಆಗ್ಗೆ ಜತ್ತಿಯವರಿಗೆ ಅಧಿಕಾರ ಕೊಟ್ಟು ಆಶೀರ್ವಾದ ಮಾಡಿದ ಸಂಗತಿ ತಾಬಡೆಯವರ ಔದಾರ್ಯವನ್ನು ತೋರಿಸುತ್ತದೆ.

## ದಕ್ಷ ಆಡಳಿತಗಾರರು

ಶ್ರೀ ಜತ್ತಿಯವರ ಈ ಮಂತ್ರಿಮಂಡಳ ಪ್ರಜಾ ಪರಿಷತ್ತಿನ ಆದೇಶದಂತೆ ಭಾರತ ಸ್ವತಂತ್ರವಾಗುವವರೆಗೆ ಅಂದರೆ ಸುಮಾರು ೧೯೪೮ ರವರೆಗೆ ಲೋಕಾನುವರ್ತಿಯಾಗಿ ಉತ್ತಮ ಕೆಲಸ ಮಾಡುತ್ತಿತ್ತು. ಇದೇ ಸಮಯದಲ್ಲಿ ಒಬ್ಬ ದಕ್ಷ ಆಡಳಿತಗಾರರೆಂದು ಶ್ರೀಮಾನ್ ಜತ್ತಿಯವರು ಹೆಸರು ಪಡೆದರು ೧೯೪೬ ರಲ್ಲಿ ಶ್ರೀಮಾನ್ ಬಿ ಜಿ. ಖೇರ್ ಆಗಿನ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳು ಇವರ ಘನ ಅಧ್ಯಕ್ಷತೆಯಲ್ಲಿ ಪ್ರಜಾಪರಿಷತ್ತಿನ ಅಧಿವೇಶನ ಜಮುಖಂಡಿಯಲ್ಲಿ ನಡೆಯಿತು. ಶ್ರೀಮಾನ್ ಖೇರರು ಜಮಖಂಡಿ ಸಂಸ್ಥಾನದ ಪ್ರಜೆಗಳಾಗಿದ್ದರು. ಜತ್ತಿ ಮಂತ್ರಿಮಂಡಳ ಆದರ ದಕ್ಷ ಆಡಳಿತ ನೋಡಿ ಖೇರರು ಮೆಚ್ಚುಗೆ ವ್ಯಕ್ತಪಡಿಸಿದ್ದರು. ೧೫, ಅಗಸ್ಟ ೧೯೪೭ ಕ್ಕೆ ದೇಶ ಸ್ವತಂತ್ರವಾಗಿ ಮತ್ತೆ ಆಯಾ ಪ್ರಾಂತಗಳಲ್ಲಿ ಮಂತ್ರಿಮಂಡಳಗಳ ರಾಜ್ಯ ನಡೆಯಿತು.

ಮುಂಬಯಿ ಇಲಾಖೆಯಲ್ಲಿ ಶ್ರೀ ಖೇರ ಅವರ ಮಂತ್ರಿಮಂಡಳ ಅಧಿಕಾರದಲ್ಲಿಯೇ ಇದ್ದಿತ್ತು.

೧೯೪೮ರ ರಲ್ಲಿ ಒಂದು ಕುತೂಹಲಕಾರಿ ಘಟನೆ ಸಂಭವಿಸಿತು. ಆಗ್ಗೆ ಬನಹಟ್ಟಿಯಲ್ಲಿ ಶ್ರೀ ಎಸ್. ನಿಜಲಿಂಗಪ್ಪ, ಮೈಸೂರು ಮಾಜಿ ಮುಖ್ಯಮಂತ್ರಿ ಇವರ ಅಧ್ಯಕ್ಷತೆಯಲ್ಲಿ ಪ್ರಜಾಪರಿಷತ್ತಿನ ಅಧಿವೇಶನ ಕೂಡಿತ್ತು. ಸಂಸ್ಥಾನದ ಅಧಿಪತಿಗಳಾದ ದಿ. ಶ್ರೀ ಪಿ. ಪಟವರ್ಧನರು ಸ್ವತಃ ಸಂಸ್ಥಾನ ಭಾರತದಲ್ಲಿ ವಿಲೀನಗೊಳಿಸುವ ಠರಾವನ್ನು ಮಂಡಿಸಿದರು. ಈ ಠರಾವು ಒಮ್ಮತದಿಂದ ಪಾಸಾಯಿತು. ಅಧಿಪತಿಗಳು ಸ್ವತಃ ದಿಲ್ಲಿಗೆ ಹೋಗಿ ಆಗಿನ ಕೇಂದ್ರ ಗೃಹ ಸಚಿವರಾದ ದಿ. ಶ್ರೀ ವಲ್ಲಭಭಾಯಿ ಪಟೇಲರ ಕೈಯಲ್ಲಿ ವಿಲಿನೀಕರಣ ಪತ್ರಿಕೆಗೆ ಅಂಕಿತಹಾಕಿ ಅವರಿಂದ ಪ್ರಶಂಸೆಯನ್ನು ಪಡೆದುಕೊಂಡು ಬಂದರು. ಭಾರತದ ಸಂಸ್ಥಾನಗಳಲ್ಲಿ ಪ್ರಪ್ರಥಮವಾಗಿ ಸ್ವಯಂ ಪ್ರೇರಣೆಯಿಂದ ವಿಲೀನವಾದ ಸಂಸ್ಥಾನವೆಂದರೆ ಜಮಖಂಡಿ ಸಂಸ್ಥಾನ. ದೇಶದ ತುಂಬೆಲ್ಲ ಇದರ ಪರಿಣಾಮವಾಗಿ ಸಣ್ಣ-ದೊಡ್ಡ ಎಲ್ಲ ಸಂಸ್ಥಾನಗಳು ಭಾರತದಲ್ಲಿ ವಿಲೀನಗೊಂಡವು ಹಾಗೂ ಸಮೀಪದ ಇಲಾಖೆಯಲ್ಲಿ ಆಯಾ ಸ್ಥಾನಗಳು ವಿಲೀನವಾದವು. ಜಮಖಂಡಿ ಮುಂಬಯಿ ಪ್ರಾಂತದಲ್ಲಿ ವಿಲೀನವಾಗಿ ಪ್ರಜಾಪರಿಷತ್ತಿನ ಪ್ರತಿನಿಧಿಯೆಂದು ಶ್ರೀಮಾನ ಜತ್ತಿಯವರು ಮುಂಬಯಿ ವಿಧಾನಮಂಡಳದ ಸಭಾಸದರಾದರು.

## ಪಾರ್ಲಿಮೆಂಟರಿ ಕಾರ್ಯದರ್ಶಿ

ಮುಂಬಯಿ ಮಂತ್ರಿಮಂಡಳದಲ್ಲಿ ವಿಲೀನವಾದ ದಕ್ಷಿಣ ಸಂಸ್ಥಾನಗಳ ಪ್ರತಿನಿಧಿಗಳಿಗೊಬ್ಬರು ಬೇಕೆಂದು ಪ್ರಜಾಪರಿಷತ್ತಿನ ಬೇಡಿಕೆಯಾಗಿತ್ತು. ಶ್ರೀಮಂತ ಪಿ. ಪಟವರ್ಧನರು ದಿ. ವಲ್ಲಭಬಾಯಿ ಹಾಗೂ ಮುಖ್ಯಮಂತ್ರಿ ಬಾಳಾಸಾಹೇಬ ಖೇರ ಅವರಿಗೆ ಹೇಳಿ ಮುಂಬಯಿ ಮಂತ್ರಿಮಂಡಳದಲ್ಲಿ ಜಮಖಂಡಿಗೆ ಒಂದು ಸ್ಥಾನ ದೊರೆಯಲೆಂದು ವಿನಂತಿಸಿಕೊಂಡರು. ಜಮಖಂಡಿ ಪ್ರಜಾಪರಿಷತ್ತಿನವರೂ ಕೂಡ ಒಮ್ಮತದಿಂದ ಇದೇ ಬೇಡಿಕೆಯನ್ನು ಮುಂದಿಟ್ಟರು. ದಕ್ಷ ಆಡಳಿತಗಾರರೆಂದು ಶ್ರೀಮಾನ್ ಜತ್ತಿಯವರು ಹೆಸರುವಾಸಿಗಳಾಗಿದ್ದರು. ಇವೆಲ್ಲವುಗಳ ಪ್ರಭಾವದಿಂದ ಮುಂಬಯಿ ಖೇರ ಮಂತ್ರಿಮಂಡಳದ ಸಭಾಸದರಾಗಿ ಮುಖ್ಯಮಂತ್ರಿಗಳ ಪಾರ್ಲಿಮೆಂಟರಿ ಕಾರ್ಯದರ್ಶಿಯ ಹುದ್ದೆ ಪಡೆದು ಶ್ರೀಮಾನ ಜತ್ತಿಯವರು ಮುಂಬಯಿ ಮಂತ್ರಿಮಂಡಳದಲ್ಲಿ

ಪ್ರವೇಶಪಡೆದರು. ಇದೇ ಸಮಯದಲ್ಲಿ ನಾನು ಅಧ್ಯಕ್ಷನಾಗಿ ಹಾಗೂ ಶ್ರೀ ಜತ್ತಿಯವರು ಕಾರ್ಯದರ್ಶಿಗಳಾಗಿ ಒಂದು ಜಿಲ್ಲಾ ನಿರ್ಮಾಣ ಸಮಿತಿ ರಚಿಸಲಾಗಿತ್ತು. ಈ ಉದ್ದೇಶಿಸಿತ ಜಿಲ್ಲೆಯಲ್ಲಿ ಬೆಳಗಾಂವ, ಧಾರವಾಡ ಮತ್ತು ವಿಜಾಪುರ ಜಿಲ್ಲೆಗಳ ಕೆಲವು ಭಾಗಗಳು ಹಾಗೂ ಕನ್ನಡ ಭಾಷೆಯ ದಕ್ಷಿಣ ಸಂಸ್ಥಾನದ ಪ್ರದೇಶವನ್ನು ಕೂಡಿಸಿಕೊಂಡು ಒಂದು ಹೊಸ ಜಿಲ್ಲೆ ನಿರ್ಮಿಸಬೇಕು ಮತ್ತು ಜಿಲ್ಲಾ ಸ್ಥಳ ಜಮಖಂಡಿ ಆಗಬೇಕೆಂದು ಶ್ರೀಮಾನ್ ಜತ್ತಿಯವರು ಬಹಳ ಪ್ರಯತ್ನಪಟ್ಟರು. ಆ ಬೇಡಿಕೆ ಇನ್ನೂ ಪೂರ್ಣವಾಗಿಲ್ಲ.

## ಸ್ಥಾನ – ಮಾನ

೧೯೫೨ ರ ಸಾರ್ವತ್ರಿಕ ಚುನಾವಣೆಯಲ್ಲಿ ನಾವು ಮತ್ತೆ ಜತ್ತಿಯವರಿಗೆ ಪ್ರಚಂಡ ಬಹುಮತದಿಂದ ಆರಿಸಿಕೊಟ್ಟೆವು. ಆಗ್ಗೆ ಜತ್ತಿಯವರು ಪುನಃ ಮುಂಬಯಿ ಮಂತ್ರಿಮಂಡಳದಲ್ಲಿ ಆರೋಗ್ಯ ಹಾಗೂ ಕೂಲಿಕಾರ ವಿಭಾಗದ ಉಪಸಚಿವರಾಗಿ ಕೆಲಸ ಮಾಡಿದರು. ನಮ್ಮ ಈ ಭಾಗವು ೧೯೫೬ ರಲ್ಲಿ ಮೈಸೂರು ಪ್ರಾಂತದಲ್ಲಿ ಸೇರಿಸಲಾಯಿತು. ಆಗ್ಗೆ ಜತ್ತಿಯವರು ಭೂಸುಧಾರಣೆಯ ಏಕ ಸದಸ್ಯ–ಆಯೋಗದ ಅಧ್ಯಕ್ಷರಾಗಿ ಕೆಲಸ ಮಾಡಿ ತದನಂತರ ಮುಖ್ಯಮಂತ್ರಿ ಆಗಿಯೂ ಸ್ಥಾನ–ಮಾನ ಪಡೆದರು.

೧೯೬೨ ರಲ್ಲಿ ಪುನಃ ಜತ್ತಿಯವರಿಗೆ ಪ್ರಚಂಡ ಬಹುಮತದಿಂದ ಆರಿಸಿ ಕೊಟ್ಟೆವು. ಆಗ್ಗೆ ಕೇಂದ್ರ ಸರಕಾರದ ವಿನಂತಿಯ ಮೇರೆಗೆ ಮತ್ತೆ ಅವರು ಶ್ರೀ ನಿಜಲಿಂಗಪ್ಪ ಮಂತ್ರಿಮಂಡಳದಲ್ಲಿ ಅರ್ಥಮಂತ್ರಿಯಾಗಿ ಅಧಿಕಾರವಹಿಸಿಕೊಂಡರು. ೧೯೬೭ ರಲ್ಲಿ ಬಹುಮತದಿಂದ ಆರಿಸಿ ಬಂದರು. ಆಗ್ಗೆ ಅವರು ಪಾಂಡಿಚೇರಿ ಉಪರಾಜ್ಯಪಾಲರಾಗಿ ನೇಮಕಹೊಂದಿದರು. ಹೀಗೆ ಮತ್ತೆ ಓರಿಸ್ಸ ರಾಜ್ಯದ ರಾಜ್ಯಪಾಲರಾಗಿ ಮತ್ತು ಈಗ್ಗೆ ಭಾರತದ ಉಪರಾಷ್ಟ್ರಪತಿಗಳಾಗಿ ಅಧಿಕಾರವಹಿಸಿ ಸದೈವ ಅಭ್ಯುದಯವನ್ನು ಹೊಂದುತ್ತ ಬಂದಿದ್ದಾರೆ. ಇದನ್ನು ಹೇಳಲು ನನಗೆ ತುಂಬ ಆನಂದವೆನಿಸುತ್ತದೆ.



# ಕನ್ನಡ ಉಪರಾಷ್ಟ್ರಪತಿ

● ಸಿಂಪಿ ಲಿಂಗಣ್ಣ

● [ ಸಿಂಪಿ ಲಿಂಗಣ್ಣನವರ ಹೆಸರು ಕೇಳದ ಕನ್ನಡಿಗರಿಲ್ಲ. ಭಾಷಣಗಳ ಮೂಲಕವೂ ಲೇಖನಗಳ ಮೂಲಕವೂ ಪುಸ್ತಕದ ಪ್ರಕಾಶನಗಳ ಮೂಲಕವೂ ಉತ್ತರ ಕರ್ಣಾಟಕದಲ್ಲಿ ಮಾತ್ರವಲ್ಲ ಹಳೆಯ ಮೈಸೂರು ಭಾಗದಲ್ಲಿಯೂ ಚಿರಪರಿಚಿತರಾಗಿದ್ದಾರೆ. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರೂ ಕರ್ಣಾಟಕದ ಮೇಲಿನ ಅಭಿಮಾನದಿಂದ, ಕನ್ನಡ ಸಾಹಿತ್ಯದ — ಅದರಲ್ಲಿಯೂ ಜನಪದ ಸಾಹಿತ್ಯದ — ಮೇಲಿನ ಒಲುವಿನಿಂದ ನಾಡೆಲ್ಲ ಸುತ್ತಿ ನಾಡನ್ನೂ ಸಹಜವಾಗಿ ತಮ್ಮನ್ನೂ ಜನತೆಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಅವರು ಹೇಳಿದುದೆಲ್ಲವೂ ರಸಭರಿತವಾಗಿರುತ್ತದೆ; ಬರೆದುದೆಲ್ಲವೂ ಸ್ವಾರಸ್ಯವಾಗಿರುತ್ತದೆ. — ಸಂ ]

ಭಾರತದೇಶದ ಉಪರಾಷ್ಟ್ರಪತಿ ಸ್ಥಾನಕ್ಕೆ ಆಯ್ಕೆಗೊಂಡ ಬಸಪ್ಪ ದಾನಪ್ಪ ಜತ್ತಿ ಅವರು, ಕನ್ನಡ ಕುಲದ ಮುಂಡಿಗೆ ಹೂತಂದ ಸಂಗತಿಯನ್ನು ಕೇಳಿದಾಗ ಥಟ್ಟನೆ ಒಂದು ಕಥೆ ನೆನಪಿಗೆ ಬಂತು. ಅದು ಶ್ರೀ ರಾಮಕೃಷ್ಣ ಪರಮಹಂಸರು ಹೇಳಿದ್ದು.

" ಆದಿತ್ಯವಾರ ಅಮಾಸಿಯ ಮಧ್ಯರಾತ್ರಿಯ ಕಗ್ಗತ್ತಲೆಯಲ್ಲಿ, ಅರಣ್ಯ ಮಧ್ಯದ ಒಂದು ಬನ್ನೀಮರದ ಕೆಳಗೆ ಒಬ್ಬನು ವೇತಾಳಸಾಧನೆ ನಡೆಸಿದ್ದನು. ರಂಗುಹಾಕಿ, ಪತ್ರಿಪುಷ್ಪ–ಧೂಪದೀಪ–ಬಲಿನೈವೇದ್ಯ ಮುಗಿಸಿ ವೇತಾಳವು ಪ್ರಕಟವಾಗುವ ಸುಳುಹುಕಂಡು, ಹೆದರಿ ನಡುಗುತ್ತ ರಂಗು ಬಿಟ್ಟು ಓಡಿಯೇ ಹೋದನು. ಅದೇ ಹೊತ್ತಿಗೆ ಪ್ರಕಟವಾಗುತ್ತಿರುವ ವೇತಾಳವನ್ನೂ, ಓಡಿಹೋಗುತ್ತಿರುವ ಸಾಧಕನನ್ನೂ ಕಣ್ಣಾರೆ ಕಂಡು, ಅಮಾಸಿಯ ಕಾಳರಾತ್ರಿಯನ್ನು ಕಳೆಯಲು ಮರವೇರಿ ಕುಳಿತ ಒಬ್ಬ ದಾರಿಕಾರನು ಭಯದಿಂದ ನಡುಗುತ್ತ ರಂಗದಲ್ಲಿ ದೊಪ್ಪನೆ ಬಿದ್ದನು. ವೇತಾಳವು ಆತನನ್ನು ಗಟ್ಟಿಯಾಗಿ ಹಿಡಿದು ಕೇಳಿತು–" ಏನುಬೇಕು।

ಹೇಳು ನಿನಗೆ,|ಬೇಗ?" ದಾರಿಕಾರನು ಇನ್ನಿಷ್ಟು ಗಾಬರಿಯಾಗಿ-"ನಾನು ಸಾಧಕ ನಲ್ಲ. ನಿನ್ನನ್ನು ಕರೆದವನೂ ಅಲ್ಲ. ಸಾಧನ ಮಾಡಿದವನು ಓಡಿಹೋಗಿದ್ದಾನೆ. ನನ್ನನ್ನೇಕೆ ಹಿಡಿದಿರುವೆ? ನನಗೇನೂ ಬೇಕಿಲ್ಲ'' ಎಂದು ನಡುಗುವ ದನಿಯಲ್ಲಿ ನುಡಿದನು. ಬೇತಾಳವು ಹೇಳಿತು-"ನೀನೀಗ ಸಾಧನ ಮಾಡಿಲ್ಲವಾದರೂ ಹಿಂದಿನ ಜನ್ಮದಲ್ಲಿ ಕಠೋರ ಸಾಧನ ಮಾಡಿರುವಿ. ಆಗ ಅದರ ಫಲ ನಿನಗೆ ಸಿಕ್ಕಿಲ್ಲ. ಈಗ ಸಿಗಬೇಕಾಗಿದೆ. ಒಲ್ಲೆಂದರೂ ಕೇಳುವದಿಲ್ಲ. ನಡೆ ನನ್ನ ಮನೆಗೆ" ಎಂದು ಅವನನ್ನು ಎಳೆದೊಯ್ದು, ಮುತ್ತು-ಮಾಣಿಕ್ಯ ಬೆಳ್ಳಿ-ಬಂಗಾರ ಮೊದಲಾದ ಸಂಪತ್ತನ್ನು ವಿಪುಲವಾಗಿ ಅವನ ಉಡಿಯಲ್ಲಿ ತುಂಬಿ ಕಳಿಸಿತಂತೆ."

ಜಮಖಂಡಿಯ ಗ್ರಾಮಪಂಚಾಯತಿಯ ಸರಪಂಚರಾಗಿದ್ದ ಬಿ. ಡಿ. ಜತ್ತಿ ಅವರು ಈ ಹೊತ್ತು ಭಾರತದ ಉಪರಾಷ್ಟ್ರಪತಿಸ್ಥಾನಕ್ಕೆ ಏರಿದ್ದು, ಇಂದಿನ ಪುಣ್ಯಕ್ಕಿಂತ ಹಿಂದಿನ ಪುಣ್ಯವೇ ಅಧಿಕವಾಗಿರುವಂತೆ ತೋರುತ್ತದೆ. ಸ್ವಾತಂತ್ರ್ಯ ಸಂಪಾದನೆಯ ಆಂದೋಲನದಲ್ಲಿ ಕಾಯ್ದೆಭಂಗ ಮಾಡಿದವರಲ್ಲ, ಸೆರೆಮನೆ ಕಂಡವ ರಲ್ಲ. ಶಿಕ್ಷೆ ಭೋಗಿಸಿದವರಲ್ಲ, ದಂಡ ತೆತ್ತವರೂ ಅಲ್ಲ. ಆದರೆ ಸ್ವತಂತ್ರ ಭಾರತದ ಆಡಳಿತವನ್ನು ನಿರ್ವಹಿಸುವ ಪಾತ್ರ ವಹಿಸುತ್ತ ಒಮ್ಮೆಲೆ ರಂಗಭೂಮಿಯ ಮೇಲೆ ಕಾಣಿಸಿಕೊಂಡರು. ಇತ್ತೀಚೆಗೆ ಅವರನ್ನು ರಂಗಭೂಮಿಯೇ ಅರಸಿಕೊಂಡು ಬರು ವಂತಿದೆ.

## ರಾಜಕೀಯ ಜೀವನ

ಸಾವಳಗಿ ಅವರ ಹುಟ್ಟಿದೂರು, ಹುಟ್ಟಿದ ವರುಷ ೧೯೧೨ ಪ್ರಾಥಮಿಕ ಶಿಕ್ಷಣ ಮುಗಿಸಿದ ಬಳಿಕ, ವಿಜಾಪುರ ಸಿದ್ಧೇಶ್ವರ ಹೈಸ್ಕೂಲಿನಲ್ಲಿ ಮ್ಯಾಟ್ರಿಕದ ವರೆಗೆ ಓದಿ ಆ ಮೇಲೆ ಕೊಲ್ಲಾಪುರ ಕಾಲೇಜಿನಲ್ಲಿ ಬಿ. ಎ. ಎಲ್‌ಎಲ್. ಬಿ. ಪದವಿ ಗಳಿಸಿ ಕೊಂಡು ಜಮಖಂಡಿಯಲ್ಲಿ ಬಂದು ನೆಲೆಸಿದರು. ವಕೀಲಿ ವೃತ್ತಿಗೆಳಸಿದರು. ಅಲ್ಲಿಯೇ ಅವರ ರಾಜಕೀಯ ಜೀವನ ಆರಂಭವಾಯಿತು. ಮೊದಲು ಲೆಜಿಸ್ಲೇಟರ್ ಎಂದು ಆಯ್ಕೆಯಾಗಿ, ಸಂಸ್ಥಾನದ ಮುಖ್ಯಮಂತ್ರಿ ಆದರು. ೧೯೪೮ ರಲ್ಲಿ ಸಂಸ್ಥಾನವು ಮುಂಬಯಿ ರಾಜ್ಯದಲ್ಲಿ ವಿಲಯನಗೊಂಡಿತು.

ಜತ್ತಿಯವರ ಮನೆತನದ ವೃತ್ತಿ ವ್ಯಾಪಾರ. ಬಸಪ್ಪನವರು ಮಾಡಿಕೊಂಡಿದ್ದು ವಕೀಲಿಯ ಸಿದ್ಧತೆ. ಸರ್ವಜ್ಞಕವಿಯ ಪರಿಭಾಷೆಯಲ್ಲಿ ಹೇಳಬೇಕಾದರೆ ಮೊದಲೇ ಎಲ್ಲವನ್ನು ಬಲ್ಲ ಬಣಜಿಗ, ಅದಕ್ಕೆ ವಕೀಲಿ ಅಭ್ಯಾಸದ ಕುಂದಣ ಬೇರೆ, ಆ ಮೇಲೆ ರಾಷ್ಟ್ರದ ಸಂಕ್ಷಿಪ್ತ ಸ್ವರೂಪವೆನಿಸುವ ಸಂಸ್ಥಾನದ ಆಡಳಿತದ ಗರಡೀಮನೆಯ

ತಾಲೀಮು! ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಯೆಂದರೆ, ಒಂದು ವಿಧದಲ್ಲಿ ಗ್ರಾಮಪಂಚಾಯತಿಯ ಸರಪಂಚ ಇದ್ದಂತೆಯೇ. ಅದು, ಅಲ್ಲಿ ಸಲ್ಲುವವನಾಗುವುದಕ್ಕೆ ಇಲ್ಲಿ ಸಲ್ಲುವ ಪೂರ್ವಸಿದ್ಧತೆ ಅಲ್ಲ, ಅಪೂರ್ವ–ಸಿದ್ಧತೆಯಾಗಿ ಪರಿಣಮಿಸಿತು.

ಸಂಸ್ಥಾನಗಳ ವಿಲೀನೀಕರಣಕ್ಕೆ ಜಮಖಂಡಿಯು ಮೊಟ್ಟಮೊದಲು ಸಮ್ಮತಿಸಿ ನಾಂದಿ ಹಾಡಿದ ಶ್ರೇಯಸ್ಸು ಶ್ರೀ ಬಿ. ಡಿ. ಅವರಿಗೆ ಸಲ್ಲಬೇಕು. ಸ್ವತಂತ್ರ ಭಾರತದಲ್ಲಿ ಮುಂಬಯಿ ರಾಜ್ಯದ ಪ್ರಪ್ರಥಮ ಮುಖ್ಯಮಂತ್ರಿಗಳಾದ ಶ್ರೀ ಬಿ. ಜಿ. ಖೇರರು, ಶ್ರೀ ಬಿ. ಡಿ. ಜತ್ತಿಯವರನ್ನು ತಮ್ಮ ವಿಧಾನ ಸಭೆಗೆ ಶಾಸಕರೆಂದು ನಾಮಕರಣ ಮಾಡಿದರು- ಅಲ್ಲದೆ ಪಾರ್ಲಿಮೆಂಟರಿ ಸೆಕ್ರೆಟರಿ ಎಂಬ ಗೌರವಸ್ಥಾನವನ್ನು ಅವರಿಗೆ ಕೊಡಮಾಡಿದರು ( ೧೯೪೮ )

ನರಿಯ ಮುಖನೋಡಿ ಹೋದವರಿಗೆ ಕಾರ್ಯದಲ್ಲಿ ಯಶಸ್ಸು ನಿಶ್ಚಯವಂತೆ. ಸ್ವತಃ ನರಿಯಂತಿರುವವರಿಗಾಗಲಿ, ನರಿಯೇ ಆಗಿರುವವರಿಗಾಗಲಿ ಯಶಸ್ಸು ಅದೆಷ್ಟು ನಿಶ್ಚಯವಾಗಿರಬೇಡ ? ಗುರುಗ್ರಹವು ಬೆಳ್ಳಿಚಿಕ್ಕೆಯಷ್ಟು ಹೊಳಪಿನದಲ್ಲವಾದರೂ, ಅದು ಬಣಜಿಗನ ಮಿಂಡನೆನಿಸಿಕೊಳ್ಳಲು ಅರ್ಹವಾಗಿದೆ. ಮುಂಬಯಿ ರಾಜ್ಯ ಸರ್ಕಾರದ ಮಹಾಕಾಶದ ಕ್ಷಿತಿಜದಲ್ಲಿ ಕಾಣಿಸಿಕೊಂಡ ಗುರುಗ್ರಹವು ಕ್ರಮವಾಗಿ ಮೇಲೇರುವುದೇ ಸ್ವಾಭಾವಿಕ. ೧೯೫೬ ನೇ ಇಸವಿಯಲ್ಲಿ ರೂಪುಗೊಂಡ ಮೈಸೂರು ರಾಜ್ಯದ ಮಂತ್ರಿಮಂಡಲವನ್ನು ರಚಿಸಿಕೊಂಡ ಶ್ರೀ ಸಿ. ನಿಜಲಿಂಗಪ್ಪನವರು ಜತ್ತಿ ಅವರಿಗೆ ಒಂದು ಮಂತ್ರಿಪದ ಸ್ಥಾನವನ್ನೀಯಲು ಮರೆತರು. ಆದರೆ–ಮುಖ್ಯಮಂತ್ರಿ ಸ್ಥಾನವನ್ನು ಜತ್ತಿಯವರು ಅಲಂಕರಿಸಿದರು. ( ೧೯೫೮ )

## ಗ್ರಹಗತಿ

ಪ್ರತಿಯೊಂದು ಗ್ರಹವೂ ಸೂರ್ಯನನ್ನು ಸುತ್ತುವುದಕ್ಕೆ ಅದರದೇ ಆದ ದೀರ್ಘವರ್ತುಲದ ಮಾರ್ಗವಿರುತ್ತದೆ. ಆ ಗ್ರಹವು ಅದರಲ್ಲಿ ಚಲಿಸುತ್ತ ಸೂರ್ಯನಿಗೂ ನಮಗೂ ಅಡ್ಡಬಂದಾಗ ಎಡದಿಂದ ಬಲಕ್ಕೆ ಸಾಗಿದ್ದು ಸ್ಪಷ್ಟವಾಗಿ ಕಂಡುಬರುತ್ತದೆ. ಆಗ ಗ್ರಹವು ಮಾರ್ಗಿಯಾಗಿದೆ ಅನ್ನುತ್ತಾರೆ. ಆ ಬಳಿಕ ಒಂದು ತಿರುವಿನಲ್ಲಿ ಸಾಗಿದಾಗ ಗ್ರಹವು ಮುಂಘುವರಿಯದೆ ನಿಂತೇ ಬಿಟ್ಟಂತೆ ತೋರುತ್ತದೆ. ಮುಂದೆ ಇನ್ನೊಂದು ಹೊರಳಿಕೆಯಲ್ಲಿ ಸೂರ್ಯನಿಗೂ ಆಚೆಯಲ್ಲಿ ಗ್ರಹವು ಬಲದಿಂದ ಎಡಕ್ಕೆ ಸಾಗಿದಂತೆ ತೋರುವದು. ಆಗ ಗ್ರಹವು

ವಕ್ರೀ ಆಗಿದೆ ಎನ್ನುತ್ತಾರೆ. ನಿಜವಾಗಿ ಗ್ರಹವು ಯಾವಾಗಲೂ ಚಲಿಸುತ್ತದೆ, ಮಾತ್ರವಲ್ಲ ನಡೆಮುಂದೆ ನಡೆಮುಂದೆ, ನುಗ್ಗಿನಡೆ ಮುಂದೆ ಎನ್ನುವಂತೆ ಮುಂದುವರಿಯುತ್ತಲೇ ಇರುತ್ತದೆ. ಆದರೆ ನಮಗೆ ಗ್ರಹಗತಿಯೆ ನಿಂತುಬಿಟ್ಟಂತೆ ಒಮ್ಮೆ, ಹಿಂಬರಿಕೆ ನಡೆದಂತೆ ಇನ್ನೊಮ್ಮೆ, ಅನಿಸುವುದುಂಟು. ಶ್ರೀ ಬಿ. ಡಿ. ಜತ್ತಿ ಯವರ ಜೀವನ ದೆಶೆಯಲ್ಲಿಯೂ ಗ್ರಹಗತಿಯ ಲೆಕ್ಕಾಚಾರವನ್ನೇ ಕಾಣುವೆವು.

ಸಾವಳಗಿಯ ಬಸಪ್ಪ ಜತ್ತಿ ಅವರು, ಕಲ್ಯಾಣದ ಬಸವಣ್ಣನವರ ಜೀವ ನವನ್ನು, ತತ್ವವನ್ನು ಅಳವಡಿಸಿಕೊಳ್ಳಲು ಸಾಕಷ್ಟು ಪ್ರಯತ್ನಿಸಿದ್ದು ನಾಡಿಗೇ ಗೊತ್ತಿದೆ. ಈಗಲೂ ಕೂಡ ಅವರ ಹಣೆಯ ಮೇಲೆ ಮೂಬೆರಳಿನ ವಿಭೂತಿ ಯಾವಾಗಲೂ ಕಂಗೊಳಿಸುತ್ತದೆ. ಅದನ್ನು ಆಯಿಲ್ ಪೇಂಟ್ ಎಂದು ಭಾವಿ ಸಿದವರೂ ಇದ್ದಾರೆ. ತಲೆಯಲ್ಲಿ ಬಿಳಿಟೊಪ್ಪಿಗೆ, ಹಣೆಯಲ್ಲಿ ಬಿಳಿಯ ಮೂಬೆರಳು ವಿಭೂತಿ; ಆ ಬಳಿಕ ಕರೆಹುಬ್ಬು. ಕೆಳಗೆ ತನ್ನದೇ ಮೇಲೆ ಸ್ನುವ ಮೂಗು. ಅದರಡಿಯಲ್ಲಿ ಹಿಟ್ಲರೀಮೀಸೆ, ಬಾಯ್ದೆರೆಯಲ್ಲಿ ಬಿಳಿಹಲ್ಲು ಬಿಳಿನಗೆ, ಸರಿಯ ಜಾಣ್ಮೆಯೊಡನೆ, ಸಪ್ಪುಳಿಲ್ಲದ ಬೆಕ್ಕಿನ ಹೆಜ್ಜೆಯನ್ನು ಪಡೆದು ಬಂದಿದ್ದಾರೆ ಜತ್ತಿಯವರು. ಅಷ್ಟನ್ನೇ ಕಂಡವರು – "ನೀ ನಾರಿಗಾದೆಯೋ ಎಲೇ ಮಾನವಾ" ಎಂದ ಹಾಡಿಕೊಂಡಿದ್ದೂ ಉಂಟು. ಆದರೆ ಆರಿಗಾದೆಯೋ ನಾರಿಗಾದೆಯೋ ಎನ್ನುವ ಸಮಸ್ಯೆ ಇನ್ನೂ ಸ್ಪಷ್ಟವಾಗಿಲ್ಲ.

**ತಪಸ್ಸು**

ಬಸವಣ್ಣನವರ ಅಷ್ಟಶತಮಾನೋತ್ಸವಕ್ಕೆ ಅವರು ಎಲ್ಲಿಲ್ಲದ ಕಳೆ ತಂದು ಕೊಟ್ಟರೆಂದು ಹೇಳಲಾಗುತ್ತಿದೆ. ಯಾದಗಿರಿಯ ಶ್ರೀ ವಿಶ್ವನಾಥರೆಡ್ಡಿ ಮುದ ನಾಳರೊಂದಿಗೆ ಕಾಲುನಡಿಗೆಯ ಪ್ರವಾಸವನ್ನು ಕೈಕೊಂಡರು ಕಲ್ಯಾಣದವರೆಗೆ. ಅದೊಂದು ಶಾರೀರಿಕ ತಪಸ್ಸೂ ಬಸವಣ್ಣನವರಿಗಾಗಿ. ಅದರೊಡನೆ ಅವರನ್ನು ಕುರಿತ ವಾಙ್ಮಯ ತಪಸ್ಸೂ ಅಂತರಂಗದಲ್ಲಿ ಸಾಗಿಯೇ ಇತ್ತು. ಆ ಸಂದರ್ಭ ದಲ್ಲಿ ಅವರ ಭಾಷಣ ಮುತ್ತಿನ ಸರದಂತೆ, ಸ್ಫಟಿಕದ ಶಲಾಕೆಯಂತೆ, ಮಾಣಿ ಕ್ಯದ ದೀಪ್ತಿಯಂತೆ ಕಂಗೊಳಿಸುತ್ತ, ಮನಂಗೊಳಿಸುತ್ತ ಬಂದಿತು. ಮಾತೇ ಜ್ಯೋತಿರ್ಲಿಂಗವೆನಿಸುವುದಾಗಲಿ, ಲಿಂಗಮೆಚ್ಚಿ ಸೈಸೈಯೆನ್ನುವುದಾಗಲಿ ಸಾಧಿಸು ವುದು ಮಾತ್ರ ಉಳಿದಿತ್ತು. ಕಲ್ಯಾಣ ಬಸವಣ್ಣನಿಗೆ ಸಲ್ಲಬೇಕಾದ ಮನ್ನಣೆ ಜತ್ತಿ ಬಸಪ್ಪನವರಿಗೆ ಸಿಕ್ಕಿತು.

ವಿಶ್ವಕ್ಕೆ ಕನ್ನಡವಿತ್ತ ಅಂದಿನ ಆಧ್ಯಾತ್ಮಿಕ ಜೀವನದ ಸತ್ವ–ತತ್ವಗಳನ್ನು ಮೈಗೂಡಿಸಿಕೊಂಡ ಬಳಿಕ, ವಿಶ್ವ–ವಿಶ್ವಾತೀತಗಳಿಗೆ ಭಾರತವಿತ್ತ ಇಂದಿನ

ಸುಪ್ರಮಾನಸದ ತತ್ವ–ಸತ್ವಗಳನ್ನು ಮನಗೂಡಿಸಿಕೊಳ್ಳುವುದು. ಕ್ರಮಪ್ರಾಪ್ತ. ಅಂತೆಯೇ ಪಾಂಡಿಚೇರಿಗೆ ಲೆಫ್ಟನೆಂಟ ಗವ್ಹರ್ನರ ಆಗಿ ಹೋಗುವ ಸರತಿ ಶ್ರೀ ಜತ್ತಿಯವರಿಗೆ ಬಂದಿತೇನೋ. ಅದಕ್ಕೂ ಅವರ ಸುದೈವವೇ ಕಾರಣ. ಕೆಲವರೆಂದರು ಸವಕಳಿ ನಾಣ್ಯವಾಗಿ ಮೂಲೆಗೆ ಬಿದ್ದರು. ಶರಣರ ಅನುಭಾವ ಸಾಹಿತ್ಯದ ಸುಳಾದಿ ಹಿಡಿದು, ಶ್ರೀ ಮಾತಾರವಿಂದರ ಆಧ್ಯಾತ್ಮಿಕ–ಸುಪ್ರಮಾನಸ ದರ್ಶನದ ಸುಳುಹನ್ನು ಗುರುತಿಸಿಕೊಂಡರು. ಶ್ರೀ ಅರವಿಂದರ ಅವಶೇಷದ ಕಲಶವನ್ನು ಹೊತ್ತುತಂದು, ಕರ್ನಾಟಕದ ಗದ್ದುಗೆಗೆ ತಂದೊಪ್ಪಿಸುವ ಮಹಾಮನ್ನಣೆ ಶ್ರೀ ಮಾತೆಯವರಿಂದ ಜತ್ತಿ ಅವರಿಗೆ ದೊರಕೊಂಡಿದ್ದು ಸಣ್ಣ ಮಾತೇನಲ್ಲ.

ಪಾಂಡಿಚೇರಿಯ ಲೆ. ಗವ್ಹರ್ನರರಾಗಿದ್ದ ಶ್ರೀ ಜತ್ತಿ ಅವರು ಓರಿಸಾದ ಗವ್ಹರ್ನರರಾಗಿ ಹೋದರು (೧೯೭೪). ಅಲ್ಲಿಯ ಮುಖ್ಯಮಂತ್ರಿ ನಂದನೀ ಸತ್ಪಥಿ ಅವರೂ ಶ್ರೀ ಮಾತಾರವಿಂದರ ಪರಮ ಭಕ್ತರು. ಉಭಯರ ಪರಮಭಕ್ತಿ ಪರಾಭಕ್ತಿಯಾಗಬೇಕಿತ್ತೇನೋ.

## ನಿಶ್ಚಿತ ಕುರುಹು

ಶ್ರೀ ಬಿ. ಡಿ. ಅವರ ಜೀವನ ಸರಳ — ಸಾದಾ. ಅವರನ್ನು ಬಿಟ್ಟು ಅವರ ಮನೆ ನೋಡಿದರೆ ಆ ಮಾತು ಮನವರಿಕೆಯಾಗುವದು. ಮನೆಯವರನ್ನು ನೋಡಿದರಂತೂ ಇನ್ನೂ ಸ್ಪಷ್ಟವಾಗುವದು. " ಕಣಕದಾ ಕಡುಬಿಗೆ. ಮಣಕದಾ ಹಯನು" ಹೊಂದಿಕೆಯಾಗಿಸಲು ಅಂಗಳದಲ್ಲಿ ಹಿಂಡುವ ಎಮ್ಮೆಯೊಂದು ಇರತಕ್ಕದ್ದೇ. ಆನುಷಂಗಿಕವಾಗಿ ಶ್ರೀಮತಿಯವರು ಕುಣಿ ಕುಣಿದು ಕಡೆಯಬಲ್ಲ ಸತಿ ಆಗಿದ್ದಾರೆಂದು ಹೇಳಬಹುದಾಗಿದೆ. ಅವರಲ್ಲಿ ಹೆಚ್ಚಾಗಿ ಗಡಿಗೆಗಳಲ್ಲೇ ಅಡಿಗೆ ಮಾಡುವ ವಾಡಿಕೆಯಂತೆ. ಅದು ಸರಳ ಜೀವನದ ನಿಶ್ಚಿತವಾದ ಕುರುಹು.

ತ್ರಿವಿಕ್ರಮನಾಗಬಲ್ಲ ವಾಮನಮೂರ್ತಿ ಶ್ರೀ ಬಿ. ಡಿ. ಜತ್ತಿಯವರು ತಲೆಯಲ್ಲಿ ನರಿಯಜಾಣ್ಮೆ, ಕಾಲಲ್ಲಿ ಮೃದುಹೆಜ್ಜೆ ಅವರಿಗೆ ಅಯಾಚಿತವಾಗಿವೆ, ಆನುಷಂಗಿಕವಾಗಿವೆ. ಈ ಮಾತು ನನಗೆ ಪಾಂಡಿಚೇರಿಯ ಲೆ. ಗವರ್ನರರಾಗಿದ್ದಾಗ ಅವರ ಮನೆಯಲ್ಲಿ ಇನ್ನೂ ಸ್ಪಷ್ಟವಾಯಿತು. ಕಟ್ಟಡ ಎತ್ತರವಾದಂತೆ ಬಾಗಿಲುಗಳೂ ಎತ್ತರ, ಎತ್ತರದ ಮಾನದಿಂದ ಅಗಲಳತೆ ತೀರ ಕಡಿಮೆ. ಅವರನ್ನು ಕಾಣುವ ಸಲುವಾಗಿ ನಿರೀಕ್ಷಣಾಲಯದಲ್ಲಿ ಕುಳಿತಾಗ ಅವರು ನಡುಮನೆಯಿಂದ ಪುಸಕ್ಕನೇ ಹೊರಬಂದರು. ಆ ಎತ್ತರವಾದ ಬಾಗಿಲಿನಿಂದ ಶ್ರೀ ಜತ್ತಿಯವರು ಸುಳಿದು

ಬಂದಾಗ ಬೆಕ್ಕು ಬಂದಿತೆಂದೇ ಮೊದಲು ತೋರಿತು. ಆದರೆ ಅದು ನನ್ನ ಭ್ರಾಂತಿ ಅವರೇಕಾದಾರು ಬೆಕ್ಕು? ಲೆ. ಗವರ್ನರ ಶ್ರೀ ಬಿ. ಡಿ. ಜತ್ತಿಯವರಾಗಿದ್ದರೆಂದು ಹೇಳಬೇಕು.

ಭಾರತಾಂತರ್ಗತ ಕರ್ನಾಟಕದವರೋ ಕರ್ನಾಟಕಾಂತರ್ಗತ ಭಾರತೀಯರೋ ಆದ ಶ್ರೀ ಜತ್ತಿ ಅವರು, ಎಲ್ಲಿ ಹೋದರೂ ಕನ್ನಡಿಗರು, ಕನ್ನಾಡಿನ ಪ್ರತಿನಿಧಿ, ಕನ್ನಡವನ್ನು ಪ್ರತಿಬಿಂಬಿಸುವ ಕನ್ನಡಿ. ಇವನಾರಿವ, ಇವನಾರಿವ ಎನ್ನದೆ ಇವ ನಮ್ಮವ, ಇವ ನಮ್ಮವ ಎಂದು ಕನ್ನಡ ಸಮಷ್ಟಿಪುರುಷನು ಸಮ್ಮತಿಸಿದ್ದಾನೆ. ಭಾರತದ ಉಪರಾಷ್ಟ್ರಪತಿ ಸ್ಥಾನವು ಅವರಿಗೆ ವೈಯಕ್ತಿಕವಾಗಿ ಬಂದುದಾಗಿದ್ದರೂ, ಅದು ತಮಗೇ ದೊರೆತ ಗೌರವವೆಂದು ಕನ್ನಡಿಗರು ಹೆಮ್ಮೆಪಡಬಹುದಾಗಿದೆ. ಅಂತೆಯೇ ಅವರು ಕನ್ನಡ ಉಪರಾಷ್ಟ್ರಪತಿ.



## ಅರುಹಿನ ಜ್ಯೋತಿ

ಅರುಹಿನಜ್ಯೋತಿ ಎದ್ದಿತ್ತು. ಶರೀರವನ್ನೆಲ್ಲ ತುಂಬಿತ್ತು.
ಮರವೆಯ ತನು ಹರಿಯಿತ್ತು. ಕರಣಂಗಳ ತುಂಡರಿಸಿತ್ತು.
ವಿಷಯಂಗಳ ಶಿರವ ಹರಿಯಿತ್ತು. ಇಂದ್ರಿಯಂಗಳ ದಾಳಿನಿಲಿಸಿತ್ತು.
ಪಂಚಮಹಾಭೂತಂಗಳ ಪ್ರಪಂಚವ ಪರಿಹರಿಸಿತ್ತು
ಬ್ರಹ್ಮವೇ ತಾನೆಂಬ ಕುರುಹ ಮೈಗಾಣಿಸಿತ್ತು
ತಾನೆಂಬ ಕುರುಹನಳಿದ ಅವಿರಳಸಹಜನು
ಭಕ್ತನು ನೋಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ

— ತೋಂಟದ ಸಿದ್ಧಲಿಂಗ ಯತಿಗಳು



ಲೋಕಸಭಾ ಅಧ್ಯಕ್ಷ ಶ್ರೀ ಜಿ. ಎಸ್. ಧಿಲ್ಲೋನ್‌ರೊಂದಿಗೆ ರಾಜ್ಯಸಭಾ ಅಧ್ಯಕ್ಷ (ಉಪರಾಷ್ಟ್ರಪತಿ) ಶ್ರೀ ಬಿ. ಡಿ. ಜತ್ತಿ ಅವರು



"ವಿಶ್ವಕಲ್ಯಾಣ" ಮುದ್ರಣಾಲಯದಲ್ಲಿ ಸಿಬ್ಬಂದಿಯೊಂದಿಗೆ ಶ್ರೀ ಜತ್ತಿ ಅವರು ಮುದ್ರಣಾಲಯದ ವ್ಯವಸ್ಥಾಪಕ ಶ್ರೀ ಗುರುನಾಥರಡ್ಡಿ, ಶ್ರೀ ಭೀಮರಡ್ಡಿ ಮುದ್ನಾಳ, ಶ್ರೀ ಬಿ. ಮಹಾದೇವಪ್ಪ ಅವರು ಇದ್ದಾರೆ.

# ಬೀದರ ಜಿಲ್ಲೆ ಮತ್ತು ಬಿ. ಡಿ. ಜತ್ತಿ

● ಜಿ. ಬಿ. ವಿಸಾಜಿ,
ಎಂ. ಎ.

● [ ಪ್ರೊ. ಜಿ. ಬಿ. ವಿಸಾಜಿ ಅವರು ಭಾಲ್ಕಿ ಚನ್ನಬಸವೇಶ್ವರ ಕಾಲೇಜಿನ ಕನ್ನಡ ಪ್ರಾಧ್ಯಾಪಕರು. ವಿಧ್ಯಾರ್ಥಿ ದೆಸೆಯಿಂದಲೂ ಲೇಖನ ಕಲೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ಎಂ. ಎ. ವಿದ್ಯಾರ್ಥಿಯಾಗಿರುವಾಗಲೇ ನೆಲದ ನುಡಿಯೆಂಬ ವಾರ್ಷಿಕ ಪತ್ರಿಕೆಯನ್ನು ಪ್ರಕಟಿಸತೊಡಗಿದ್ದರು. ಬೀದರ ಕನ್ನಡವು ಅದೇನು ಕನ್ನಡ ಎಂದು ಮೂಗು ಮುರಿಯುವವರ ಮೂಗು ಕೊಯ್ಯುವಂತೆ ಶ್ರೀ ವಿಸಾಜಿಯಂಥ ತರುಣ ಲೇಖಕರು ಮುಂದೆ ಬಂದು, ಶರಣರು ಸರ್ವತೋಮುಖ ಕ್ರಾಂತಿ ನಡೆಸಿದುದು ನಮ್ಮ ಕನ್ನಡದಲ್ಲಿಯೇ ಎಂದು ಸಾರಿ ಹೇಳುತ್ತಿದ್ದಾರೆ. — ಸಂ. ]

ಕರ್ನಾಟಕ ರಾಜ್ಯದಲ್ಲಿಯೇ ಬೀದರ ಜಿಲ್ಲೆ ಅತಿ ಚಿಕ್ಕದಾಗಿದೆ. ಮೂರ್ತಿ ಚಿಕ್ಕದಾದರೆ ಏನಾಯಿತು ಕೀರ್ತಿ ದೊಡ್ಡದಿದೆ. ಮಹಾನ್ ಕ್ರಾಂತಿಕಾರಿ, ಮಹಾ ಮಾನವತಾವಾದಿ ಮಹಾತ್ಮ ಬಸವಣ್ಣನವರು ಬೀದರ ಜಿಲ್ಲೆಯ ಕಲ್ಯಾಣವನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು ಬೀದರ ಜಿಲ್ಲೆಗೆ ಅಜರಾಮರ ಮಹತ್ವವನ್ನು ತಂದಿತ್ತಿದ್ದಾರೆ. ಕಲ್ಯಾಣದ ಚಾಲುಕ್ಯರು ಈ ಜಿಲ್ಲೆಯವರಾಗಿದ್ದು, ಕರ್ನಾಟಕದ — ಅಷ್ಟೇಕೆ ದಕ್ಷಿಣ ಭಾರತದ — ಸಾಹಿತ್ಯ — ಕಲೆ — ಸಂಸ್ಕೃತಿ ವರ್ಧನೆಗೆ ಅಮೂಲ್ಯ ಕಾಣಿಕೆ ಸಲ್ಲಿಸಿರುವವರಾದರೂ ಇದೆಲ್ಲ ಇತಿಹಾಸ ಪ್ರಜ್ಞ ಜನರು ಸ್ಮರಿಸುವ ವಿಷಯವಾಯಿತು. ಆದರೆ ಮಹಾನುಭಾವ ಬಸವಣ್ಣನವರು ಕರ್ನಾಟಕದ್ದು ಮಾತ್ರವಲ್ಲ; ಇಡೀ ವಿಶ್ವದ ಮಾನವಕೋಟಿಯ ಮೂಲ ಸಮಸ್ಯೆಗಳನ್ನೇ ಎತ್ತಿಕೊಂಡು ಅವುಗಳಿಗೆ ಸೂಕ್ತ ಪರಿಹಾರ ಕಂಡುಕೊಳ್ಳಲು ಯತ್ನಿಸಿದುದರಿಂದ ಶ್ರೀ ಬಸವಣ್ಣನವರ ಕಾರಣವಾಗಿ ಬೀದರ ಜಿಲ್ಲೆಯು ವಿಶ್ವದ ಜಾಗೃತ ಸ್ಥಳಗಳ ಮಾಲಿಕೆಯಲ್ಲಿ ಸ್ಥಾನಗಳಿಸಲು ಅರ್ಹತೆ ಪಡೆದಿದೆ.

ಬೀದರ ಜಿಲ್ಲೆಯ ಪ್ರತಿಷ್ಠೆ ಬಸವಣ್ಣನವರ ಪ್ರತಿಷ್ಠೆಯೊಡನೆ ಶೃಂಖಲಗೊಂಡಿವೆಯೆಂದರೆ ಸುಳ್ಳೆನಿಸಲಾರದು. ಬಸವಣ್ಣನವರನ್ನು ಮರೆತಾಗಲೆಲ್ಲ ಜನತೆ ಬೀದರ ಜಿಲ್ಲೆಯನ್ನು ಮರೆತಿದೆ; ಬಸವಣ್ಣನವರ ಜ್ಞಾಪಕ ಬಂದಾಗ ಬೀದರಿನ ಜ್ಞಾಪಕವೂ ಬಂದಿದೆ.

ಇತಿಹಾಸದ ಒಂದು ಯೋಗಾಯೋಗವೇ ಎಂದು ಹೇಳಬೇಕು. ಇಂದು ಉಪರಾಷ್ಟ್ರಪತಿಗಳಾಗಿರುವ ಶ್ರೀ ಬಿ. ಡಿ. ಜತ್ತಿ ಅವರು ಕರ್ಣಾಟಕದಲ್ಲಿ ಜನಿಸಿ ಬಸವಣ್ಣನವರ ಪರಮ ಅನುಯಾಯಿಗಳಾದರು. ಶ್ರೀ ಜತ್ತಿ ಅವರು ಬಾಲ್ಯತನದಿಂದಲೇ, ಮುಖ್ಯವಾಗಿ ವಿದ್ಯಾರ್ಥಿದೆಸೆಯಿಂದಲೇ, ಬಸವಣ್ಣನವರ ತತ್ವಗಳಿಗೆ ಮಾರು ಹೋಗಿದ್ದರು ಎಂದು ಹೇಳಲಾಗುತ್ತಿದೆ. ಎಂದರೆ ಶ್ರೀ ಜತ್ತಿ ಅವರು ಬಾಲ್ಯತನದಿಂದಲೇ ಬೀದರ ಜಿಲ್ಲೆಯತ್ತ ಆಕರ್ಷಿತಗೊಂಡಿದ್ದರೆಂದೂ ಊಹಿಸಿಬಹುದು.

## ಬಸವ ಕಲ್ಯಾಣ

ಎಲ್ಲದಕ್ಕೂ ಒಂದು ಶುಭ ಕಾಲ ಬೇಕಾಗುತ್ತದೆ. "ಬಾರದು ಬಪ್ಪದು; ಬಪ್ಪುದು ತಪ್ಪದು" ಎನ್ನುವಂತೆ ಬಹಳ ಕಾಲದವರೆಗೆ ಕೇವಲ ಶ್ರೀ ಜತ್ತಿ ಅವರ ತಲೆಯಲ್ಲಿಯೇ ಉಳಿದುಕೊಂಡಿದ್ದ ಬಸವಣ್ಣನವರು ೧೯೬೪ರಲ್ಲಿ ನಾಲಗೆಯ ಮೇಲೂ ಬಂದರು; ಹೃದಯದಾಳಕ್ಕೂ ಇಳಿದರು. ಎಂದು ಬಸವ ಸಮಿತಿಯು ಸ್ಥಾಪನೆಯಾಯಿತೋ ಅಂದು ಬೀದರ್ ಜಿಲ್ಲಾ ಅಭಿವೃದ್ಧಿ ಸಮಿತಿ ಸ್ಥಾಪನೆಯಾಯಿತೆಂದೇ ಭಾವಿಸಬಹುದು. ಶ್ರೀ ಬಿ. ಡಿ. ಜತ್ತಿಯವರ ಪ್ರಯತ್ನದ ಫಲವಾಗಿ ಬಸವ ಕಲ್ಯಾಣವು ತಾಲ್ಲೂಕ ಕೇಂದ್ರವಾದುದರಿಂದ ನಾಲ್ಕು ತಾಲ್ಲೂಕಗಳ ಜಿಲ್ಲೆಯಾಗಿದ್ದ ಬೀದರ್ ಐದು ತಾಲ್ಲೂಕಗಳ ಜಿಲ್ಲೆಯಾಯಿತು. ಖಿಲ್ಲಾ ಕಲ್ಯಾಣವೆಂಬ ಕುರೂಪನಾಮವಳಿದು ಬಸವ ಕಲ್ಯಾಣವೆಂಬ ಸುಂದರ ಹೆಸರು ಬಳಕೆಯಲ್ಲಿ ಬಂದಿತು.

೧೯೬೬ ರಲ್ಲಿ ಬಸವ ಸಮಿತಿಯ ಪಾದಯಾತ್ರೆಯು ಬಂದಾಗ ಬೀದರ ಜಿಲ್ಲೆಗೆ ಅನ್ಯ ಜಿಲ್ಲೆಗಳ ಜನರ ಮಹಾಪೂರವೇ ಬಂದಂತಾಯಿತು. ಶ್ರೀ ಜತ್ತಿ ಅವರ ಹೆಸರು ಕೇಳಿ ಸುತ್ತು ಮುತ್ತಲಿನ ತಾಲ್ಲೂಕಗಳಷ್ಟೇ ಅಲ್ಲ, ಸುತ್ತ ಮುತ್ತಲಿನ ಜಿಲ್ಲೆಗಳ ನೆರೆಯ ಆಂಧ್ರ, ಮಹಾರಾಷ್ಟ್ರಗಳ ಶಿವಶರಣರೂ ಬಸವ ಕಲ್ಯಾಣಕ್ಕೆ ಬಹು ಸಂಖ್ಯೆಯಲ್ಲಿ ಆಗಮಿಸಿದ್ದರು. ಬಸವ ಕಲ್ಯಾಣದ

ಜನತೆಗೆ ತಮ್ಮ ಸ್ಥಳದ ಮಹತ್ವ ಅರಿವಾದುದು ಬಸವ ಸಮಿತಿ ಪಾದ ಯಾತ್ರೆಯ ಬಳಿಕವೇ ಎಂದು ಹೇಳಿದರೆ ತಪ್ಪಾಗಲಾರದು.

ಶ್ರೀ ಬಿ. ಡಿ. ಜತ್ತಿ ಅವರಿಗೆ ಬಸವ ಕಲ್ಯಾಣದ ಬಗ್ಗೆ ಒಂದು ಅಲೌಕಿಕ ತಾದಾತ್ಮ್ಯ ಭಾವನೆಯಿದೆಯೆಂದು ಹೇಳಬಹುದು. ಬಹುಶಃ ಈ ಸಂಬಂಧ ಮೂಕನ ಸವಿಯಂತೆ ಇರಬಹುದು; ಕೂಸಿನ ಕನಸಿನಂತೆ ಇರಬಹುದು. ವಿವೇಕಾನಂದರಿಗೆ ಕನ್ಯಾಕುಮಾರಿ ಭೂ ಶಿರದಲ್ಲುಂಟಾದ ದಿವ್ಯಾನುಭೂತಿ ಶ್ರೀ ಜತ್ತಿ ಅವರಿಗೆ ಬಸವ ಕಲ್ಯಾಣದಲ್ಲಿ ಆಗಿದೆಯೆಂದು ಹೇಳಲಾಗುತ್ತಿದೆ. ನಮ್ಮ ರಾಜಧಾನಿಗೆ ಸಮೀಪವೇ ಆಗಿದ್ದರೆ ಶ್ರೀ ಜತ್ತಿ ಅವರು ಬಸವ ಸಮಿತಿಯ ಪ್ರಧಾನ ಕಚೇರಿಯನ್ನು ಬಸವ ಕಲ್ಯಾಣದಲ್ಲಿಯೇ ಪ್ರಾರಂಭಿಸಬಹುದಾಗಿತ್ತು. ಈಗಲೂ ಬಸವ ಸಮಿತಿಯು ಬಸವ ಕಲ್ಯಾಣವನ್ನು ಮರೆತಿಲ್ಲ. ಅಲ್ಲಿ ನಿರ್ಮಿಸುತ್ತಿರುವ ಅನುಭವ ಮಂಟಪವು ಬಸವ ಸಮಿತಿಯ ಉಪ ಕಾರ್ಯಾಲಯವೆಂಬಂತೆ ಅದರ ಧ್ಯೇಯೋದ್ದೇಶಗಳ ಪ್ರಮುಖ ಚಟುವಟಿಕೆ ಕೇಂದ್ರವಾಗಿ ಆವಿರ್ಭವಿಸಲಿದೆ. ಬಸವ ಕಲ್ಯಾಣದ ಜನಪ್ರಿಯ ವ್ಯಕ್ತಿಗಳೂ ಶ್ರೀ ಬಿ. ಡಿ. ಜತ್ತಿ ಅವರ ಆತ್ಮೀಯ ಸ್ನೇಹಿತರೂ ಆದ ಸಿದ್ಧರಾಮಪ್ಪ ಖೂಬ ಅವರು ನನ್ನ ಮುಂದೆ ಒಂದು ಕುತೂಹಲಕಾರಿ ವಿಷಯವನ್ನು ಹೊರಗೆಡಹಿದರು. ಉಪರಾಷ್ಟ್ರಪತಿಗಳಾದ ಬಳಿಕ ಶ್ರೀ. ಬಿ. ಡಿ. ಜತ್ತಿ ಅವರಿಗೆ ಕೇಂದ್ರ ವಿದೇಶಾಂಗ ಸಚಿವ ಶ್ರೀ ವೈ. ಬಿ. ಚವಾಣ ಅವರು "ಇನ್ನು ಮೇಲೆ ನವದೆಹಲಿಯೇ ನಿಮ್ಮ ವಾಸಸ್ಥಳವಾಗಬೇಕು" ಎಂದು ಹೇಳಿದಾಗ, ಶ್ರೀ. ಜತ್ತಿ ಅವರು ತಾವು ನಿವೃತ್ತರಾದ ಮೇಲೆ ಬೀದರ ಜಿಲ್ಲೆಯ ಬಸವ ಕಲ್ಯಾಣದಲ್ಲಿ ನೆಲೆಸಲು ಯೋಚಿಸಿರುವುದಾಗಿ ತಿಳಿಸಿದರಂತೆ. ಶ್ರೀ ಖೂಬ ಅವರು ತಮ್ಮ ನಿವಾಸದ ಪಕ್ಕದಲ್ಲಿಯೇ ಶ್ರೀ ಜತ್ತಿ ಅವರಿಗಾಗಿ ಗೃಹನಿವೇಶನವೊಂದನ್ನು ಕಾದಿರಿಸಿರುವರು.

## ಸುವ್ಯವಸ್ಥಿತ ನಗರ

ಶ್ರೀ ಬಿ. ಡಿ. ಜತ್ತಿ ಅವರ ಯೋಜನೆ ಪ್ರಕಾರ ೧೯೬೭ ರಲ್ಲಿ ಶ್ರೀ ಬಸವೇಶ್ವರರ ಅಷ್ಟಶತಮಾನೋತ್ಸವ ಪ್ರಪ್ರಥಮವಾದದ್ದು ಬಸವಕಲ್ಯಾಣದಲ್ಲಿ ನಡೆದ ಬಳಿಕಂತೂ ಬಸವ ಕಲ್ಯಾಣದ ಚಿತ್ರವೇ ಬೇರೆಯಾಯಿತು ಎಂದು ಹೇಳಬಹುದು. ಒಂದು ಹಳ್ಳಿಯ ಮಾದರಿಯಲ್ಲಿದ್ದ ಬಸವ ಕಲ್ಯಾಣವು ಸುವ್ಯವಸ್ಥಿತ ನಗರವಾಗಿ ಪರಿವರ್ತನಗೊಂಡಿತು. ಶಿವಶರಣರ ಗವಿಗಳಿಗೆಲ್ಲ,

ಪವಿತ್ರ ಕ್ಷೇತ್ರಗಳಿಗೆಲ್ಲ, ಕಾರುಗಳು ಓಡಬಲ್ಲ ರಸ್ತೆಗಳಾದವು. ವಿದ್ಯುದೀಕರಣ ಗೊಂಡವು. ಇತ್ತೀಚೆಗೆ ಎಸ್. ಎಸ್. ಖೂಬ ಬಸವೇಶ್ವರ ಕಾಲೇಜಾಗಿ ಬಸವ ಕಲ್ಯಾಣ ಒಂದು ಆಧುನಿಕ ನಗರವಾಗಿ ಮಾರ್ಪಟ್ಟಿದೆ. ತಮ್ಮ ಉಪ ರಾಷ್ಟ್ರಪತಿ ಸ್ಥಾನದ ಹಲವು ಮಹತ್ತರ ಜವಾಬ್ದಾರಿಗಳ ನಡುವೆಯೂ ಶ್ರೀ ಬಿ. ಡಿ. ಜತ್ತಿ ಅವರು ಶ್ರೀ ಬಸವೇಶ್ವರ ಕಾಲೇಜಿನ ಕಟ್ಟಡದ ಶಂಕು ಸ್ಥಾಪನೆಗೆ ಅಕ್ಟೋಬರ್ ೭ ರಂದು ಬಸವ ಕಲ್ಯಾಣಕ್ಕೆ ಆಗಮಿಸುತ್ತಿದ್ದುದು ಅವರ ವಿಶೇಷ ಭಕ್ತಿಯ ಪ್ರತೀಕವಾಗಿದೆ.

ಆಧ್ಯಾತ್ಮ ಒಲವನ್ನೂ ಮಾತ್ರವಲ್ಲ ಲೌಕಿಕ ಒಲವನ್ನೂ ಶ್ರೀ ಬಿ. ಡಿ. ಜತ್ತಿ ಅವರು ಕಲ್ಯಾಣ ಕರ್ನಾಟಕವೆಂಬ ಹೈದರಾಬಾದ ಕರ್ನಾಟಕ ದೊಡನೆ ಬೆಳೆಸಿಕೊಂಡಿದ್ದಾರೆ. ಜನ್ಮತಃ ಮುಂಬೈ ಕರ್ನಾಟಕದವರಾದ ಅವರು ತಮ್ಮ ಮಗಳು ಮತ್ತು ಮಗನಿಗೆ ನೆಂಟಸ್ತನವನ್ನು ಸಾವಳಗಿಯ ಸುತ್ತು ಮುತ್ತಲಿನಲ್ಲಿಯೇ ಮಾಡಬಹುದಾಗಿತ್ತು. ಬಿಜಾಪುರ ಜಿಲ್ಲೆಗೆ ಬೆಳಗಾವಿ ಧಾರವಾಡಗಳೂ ನೆರೆಯ ಜಿಲ್ಲೆಗಳಾಗಿವೆ. ಇತ್ತೀಚೆಗೆ ಬೆಂಗಳೂರಿನಲ್ಲಿಯೇ ನೆಲೆಸಿದ್ದರಿಂದ ನೆಂಟಸ್ತನವನ್ನು ಹಳೆಯ ಮೈಸೂರು ಭಾಗದಲ್ಲಿಯೂ ಮಾಡ ಬಹುದಾಗಿತ್ತು. ಆದರೂ ಅವರು ಲೌಕಿಕ ವ್ಯವಹಾರಕ್ಕೂ ಬಸವ ಕಲ್ಯಾಣದ ಪರಿಸರವನ್ನೇ ಆಯ್ದುಕೊಂಡರು. ಕಲ್ಬುರ್ಗಿಯ ಸುಪ್ರಸಿದ್ಧ ಖೂಬ ಮನೆತನಕ್ಕೆ ತಮ್ಮ ನೆಚ್ಚಿನ ಪುತ್ರಿ ಶ್ರೀಮತಿ ವಿಲಾಸವತಿಯವರನ್ನು ಧಾರೆಯೆರೆದರು. ನಮ್ಮ ಬೀದರ ಜಿಲ್ಲೆಯ ಶ್ರೀ ಪ್ರಭುಶೆಟ್ಟೆಪ್ಪ ಅಷ್ಟೂರೆ ಅವರ ಸಹೋ ದರಿ ಶ್ರೀಮತಿ ಸರಸ್ವತಿದೇವಿ ಅವರೂ ಶ್ರೀಮತಿ ವಿಲಾಸವತಿ ಅವರೂ ಒಂದೇ ಮನೆಯಲ್ಲಿ ನೆಗೆವೆಣ್ಣಿಯರಾಗಿದ್ದಾರೆ.

## ಹೈ. ಕರ್ನಾಟಕದವರು

ತಮ್ಮ ಮಗಳನ್ನು ಈ ಭಾಗಕ್ಕೆ ಕೊಡುವುದಲ್ಲದೆ ಶ್ರೀ ಜತ್ತಿ ಅವರು ತಮ್ಮ ಮಗ ಶ್ರೀ ಅರವಿಂದನಿಗೆ ಬೀದರ ಜಿಲ್ಲೆಯ ಮುಚಳಂಬ ಗ್ರಾಮದ ಶ್ರೀ ಮಾಧವರಾವ ಬಸನಾಳೆ ಅವರ ಪುತ್ರಿ ಶ್ರೀಮತಿ ಶಾರದಾಬಾಯಿ ಯನ್ನು ತಂದುಕೊಂಡಿದ್ದಾರೆ. ಅಳಿಯಂದಿರು ಮತ್ತು ಸೊಸೆಯಂದಿರು ಹಾಗೂ ಮೊಮ್ಮಕ್ಕಳ ಮೂಲಕ ಶ್ರೀ ಜತ್ತಿ ಅವರು ಈಗ ಹೈದರಾ ಬಾದ ಕರ್ನಾಟಕದವರೇ ಆಗಿದ್ದಾರೆಂದು ಹೇಳಬಹುದು.

ಶ್ರೀ ಬಿ. ಡಿ. ಜತ್ತಿ ಅವರ ಹೃದಯದಾಶಯ ಪ್ರಕಾರ ಅವರು ಬಹು ಬೇಗ ಬಸವ ಕಲ್ಯಾಣದಲ್ಲಿ ನೆಲೆಸಲಿ. ಭಕ್ತಿ ಭಂಡಾರಿ ಬಸವಣ್ಣ ನವರ ನಿಮಿತ್ತವಾಗಿ ಭಾರತದ ನಾನಾ ಭಾಗಗಳ ಶಿವಶರಣರು ಬಂದು ಕಲ್ಯಾಣದಲ್ಲಿ ನೆಲೆಸಿದಂತೆ ಶ್ರೀ ಜತ್ತಿ ಅವರ ನಿಮಿತ್ತವಾಗಿಯೂ ದೂರ ದೂರದ ವಿದ್ವಾಂಸರು ಮತ್ತು ತತ್ವಜ್ಞಾನಿಗಳು ಬಸವ ಕಲ್ಯಾಣದಲ್ಲಿ ನೆಲೆಗೊಂಡು ಅದು ಮತ್ತೊಮ್ಮೆ ಇಡೀ ಭಾರತಕ್ಕೆ ದಿವ್ಯ ಬೆಳಕನ್ನು ನೀಡುವ ಆಧ್ಯಾತ್ಮ ಕೇಂದ್ರವಾಗಲಿ. ಬಸವ ಕಲ್ಯಾಣದ ಸರ್ವತೋಮುಖ ಕ್ರಾಂತಿ ಎಲ್ಲೆಡೆಯೂ ಜರುಗಿ ಸಕಲ ಜೀವಾತ್ಮರಿಗೆ ಲೇಸುಂಟಾಗಲಿ ಎಂದು ನಾನು ಹೃತ್ಪೂರ್ವಕ ಹಾರೈಸುತ್ತೇನೆ.



## ಶರಣ – ಮಾನವ

ಉಂಬ ಬಟ್ಟಲು ಬೇರೆ ಕಂಚಲ್ಲ
ನೋಡುವ ದರ್ಪಣ ಬೇರೆ ಕಂಚಲ್ಲ
ಭಾಂಡ ಒಂದೇ, ಭಾಜನ ಒಂದೇ
ಬೆಳಗೆ ಕನ್ನಡಿ ಎನಿಸಿತ್ತಯ್ಯಾ
ಅರಿದಡೆ ಶರಣಾ ಮರೆದರೆ ಮಾನವ
ಪೂಜಿಸು ಕೂಡಲ ಸಂಗಯ್ಯನ

— ಬಸವಣ್ಣನವರು.

# ಭಾರತ ಬಾಂದಳದಿ ಕರ್ನಾಟಕ ಕೇತನ

ರಾಜಕೀಯದ ಕಮಲ ಕಾಸಾರದಲಿ ಅರಳಿ
ಮಿಂಚುತಿಹ ಮಿಸುನಿಯ ಸುಗಂಧಮಯ ಕುಸುಮದೊಲು;
ಜೀವನ ದಿಗಂತದಲಿ ಸಾಹಸ ವಿಹಂಗಮವು
ಕೀರ್ತಿ, ಸಾಧನೆಯ ಗರಿ ಬಿಚ್ಚಿ ಹಾರುವ ತೆರದಿ;
ವ್ಯಕ್ತಿ ಜೀವನ ಶುದ್ಧಿ, ರಾಜಕೀಯದಿ ಸಿದ್ಧಿ;
ಹಲವು ಸಾಹಸದ ಸಾಧನೆಯ ಕೀರ್ತಿಯ ಪಡೆದು,
ಸಾರ್ಥಕತೆಯಲಿ ನಿಮ್ಮ ಜೀವನವು ಗೆಲುವಾಯ್ತು.

ಬುದ್ಧಿಯಲಿ ಓಜಸ್ಸು, ಭಾವದಲಿ ತೇಜಸ್ಸು,
ನಿಸ್ಸೀಮ ನಿಷ್ಠೆ, ನಿಸ್ವಾರ್ಥ, ನಿಶ್ಚಲಭಾವ,
ನಿಸ್ಪೃಹ ಸೇವೆ, ನಿಚ್ಚಳ ನಿಲುಮೆ, ನಿರ್ಭಯತೆ,
ನಿರಾಡಂಬರದ ನಡೆ, ನುಡಿಯ ನಿರಹಂಕಾರ,
ಸದ್ಗುಣಗಳೇ ಬಾಳ ಬೆಳವಣಿಗೆಗಾಧಾರ;
ಸಚ್ಚರಿತೆ, ಸಜ್ಜನಿಕೆ, ಸನ್ಮತಿ, ಸದಾಚಾರ,
ಸದ್ಭಾವ, ಸೌಜನ್ಯ, ಸೌಹಾರ್ದ ಭಾವನೆಯ,
ಸದಮಲಾಂತಃಕರಣ ಶರಣ ಧರ್ಮಾಚರಣ,
ನಿತ್ಯ ಪೂಜಾಸಕ್ತಿ, ಬಸವತತ್ವದಿ ಭಕ್ತಿ,
ನುಡಿಯೊಳು ಉದಾತ್ತತೆಯು, ನಡೆಯೊಳು ಉದಾರತೆಯು,
ಸರ್ವರನು ಒಲಿದೊಲಿಸಿಕೊಳುವ ಮುತ್ಸದ್ದಿತನ,
ರಾಜಕೀಯದಲಿ ಮುನ್ನಡೆವ ಚಾಣಾಕ್ಷತನ,
ಜೀವನದ ಪ್ರಗತಿಪರ ಸದ್ಗುಣಗಳಿಂದ
ನಿಮ್ಮ ಜೀವನವನ್ನೆ ಬೆಳಗಿಸುತ ಬೆಳೆಸಿದಿರಿ;
ಸತ್ಫಲವ ಪಡೆದಿರೈ ಸದ್ವರ್ತನೆಯ ಬಿತ್ತಿ,
ಶಿವಶರಣ ಬಸವಪ್ಪ ದಾನಪ್ಪ ಜತ್ತಿ

ನಿಮ್ಮ ಜೀವನದಾರಿ, ಹಲವು ತಡೆಗಳ ತೂರಿ,
ವೈವಿಧ್ಯ ಅನುಭವದ ಸಾರಸತ್ವವ ಹೀರಿ,

ನಾಡಿನೆಲ್ಲೆಯ ಮೀರಿ, ರಾಷ್ಟ್ರದೆತ್ತರಕೇರಿ,
ಉತ್ತುಂಗಡೆಡೆ ಸಾಗುತಿದೆ ಮೇಲೆ ಮೇಲೇರಿ-
ವಾಮನನು ಮೂರು ಲೋಕವ ಮೀರಿ ಬೆಳೆದಂತೆ
ಪುಟ್ಟ ದೇಹದಿ ಬೆಟ್ಟ ಚೈತನ್ಯವೇ ತುಂಬಿ
ಸಣ್ಣ ಮೆಟ್ಟಲು ಮೀರಿ, ದೊಡ್ಡ ಮಟ್ಟಕೆ ಏರಿ
ಅಲ್ಪತೆಯ ಸಂಕುಚಿತ ಸಂಕೋಲೆಗಳ ಕಿತ್ತಿ,
ಉನ್ನತಿಯ ಶಿಖರಡೆಡೆ ಮೇಲೆ ಮೇಲಕೆ ಹತ್ತಿ,
ಉಚ್ಚತನಕೇರುತಿಹೆ ಬಸವಪ್ಪ ಜತ್ತಿ.

ಉಪರಾಷ್ಟ್ರಪತಿಯಾಗಿ ಪರಿಶೋಭಿಸುವ ನಿಮಗೆ
ರಾಷ್ಟ್ರದತ್ಯುನ್ನತಿಯ ರಾಷ್ಟ್ರಪತಿ ಪೀಠಕ್ಕೆ
ಇನ್ನು ಒಂದೇ ಪಜ್ಜೆ, ಅದುವೆ ಮುಂದಿನ ಹೆಜ್ಜೆ;
ದೈವದೊಲುಮೆಯ ಸಿದ್ಧಿರಕ್ಷೆ ಪಡೆದಿಹ ನಿಮಗೆ
ಉಚ್ಚಭಾಗ್ಯಶ್ರೀಯೆ ಬೆನ್ನಟ್ಟಿ ಬಂದಿಹುದು
ರಾಷ್ಟ್ರ ಪರಮೋಚ್ಚತೆಯ ರಾಷ್ಟ್ರಪತಿ ಪೀಠವೇ
ನಿಮಗಾಗಿ ಕಾದಿಹುದು, ಕೈಬೀಸಿ ಕರೆಯುವುದು
ಯಶವು ನಿಮ್ಮೊಟ್ಟಿಗೇ ಜೊತೆಗೂಡಿ ಬಂದಿಹುದು.

ಬಸವೇಶ್ವರನ ಶ್ರೇಷ್ಠ ಭಕ್ತರಾಗಿಹ ನೀವು
ಕರ್ನಾಟಕದ ಹೆಮ್ಮೆ, ಬಸವತತ್ವದ ಬಲ್ಮೆ,
ಕರ್ನಾಟಕದ ಕೀರ್ತಿ, ಬಸವತತ್ವದ ಸ್ಫೂರ್ತಿ,
ರಾಷ್ಟ್ರದೆತ್ತರಕೇರಿ, ಜಗಬಿತ್ತರಕೆ ಬೀರಿ
ಉಜ್ವಲಿಸುತಿದೆ ನಿಮ್ಮ ಉದ್ದಾಮ ಚೈತನ್ಯ!
ನಿಮ್ಮ ಜೀವನ ಧನ್ಯ! ಸರ್ವರಿಗು ಸನ್ಮಾನ್ಯ!!

ಬಸವತತ್ತ್ವಾದರ್ಶ ನಿಮ್ಮ ಕ್ರತುಶಕ್ತಿಯಿಂ
ಜಗದ ಉದ್ದಗಲಕ್ಕೆ ಹರಡಿ ಪ್ರಜ್ವಲಿಸಲೀ
ಬಸವಸಮಿತಿಯ ನೇತೃ, ಬಸವಸೇವೆಯ ದಾತೃ
ಬಸವ ಸೇವೆಗೆ ನಿಮ್ಮ ಜೀವ ಸವೆಯುತಲಿರಲಿ.

ಜತ್ತಿ ಬಸವಪ್ಪ ನೀನತಿ ಪುಣ್ಯ ಪುರುಷ
ನಿನ್ನಿಂದ ಕನ್ನಡಿಗರಿಗೆಲ್ಲರಿಗೂ ಹರುಷ
ಭಾರತದ ಬಾಂದಳದಿ ಕರ್ನಾಟಕ ಕೇತನ
ಹಾರುತಿದೆ ನಿಮ್ಮಿಂದ ಓ! ರಾಜ ಚೇತನಾ

---

## ● ನ. ಮ. ಕೋ. ಸೋಗಿ

● [ ಶ್ರೀ ಎನ್. ಎಂ. ಕೆ. ಸೋಗಿ ಅವರು ಹಿಂದೊಮ್ಮೆ ಉಪ ಸಚಿವರಾಗಿದ್ದರಾದರೂ ಯಾವಾಗಲೂ ಅವರು ಭಾವಿಕ ಕವಿಗಳು. ಶಿಕ್ಷಣ ಉಪಸಚಿವ ಶ್ರೀ ಸೋಗಿ ಅವರು ಉತ್ತಮ ಕವನಗಳನ್ನು ಬರೆಯುತ್ತಾರೆ ಎಂದು ಕೇಳಿದಾಗ ನಾನು ಆಶ್ಚರ್ಯಪಟ್ಟಿದ್ದೆ. ರಾಜಕಾರಣಿಯಾಗಿಯೂ ಕವಿತ್ವ ಶಕ್ತಿ ಪಡೆದುದು ಕುತೂಹಲ ಮೂಡಿಸಿದ್ದಿತು. ಆದರೆ ಶ್ರೀ ಸೋಗಿ ಅವರು ಮೂಲತಃ ಕವಿಗಳು; ಅಪ್ಪಿತಪ್ಪಿ ರಾಜಕಾರಣದಲ್ಲಿ ಪ್ರವೇಶ ಪಡೆದಿದ್ದಾರೆ ಎಂದು ಗೊತ್ತಾಗಲು ಬಹಳ ದಿನ ಬೇಕಾಗಲಿಲ್ಲ. ಸರಳ-ಸಾದಾ ವ್ಯಕ್ತಿ. ಸಮಾಜಸೇವೆ ಎಂದರೆ ಬಹಳ ಹುಮ್ಮಸ್ಸು. ಶ್ರೀ ಜತ್ತಿ ಅವರ ವ್ಯಕ್ತಿತ್ವದ ಪೂರ್ತಿ ಪ್ರಭಾವ ಶ್ರೀ ಸೋಗಿ ಅವರ ಮೇಲೆ ಆದುದನ್ನು ನಾವು ಅವರ ನಡೆನುಡಿಗಳಿಂದ ಗುರುತಿಸಬಹುದಾಗಿದೆ — ಸಂ. ]





ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ ಸೋವಿಯತ್ ರಷ್ಯದ ಹಾರ್ದಿಕಕೊಡುಗೆ



ಕು. ಅರವಿಂದ ಜತ್ತಿ ಅವರೂ ಬಸವ ಸಮಿತಿ ಪಾದಯಾತ್ರೆಯಲ್ಲಿ ಭಾಗವಹಿಸಿದ್ದರು. ಮಗನೊಂದಿಗೆ ನಿಂತು ಶ್ರೀ ಜತ್ತಿ ಅವರು ಯಾರಿಗೋ ಎರಡು ಶರಣಾರ್ಥಿಗಳನ್ನು ಹೇಳುತ್ತಿದ್ದಾರೆ.

# ಧ್ಯೇಯನಿಷ್ಠ ಶ್ರೀ ಜತ್ತಿ ಅವರು

● ಜಿ. ಬಿ. ಮಲ್ಲಾರಾಧ್ಯ, ಐ. ಎ. ಎಸ್. ( ನಿವೃತ್ತ )
ಅಧ್ಯಕ್ಷರು ಅ. ಭಾ. ವೀರಶೈವ ಮಹಾಸಭೆ

● [ ಶ್ರೀ ಜಿ. ಬಿ. ಮಲ್ಲಾರಾಧ್ಯರು ನಮ್ಮ ಕರ್ನಾಟಕದ ವರ್ಣಮಯ ವ್ಯಕ್ತಿಗಳು. ಅವರಷ್ಟು ಬಹುಮುಖ ಪ್ರತಿಭೆಯುಳ್ಳವರು ಬಹು ವಿರಳವೆಂದೇ ಹೇಳಬಹುದು. ಸರ್ಕಾರಿ ಸೇವೆಯಲ್ಲಿ ಐ. ಎ. ಎಸ್. ಅಧಿಕಾರಿಗಳಾಗಿ, ಶಿಕ್ಷಣ ಕ್ಷೇತ್ರದಲ್ಲಿ ಆಯೋಗಗಳ ಅಧ್ಯಕ್ಷರಾಗಿ, ಕ್ರೀಡಾಕ್ಷೇತ್ರದಲ್ಲಿ ಕ್ರೀಡಾಪಟುಗಳಾಗಿ, ರಾಜಕಾರಣದಲ್ಲಿ ವಿರೋಧಪಕ್ಷಗಳ ಧುರೀಣರಾಗಿ ಯಾವ ರಂಗದಲ್ಲಿಯೇ ಆಗಲಿ ತುತ್ತ ತುದಿಯ ಶಿಖರಕ್ಕೇರಿ ವಿಜೃಂಭಿಸಿದವರು. ಈಗ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿ ನಾಡಿನಲ್ಲಿ ೨೦ ಅಂಶಗಳ ಕಾರ್ಯ ಯೋಜನೆಯೊಡನೆ ನವಮನ್ವಂತರವನ್ನು ಮೂಡಿಸಲು ಹೆಣಗುತ್ತಿದ್ದಾರೆ. ಶ್ರೀ ಬಿ. ಡಿ. ಜತ್ತಿ ಅವರು ಮುಖ್ಯ ಮಂತ್ರಿಗಳಾಗಿದ್ದಾಗ ಅವರಿಗೆದುರು ವಿರೋಧಿ ಧುರೀಣರಾಗಿದ್ದ ಶ್ರೀ ಮಲ್ಲಾರ್‍ಯಾರು ಮುಕ್ತ ಪ್ರಶಂಸೆ ಮಾಡುತ್ತಿದ್ದುದು ಶ್ರೀ ಜತ್ತಿ ಅವರ ಅಪ್ರತಿಮ ಜೀವನ ಯಶಸ್ಸಾಗಿದೆ. — ಸಂ. ]

ಕೇಂದ್ರ ಸರ್ಕಾರವು ನೇಮಿಸಿದ ಮಲೆನಾಡು ಅಭಿವೃದ್ಧಿ ಸಮಿತಿಯ ಸದಸ್ಯ – ಕಾರ್ಯದರ್ಶಿಯಾಗಿ ನಾನು ೧೯೪೭–೪೮ ರಲ್ಲಿ ಶ್ರೀ ಬಿ. ಡಿ. ಜತ್ತಿ ಅವರನ್ನು ಮುಂಬೈಯಲ್ಲಿ ಭೆಟ್ಟಿಯಾಗಿದ್ದೆ. ಆಗ ಅವರು ಮುಂಬೈ ಸರ್ಕಾರದಲ್ಲಿ ಉಪ ಮಂತ್ರಿಗಳಾಗಿದ್ದರು. ನಂತರ ಮೈಸೂರು ವಿಧಾನ ಸಭೆಯಲ್ಲಿ ವಿರೋಧ ಪಕ್ಷಗಳ ಧುರೀಣನಾಗಿ ಶ್ರೀ ಜತ್ತಿ ಅವರ ಸಂಪುಟದ ವಿರುದ್ಧ ಅವಿಶ್ವಾಸ ಗೊತ್ತುವಳಿಯನ್ನು ಮಂಡಿಸುವ ಸಂದರ್ಭ ಬಂದಿದ್ದಿತು. ನಾನು ಆಗಿನ ಸರ್ಕಾರದ ವಿರುದ್ಧ ೨೯ ಅಪಾದನೆಗಳನ್ನು ಹೊರಿಸಿ ಸುಮಾರು 4½ ತಾಸು ಬಿಟ್ಟೂ ಬಿಡದೆ ಭಾಷಣ ಮಾಡಿದ್ದೆ. ಆ ಸುದೀರ್ಘ ಮತ್ತು ಉಗ್ರ ಖಂಡ

ನಾತ್ಮಕ ಭಾಷಣದಲ್ಲಿ ನಾನು ಒಂದು ಶಬ್ದವಾದರೂ ವೈಯಕ್ತಿಕವಾಗಿ ಶ್ರೀ ಜತ್ತಿ ಅವರ ವಿರುದ್ಧ ಆಡಿರಲಿಲ್ಲ. ನನ್ನ ಭಾಷಣದ ಮುಖ್ಯ ಉದ್ದೇಶವು ಜನತೆಯ ಅಭಿಪ್ರಾಯಗಳನ್ನು ಬಿಂಬಿಸುವುದು ಮತ್ತು ಸರ್ಕಾರದ ವಿವಿಧ ಇಲಾಖೆಯ ತಪ್ಪು ನೀತಿಗಳನ್ನು ಎತ್ತಿ ತೋರಿಸುವುದು ಆಗಿತ್ತು. ಎಲ್ಲ ಸಾಕ್ಷಾಧಾರಗಳು ಮತ್ತು ಅಂಕಿ – ಸಂಖ್ಯೆ ಗಳನ್ನೊಳಗೊಂಡ ನನ್ನ ತೀಕ್ಷ್ಣ ವಿಮರ್ಶಾತ್ಮಕ ಭಾಷಣ ಮುಗಿದ ಬಳಿಕ ಆ ಕಿಕ್ಕಿರಿದ ಸಭೆಯಲ್ಲಿಯೇ ಶ್ರೀಮಾನ್ ಜತ್ತಿ ಅವರು ತಾವು ಕುಳಿತ ಸ್ಥಳದಿಂದ ವಿರೋಧ ಪಕ್ಷಗಳ ಸ್ಥಳಕ್ಕೆ ಧಾವಿಸಿ ಬಂದು ನನ್ನ ಕೈಕುಲುಕಿ ವೈಯಕ್ತಿಕ ನಿಂದೆಯಿಂದ ಅತೀತವಾದ ಭಾಷಣವನ್ನು ತಾವು ಮೆಚ್ಚಿಕೊಂಡಿರುವುದಾಗಿ ತಿಳಿಸಿದರು. ಅವಿಶ್ವಾಸಗೊತ್ತುವಳಿ ಮಂಡಿಸುವಾ ಗಲೂ ನಾನು ಅನುಕರಣೀಯವಾದ ಘನತೆ ಗಾಂಭೀರ್ಯವನ್ನು ಪ್ರದರ್ಶಿಸಿ ರುವುದಾಗಿ ಹೇಳಿದರು.

### ಅಜಾತ ಶತ್ರು

ಶ್ರೀ ಜತ್ತಿ ಅವರು ಚಾಣಾಕ್ಷ ರಾಜಕಾರಣಿಗಳು ಮಾತ್ರವಲ್ಲ ಸುಸಮರ್ಥ ಆಡಳಿತಗಾರರು. ಅವರಿಗೆ ವೈರಿಗಳೆಂಬುವರೇ ಇಲ್ಲ. ಅವರು ಆಗಲೂ ಅಜಾತ ಶತ್ರುವಾಗಿದ್ದರು ಈಗಲೂ ಅಷ್ಟೆಯೇ. ತಮ್ಮ ಪ್ರಾಮಾಣಿಕತೆ, ಸಚ್ಚಾರಿತ್ರ್ಯ ಮತ್ತು ಉನ್ನತ ನೈತಿಕತೆಯಿಂದ ಅವರು ಕಾಂಗ್ರೆಸ್ ಪಕ್ಷ ದಲ್ಲಿಯೇ ವಿಭಿನ್ನರಾಗಿದ್ದಾರೆ. ನಾನು ಅವರಲ್ಲಿ ಅತಿಯಾಗಿ ಮೆಚ್ಚಿಕೊಂಡು ದೆಂದರೆ ಅವರ ತತ್ವ ನಿಷ್ಠೆ.

ಶ್ರೀ ಜತ್ತಿ ಅವರ ಸಮತೋಲನದ ಮಾನಸಿಕತೆಯೂ ಅವರ ಶ್ರೇಷ್ಠ ಗುಣವಾಗಿದೆಯೆಂದು ಹೇಳಬಹುದು. ನಾನು ಈ ಹಿಂದಿನ ೨೮ ವರ್ಷ ಗಳ ಅವಧಿಯಲ್ಲಿ ಒಮ್ಮೆಯಾದರೂ ಅವರು ಭಾವನಾ ಪರವಶರಾಗಿ ಸಿಟ್ಟಿ ಗೆದ್ದುದನ್ನು ನೋಡಿಲ್ಲ ಮತ್ತು ಯಾರ ವಿರುದ್ಧವಾದರೂ ಕಠಿಣ ಶಬ್ದ ಗಳನ್ನಾಡಿದುದನ್ನು ಕೇಳಿಲ್ಲ. ಅವರು ತಮ್ಮ ಕೈಕೆಳಗಿನ ಅಧಿಕಾರಿಗಳೊಂ ದಿಗೆ ಮತ್ತು ಸಿಬ್ಬಂದಿಯೊಂದಿಗೆ ನಡೆದುಕೊಳ್ಳುವ ವಿಧಾನವು ಅನುಕರ ಣೀಯವಾಗಬೇಕು ಮತ್ತು ಆದರ್ಶಪ್ರಾಯವಾಗಬೇಕು ಎಂದು ನಾನು ಬಗೆದಿದ್ದೇನೆ.

ಶ್ರೀ ಜತ್ತಿ ಅವರು ತಮ್ಮ ಮುಂದೆ ಎಂಥ ಬಿಕ್ಕಟ್ಟಿನ ಸಮ ಸ್ಯೆಯೇ ಬರಲಿ ಅದನ್ನು ಆಳವಾಗಿ ಮತ್ತು ವಿವಿಧ ದೃಷ್ಟಿಕೋನದಿಂದ

ದಿಂದ ಅಭ್ಯಸಿಸಿ ತಮ್ಮ ಸಹಾಯಕ ಅಧಿಕಾರಿಗಳೊಂದಿಗೆ ಮತ್ತೆ ಸಹೋದ್ಯೋಗಿಗಳೊಂದಿಗೆ ಮತ್ತು ಶಾಸಕರೊಂದಿಗೆ ಸಹ ವಿಚಾರವಿನಿಮಯ ನಡೆಸಿ ಬಹು ಸೂಕ್ತವಾದ ನಿರ್ಣಯವನ್ನು ತೆಗೆದುಕೊಳ್ಳುತ್ತಿದ್ದರು. ಶ್ರೀ ಜತ್ತಿ ಅವರ ಒಂದು ಉಲ್ಲೇಖನೀಯವಾದ ಒಂದು ವೈಶಿಷ್ಟ್ಯವೆಂದರೆ ಇತರರಿಗೆ ಮನವರಿಕೆ ಮಾಡಿಕೊಡಲಾಗಲಿ ಅಥವಾ ತಾವು ಮನವರಿಕೆ ಮಾಡಿಕೊಳ್ಳಲಾಗಲಿ ಸದಾ ಸಿದ್ಧರಿರುತ್ತಿದ್ದರು. ಇಂಥ ಸಹನಶೀಲ ಗುಣ ಉನ್ನತಾಧಿಕಾರದಲ್ಲಿದ್ದವರಲ್ಲಿ ಕಂಡು ಬರುವುದಿಲ್ಲ. ಶ್ರೀ ಜತ್ತಿ ಅವರು ಇತರರ ಅರ್ಹತೆಯನ್ನು ಗೌರವಿಸುತ್ತಾರೆ ಮಾತ್ರವಲ್ಲ ಪ್ರತಿಭೆ ಎಲ್ಲಿಯೇ ಇರಲಿ ಅದನ್ನು ಪುರಸ್ಕರಿಸುತ್ತಾರೆ. ಇನ್ನೊಂದು ಅವರ ವಿಶೇಷತೆಯೆಂದರೆ ಎದುರಾಳಿ ವ್ಯಕ್ತಿಯ ದೃಷ್ಟಿಕೋನವನ್ನು ತಿಳಿದುಕೊಳ್ಳಲು ತಮ್ಮ ಕಿವಿಗಳೆರಡನ್ನೂ ತೆರೆದಿಟ್ಟುಕೊಂಡಿರುತ್ತಾರೆ. ಈ ಉದಾತ್ತ ಗುಣವೂ ಅನೇಕ ದೊಡ್ಡವರೆನಿಸಿಕೊಂಡವರಲ್ಲಿ ಕಾಣಸಿಗುವುದಿಲ್ಲ.

## ಯಶಸ್ಸಿನ ಗುಟ್ಟು

ನನಗೆ ತಿಳಿದ ಮಟ್ಟಿಗೆ ಶ್ರೀ ಬಿ. ಡಿ. ಜತ್ತಿ ಅವರ ಯಶಸ್ಸಿನ ಗುಟ್ಟೆಂದರೆ “ ಹೊಂದಿಕೊಂಡು ಹೋಗುವುದು. ” ಸಾಮಾಜಿಕ ಪರಿಸ್ಥಿತಿಗಳು ಬದಲಾಯಿಸಿದ ಹಾಗೆ ಅವರು ಬದಲಾಗುತ್ತ ಹೋಗಿದ್ದಾರೆ. ತ್ಯಾಗ ಮತ್ತು ನಿಸ್ವಾರ್ಥತೆಯ ದುಡಿಮೆಯ ಕಡೆಗೆ ಮಾತ್ರ ಅವರು ಲಕ್ಷವಿರಿಸಿದ್ದಾರೆ. ರಾಜಕಾರಣವು ಒಂದು ಹೊಂದಾಣಿಕೆಯ ಆಟವೆಂಬುದು ಅವರಿಗೆ ಚೆನ್ನಾಗಿ ಗೊತ್ತು ಮತ್ತು ಈ ನಂಬಿಕೆಯನ್ನು ಜೀವನದ ಇತರ ಕ್ಷೇತ್ರಗಳಿಗೂ ವಿಸ್ತರಿಸಿದ್ದಾರೆ. ವೈಯಕ್ತಿಕ ಜೀವನದಲ್ಲಿ ಶ್ರೀ ಜತ್ತಿ ಅವರು ಸತ್ಯ, ಪ್ರಾಮಾಣಿಕತೆ, ಮಮತೆ, ಸಮರ್ಥತೆ ಮತ್ತು ಅಕಳಂಕ ಚಾರಿತ್ರ್ಯಗಳ ಬಲವಾದ ಪಕ್ಷಪಾತಿ ಆಗಿದ್ದಾರೆ ಆದರೆ ಸಾರ್ವಜನಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾತ್ರ ಅವರು ಹಟವಾದಿಗಳಾಗಿಲ್ಲ. ಜನಹಿತದ ದೃಷ್ಟಿಯಿಂದ ವಿರುದ್ಧ ವಿಚಾರಗಳೊಡನೆಯೂ ಹೊಂದಿಕೊಂಡು ಹೋಗಬೇಕಾಗುತ್ತದೆ ಎಂದು ನಿರ್ಧರಿಸಿಕೊಂಡಿದ್ದಾರೆ. ಬಹುಶಃ ಈ ಗುಣವು ಅವರನ್ನು ಇತರ ಮುಖ್ಯಮಂತ್ರಿಗಳಿಗಿಂತ ಮತ್ತು ಇತರ ರಾಜಕಾರಗಳಿಗಿಂತ ಮುಂದಕ್ಕೆ ಕೊಂಡೊಯ್ಯಿತೆಂದು ಭಾವಿಸಬಹುದಾಗಿದೆ.

ಶ್ರೀ ಜತ್ತಿ ಅವರು ಹೊಗಳಿಕೆ ಮತ್ತು ತೆಗಳಿಕೆಯನ್ನು ಸರಿಸಮಾನವಾಗಿ ತೆಗೆದುಕೊಳ್ಳುತ್ತಾರೆ. ಬಹುಶಃ ಈ ಗುಣ ಅವರಿಗೆ ಶರಣಸಾಹಿತ್ಯ ಅಧ್ಯಯನ

ದಿಂದಲೇ ರೂಢಿಯಾಗಿರಬೇಕು. ಅವರ ಮಾನಸಿಕ ಸ್ತಿಮಿತತ್ವ ಅತ್ಯಗಾಧವಾ ಪಪ್ಪು- ಹೊಗಳಿಕೆಯಿಂದ ಉಬ್ಬಿಹೋಗುವವರೂ ಅಲ್ಲ; ತೆಗಳಿಕೆಯಿಂದ ಕುಗ್ಗಿ ಹೋಗುವವರೂ ಅಲ್ಲ.

ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು ಹಾಕಿಕೊಟ್ಟ ಮಾರ್ಗದಲ್ಲಿ ಶ್ರೀ ಬಿ. ಡಿ. ಜತ್ತಿ ಅವರು ಭಕ್ತಿಪೂರ್ವಕವಾಗಿ ಮುಂದುವರಿದಿದ್ದಾರೆ. ಬಹು ಸಾದಾ ಮತ್ತು ಸರಳ ಜೀವನ. ಬಾಹ್ಯಾಡಂಬರಗಳಿಗೆ ಮತ್ತು ಶ್ರೀಮಂತಿಕೆ ಡೌಲು—ಅಧಿಕಾರ ದರ್ಪಗಳಿಗೆ ಮನಸೋತವರೇ ಅಲ್ಲ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅತಿ ಬಡವ ಮುಖ್ಯಮಂತ್ರಿಯೆಂದರೆ ನಾನು ನೋಡಿದ ಮಟ್ಟಿಗೆ ಶ್ರೀ ಜತ್ತಿ ಅವರೊಬ್ಬರೇ! ನನಗೆ ತಿಳಿಸಲ್ಪಟ್ಟಿದೇನಂದರೆ ಮುಖ್ಯಮಂತ್ರಿಯ ಪದವಿಹೋದನಂತರ ಬಹುಶಃ ಅವರು ನಮ್ಮ ರಾಜ್ಯದ ಅರ್ಥಮಂತ್ರಿಗಳಾಗಿರುವಾಗ ಬೆಂಗಳೂರಿನ ಬಳ್ಳಾರಿ ರಸ್ತೆಯಲ್ಲಿ ಸ್ವಂತ ಮನೆಯೊಂದನ್ನು ನಿರ್ಮಿಸಿಕೊಳ್ಳಲು ಸಿಂಡಿಕೇಟ ಬ್ಯಾಂಕಿನಿಂದ ಸಾಲ ಎತ್ತಿದರು ಮತ್ತು ಈ ಸಾಲದ ಹಣವನ್ನು ಐದು ವರ್ಷದೊಳಗಾಗಿ ಬಡ್ಡಿ ಸಹಿತ ಬ್ಯಾಂಕಿಗೆ ಕಂತುಗಳಲ್ಲಿ ಹಿಂತಿರುಗಿಸಿದರು.

## ಪವಿತ್ರ ಜೀವನ

ಶ್ರೀ ಜತ್ತಿ ಅವರು ಉನ್ನತ ನೈತಿಕತೆಯ ಸಾಕಾರಮೂರ್ತಿಯಾಗಿದ್ದಾರೆ, ಮಾತ್ರವಲ್ಲ ಬಹಳ ಪವಿತ್ರ ಜೀವನವನ್ನು ಸಾಗಿಸಿಕೊಂಡು ಬಂದಿದ್ದಾರೆ. ನಮ್ಮ ಕರ್ನಾಟಕದ ಮುಖ್ಯಮಂತ್ರಿಗಳು ಮತ್ತು ಮಂತ್ರಿಗಳಾಗಿರುವವರೆಗೆ ಸ್ವಾರ್ಥ ಲಾಲಸೆಯ ದೂರಿಗೂ ಗುರಿಯಾಗಲಿಲ್ಲ ಯಾವುದೇ ಭ್ರಷ್ಟಾಚಾರದ ಆಪಾದನೆಯನ್ನೂ ಹೊರಲಿಲ್ಲ.

ಶ್ರೀ ಜತ್ತಿ ಅವರು ಯಾವುದೇ ವಿಷಯದ ಬಗ್ಗೆ ತಮ್ಮ ಇಲ್ಲದ ಪಾಂಡಿತ್ಯವನ್ನು ಪ್ರದರ್ಶಿಸಹೋದವರೇ ಅಲ್ಲ. ತಮಗೆ ಗೊತ್ತಿಲ್ಲದ ಕೈಗಾರಿಕೆ, ವಾಣಿಜ್ಯ ಮತ್ತು ವೈಜ್ಞಾನಿಕ ವಿಷಯಗಳ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬೇಕೆಂದು ಆಶಿಪಟ್ಟವರಲ್ಲ. ಆದರೆ ಯಾರೇ ತಜ್ಞರು ಸಂಪರ್ಕದಲ್ಲಿ ಬಂದಾಗ ಸಮಾಲೋಚನೆ ಮೂಲಕ ಅವರಿಂದ ವಿಶೇಷ ವಿಷಯಗಳನ್ನು ತಿಳಿದುಕೊಳ್ಳಲು ಮತ್ತು ಅವರಿಂದ ಲಾಭ ಪಡೆಯಲು ಪ್ರಯತ್ನಿಸುವುದುಂಟು. ಈ ಒಂದು ಮನೋಪ್ರವೃತ್ತಿ ಅವರಿಗೆ ಜೀವನದಲ್ಲಿ ಸಾಕಷ್ಟು ಶ್ರೇಯಸ್ಸನ್ನು ನೀಡಿದೆಯೆಂದು ಧಾರಾಳವಾಗಿ ಹೇಳಬಹುದು.

ಶ್ರೀ ಎಸ್. ನಿಜಲಿಂಗಪ್ಪನವರ ಸಂಪುಟದಲ್ಲಿದ್ದಾಗ ಶ್ರೀ ಜತ್ತಿ ಅವರನ್ನು ಮುಖ್ಯವಾದ ಹಣಕಾಸಿನ ಶಾಖೆಯಿಂದ ಆಗ ಅಷ್ಟು ಮಹತ್ವ ಪಡೆಯದೆ ಇದ್ದ ಆಹಾರ ಶಾಖೆಗೆ ವರ್ಗಾಯಿಸಲಾಯಿತು. ನಾನು ಈ ಬಗ್ಗೆ ಅವರ ಮನೋಭಿಪ್ರಾಯಗಳನ್ನು ತಿಳಿದುಕೊಳ್ಳಲು "ಈ ಬದಲಾವಣೆಗೆ ನಿಮ್ಮ ಪ್ರತಿಕ್ರಿಯೆಗಳೇನು" ಎಂದು ಕೇಳಿದಾಗ ಶ್ರೀ ಜತ್ತಿ ಅವರಿಂದ, ನಾನು ಅತ್ಯಂತ ಅಭಿಮಾನ ಪಡುವಂತೆ ಶರಣತತ್ವಪೂರಿತವಾದ ಮಾರುತ್ತರವೇ ಬಂದಿತು. ಕಾಯಕದಲ್ಲಿ ಯಾವುದೂ ಮೇಲಲ್ಲ ಯಾವುದೂ ಕೀಳಲ್ಲ ಅಲ್ಲವೆ? ಅವರು ಹೇಳಿದರು– "ಜನಸೇವೆಯೇ ಪರಮ ಗುರಿಯಾಗಿರುವವನಿಗೆ ಎಲ್ಲ ಖಾತೆಗಳೂ ಮಹತ್ವಪೂರ್ಣವಾದವುಗಳೇ" ಶ್ರೀ ಜತ್ತಿ ಅವರು ಆ ಖಾತೆಯಲ್ಲಿಯೂ ಯಶಸ್ವಿ ಎನಿಸಿಕೊಂಡರು ಜೊತೆಗೆ ಗ್ರಾಹಕರಿಂದ, ವ್ಯಾಪಾರಿಗಳಿಂದ, ದಲ್ಲಾಳಿಗಳಿಂದ, ಕೃಷಿಕರಿಂದ–ಎಲ್ಲರಿಂದಲೂ ಪ್ರಶಂಸೆಯ ಮತ್ತು ಅಭಿನಂದನೆಯ ಮಾತುಗಳನ್ನು ಗಳಿಸಿದರು.

ಶ್ರೀ ಜತ್ತಿ ಅವರು ಭೂಸುಧಾರಣಾ ಸಮಿತಿಯ ಅಧ್ಯಕ್ಷರಾಗಿ, ನಮ್ಮ ರಾಜ್ಯದ ಭೂರಹಿತರಿಗೆ ಮತ್ತು ದಲಿತವರ್ಗದ ಜನರಿಗೆ ಸಲ್ಲಿಸಿದ ಸೇವೆಯು ಅನುಪಮವಾಗಿದೆ, ಅಪಾರವಾಗಿದೆ. ಅವರು ಸಾಮಾನ್ಯ ಬಡಜನತೆಯ ಬಗ್ಗೆ ಕಳಕಳಿಯುಳ್ಳವರಾಗಿದ್ದಾರೆಂಬುದನ್ನೇ ಆ ಸಮಿತಿಯ ವರದಿಯು ಸ್ಪಷ್ಟಪಡಿಸುತ್ತದೆ. ನಿಜವಾಗಿಯೂ ಅವರು ಆ ವಿಷಯವನ್ನು ಕರತಲಾಮಲಕ ಮಾಡಿಕೊಂಡಿದ್ದರೆಂದು ಕಾಣುತ್ತದೆ. ಆ ವರದಿಯು ಒಂದು ತಾಂತ್ರಿಕ ವಿಶ್ಲೇಷಣೆಯ ಪರಮಾದರ್ಶ ಕೃತಿಯಾಗಿದೆಯಲ್ಲದೆ ಸಮಸ್ಯಾ ಜಾಲವನ್ನು ಲೀಲಾಜಾಲವಾಗಿ ಬಿಡಿಸಿದ ಶ್ರೇಯಸ್ಸು ಅದಕ್ಕಿದೆ. ಈ ವರದಿಯು ಅಖಿಲಭಾರತ ಮಟ್ಟದಲ್ಲಿ ಎಲ್ಲರ ಗಮನ ಸೆಳೆದು ಹಲವು ತಜ್ಞರು ಮತ್ತು ಉನ್ನತಾಧಿಕಾರಿಗಳು ಮುಕ್ತಕಂಠದಿಂದ ಅದನ್ನು ಪ್ರಶಂಶಿಸಿದ್ದಾರೆ.

## ಆದರ್ಶ ಶಿವಶರಣ

ವಿರೋಧ ಪಕ್ಷ ಧುರೀಣನಾಗಿದ್ದಾಗಿನಿಂದಲೂ ಶ್ರೀ ಜತ್ತಿ ಅವರ ಮನೆಯ ಆತಿಥ್ಯವನ್ನು ಸ್ವೀಕರಿಸುವ ಸಂದರ್ಭಗಳು ನನಗೆ ಒದಗಿವೆ. ನಾನು "ಹೈಡ ಪಾರ್ಕ ಜಂಟ್ಲಮನ್" ರೀತಿಯಲ್ಲಿ ಪೋಷಾಕುಗಳನ್ನು ಧರಿಸಿದರೂ ನಾನು ಶರಣ ಸಂಪ್ರದಾಯಕ್ಕೆ ಸೇರಿದವನು ಎಂಬುದು ಶ್ರೀ ಜತ್ತಿ ಅವರಿಗೆ ಚೆನ್ನಾಗಿ ಗೊತ್ತು. ಜಂಗಮರಿಗೆ ಸಂದಾಯವಾಗಬೇಕಾದ ಗೌರವ ಮತ್ತು ಪೂಜ್ಯತೆಯನ್ನೇ ಅವರು ನನಗೆ ನೀಡುತ್ತಿದ್ದರು. ನಿಜವಾಗಿಯೂ ನಾನು ಶ್ರೀ ಜತ್ತಿ ಅವರ ನಿರಾಡಂಬರ ಮನೆಯಲ್ಲಿ ಒಬ್ಬ ಆದರ್ಶ ಶಿವಶರಣನ ಭಕ್ತಿ ಭಾವನೆಗಳ

ನ್ನೇ ಕಂಡಿದ್ದೇನೆ. ಶ್ರೀಮತಿ ಜತ್ತಿ ಅವರಂತೂ ಸಾಕ್ಷಾತ್ ಶಿವಶರಣೆಯಂತೆಯೇ ಇದ್ದಾರೆ. ಸತಿ–ಪತಿಗಳೀರ್ವರೂ ಶರಣ ಮಾರ್ಗಾನುವರ್ತಿಗಳಾಗಿ ಗುರು, ಲಿಂಗ, ಜಂಗಮಗಳ ತ್ರಿವಿಧ ದಾಸೋಹವನ್ನು ಬಹುನಿಷ್ಠೆಯಿಂದ ನಡೆಸುತ್ತಾರೆ.

ಶ್ರೀ. ಬಿ. ಡಿ. ಜತ್ತಿ ಅವರು ಪಾಂಡಿಚೇರಿಯಲ್ಲಿ ಉಪರಾಜ್ಯಪಾಲರಾಗಿದ್ದಾಗ ಅವರನ್ನು ಭೇಟಿಯಾಗಿ ಅವರು ಒಂದು ಬೃಹತ್ ರಾಜ್ಯದ ರಾಜಪಾಲರು ಯಾವಾಗ ಆಗಬಲ್ಲರೆಂದೂ ಇದ್ದುದರಲ್ಲಿಯೇ ತೃಪ್ತಿ ಪಟ್ಟುಕೊಳ್ಳುವುದು ಎಲ್ಲಿಯವರೆಗೆಂದೂ ಕೇಳಿದೆನು. ಆಗಲೂ ಶ್ರೀ ಜತ್ತಿ ಅವರು ತತ್ವ ಭರಿತರಾಗಿಯೇ ಉತ್ತರ ನೀಡಿದರು. ದೈವ ನಿಯಾಮಕದಲ್ಲಿ ತಮಗೆ ವಿಶ್ವಾಸವಿರುವುದಾಗಿಯೂ “ ಬಾರದು ಬಪ್ಪದು ಬಪ್ಪದು ತಪ್ಪದು ” ಎಂಬುದು ಸುಳ್ಳಲ್ಲವೆಂದೂ ಪ್ರತಿಪಾದಿಸಿದರು. ಪಾಂಡಿಚೇರಿಯ ಉಪರಾಜ್ಯಪಾಲರಾಗಿ ಅವರು ಅರವಿಂದ ಆಶ್ರಮದ ಸಂಪರ್ಕದಲ್ಲಿ ಬಂದುದು ಅವರ ಜೀವನದ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಮಹರ್ಷಿ ಅರವಿಂದರ ದರ್ಶನದಲ್ಲಿ ಶ್ರೀ ಜತ್ತಿ ಅವರು ನಮ್ಮ ಶಿವಶರಣರು ಹಾಗೂ ಪಂಚಾಚಾರ್ಯರು ಬೋಧಿಸಿದ ವೀರಶೈವ ಧರ್ಮದ ಮೂಲ ಸಿದ್ಧಾಂತಗಳನ್ನೇ ಕಂಡರು. ಪಾಂಡಿಚೇರಿ ಆರೋವಿಲ್ಲ ಮಾದರಿಯಲ್ಲಿಯೇ ಬೆಂಗಳೂರು ಸಮೀಪದ ಕೆಂಗೇರಿ ಬಳಿ ಬಸವಾಶ್ರಮವೆಂಬ ಅಂತರರಾಷ್ಟ್ರೀಯ ನಗರವನ್ನು ನಿರ್ಮಿಸುವ ಯೋಜನೆ ಬಗ್ಗೆ ನನ್ನೊಡನೆ ಚರ್ಚೆನಡೆಸಿದರು. ಉದ್ದೇಶಿಸಿತ ಈ ಆಶ್ರಮವು ವಿದೇಶಿಯರ ಗಮನ ಸೆಳೆಯಬೇಕೆಂಬುದು ಅವರ ಮಹದಾಶಯವಾಗಿದೆ.

## ಅಭಿಮಾನಾಸ್ಪದ

ಉಪರಾಷ್ಟ್ರಪತಿಗಳಾದ ಬಳಿಕ, ಅವರು ಅಧ್ಯಕ್ಷಸ್ಥಾನವಹಿಸುವ ರಾಜ್ಯ ಸಭೆಯ ಕಾರ್ಯಕಲಾಪಗಳನ್ನು ನಾನು ಬಹು ಸೂಕ್ಷ್ಮವಾಗಿ ಗಮನಿಸಿದ್ದೇನೆ. ಆ ಸಭೆಯ ಎಲ್ಲ ಪಕ್ಷಗಳ ಧುರೀಣರಿಗೆ ಶ್ರೀ ಜತ್ತಿ ಅವರು ಬಹುಬೇಕಾಗಿದ್ದಾರೆಂಬ ವಿಷಯ ನಮ್ಮೆಲ್ಲರಿಗೂ ಅಭಿಮಾನಾಸ್ಪದವಾಗಿದೆ. ಸಭೆಯ ಕಲಾಪಗಳು ಸುಸೂತ್ರವಾಗಿ ಸಾಗುತ್ತವೆ ಮಾತ್ರವಲ್ಲ ಅಲ್ಲಿ ಪಕ್ಷಗಳ ಜಿಕ್ಕಾಟವೇ ಕಂಡುಬಂದಿಲ್ಲ.

ಅಧ್ಯಕ್ಷತೆಯ ದೃಢ ನಿರ್ಧಾರದೊಡನೆ ಚಾಣಾಕ್ಷತನವೂ ಅಲ್ಲಿ ಕಂಡುಬರುತ್ತದೆ. ಅವರು ಕೊಡುವ ತೀರ್ಪುಗಳು ಸಮರ್ಥನೀಯವೂ ನ್ಯಾಯಯುತವೂ, ನಿಷ್ಪಕ್ಷಪಾತವೂ ಆಗಿರುತ್ತವೆಯಲ್ಲದೆ ಆದರ್ಶ ಪ್ರಜಾಪ್ರಭುತ್ವದ ತತ್ವಗಳಿಗ

ಗನುಗುಣವಾಗಿದ್ದು ಸತ್ಪರಂಪರೆಯ ದ್ಯೋತಕಗಳಾಗಿರುತ್ತವೆ. ಆಳುವ ಪಕ್ಷದವರೇ ಆಗಲಿ ವಿರೋಧ ಪಕ್ಷದವರೇ ಆಗಲಿ ಅಧ್ಯಕ್ಷರೊಡನೆ ವಾದ ಬೆಳೆಸಲು ಅಲ್ಲಿ ಆಸ್ಪದವೇ ಇರುವುದಿಲ್ಲ. ಅನುಭವ ವೃದ್ಧನಾಯಕರು ಮತ್ತು ಸಂಸದ್ಸದಸ್ಯರು ಶ್ರೀ ಜತ್ತಿ ಅವರನ್ನು ಬಹಳ ಗೌರವದಿಂದ ಕಾಣುತ್ತಾರೆ. ರಾಜ್ಯಸಭೆಯ ಅಧ್ಯಕ್ಷರಾಗಿ ಶ್ರೀ ಜತ್ತಿ ಅವರು ಪಾರ್ಲಿಮೆಂಟಿನ ಸತ್ಸಂಪ್ರದಾಯಗಳನ್ನು ಕಾಯ್ದು ಕೊಳುವುದಲ್ಲದೆ ತಾವೊಬ್ಬರು ಕಾರ್ಯ ಕುಶಲಿಗಳೆಂದು ತೋರಿಸಿಕೊಳ್ಳುತ್ತಿದ್ದುದು ನಿಜವಾಗಿಯೂ ಅಭಿನಂದನೀಯ ಸಂಗತಿಯಾಗಿದೆ.

ಶ್ರೀ ಜತ್ತಿ ಅವರು, ಉಪರಾಷ್ಟ್ರಪತಿ ಸ್ಥಾನದಂತಹ ಗೌರವಯುತ ಮತ್ತು ಘನತೆಯುಕ್ತ ಸ್ಥಾನಗಳನ್ನು ಸತತ ಪರಿಶ್ರಮದ ಮೂಲಕ, ಸರ್ವ ಸಮರ್ಪಣಾಭಾವದ ಮೂಲಕ, ನಿಷ್ಠಾಪೂರ್ವಕ ಸೇವೆಯ ಮೂಲಕ, ಸರ್ವರ ಭವಿತವ್ಯವನ್ನು ರೂಪಿಸುವ ಸರ್ವಶಕ್ತ ದೇವರಲ್ಲಿ ಅಚಲ ವಿಶ್ವಾಸವಿರಿಸುವ ಮೂಲಕ ಪಡೆದಿದ್ದಾರೆಂದು ಧಾರಾಳವಾಗಿ ಹೇಳಬಹುದು. ಆಜನ್ಮ ಸಂಸ್ಕಾರದಿಂದ ಹಾಗೂ ಸಹಜ ಭಾವನೆಗಳಿಂದ ಅವರು ಮುಖ್ಯವಾಗಿ ಧರ್ಮ ನಿಷ್ಠರು. ನಮ್ಮ ಧಾರ್ಮಿಕ ಗ್ರಂಥಗಳು ವಿಧಿಸುವ ದೈನಂದಿನ ಆಚಾರಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಆದರೂ ಅವರು ಧಾರ್ಮಿಕ ಕಟ್ಟಳೆಗಳಾಗಲಿ ಬಾಹ್ಯ ನಡುವಳಿಕೆಗಳಾಗಲಿ ಕೇವಲ ಸಾಧನಗಳೇ ಹೊರತು ಅವೇ ಧ್ಯೇಯವಲ್ಲವೆಂದು ಬಲವಾಗಿ ನಂಬುತ್ತಾರೆ. ಜೀವನದ ಪರಮೋದ್ದೇಶವು ಮೋಕ್ಷವಾಗಿದೆ ಮತ್ತು ಐಕ್ಯಸ್ಥಲವು ನಮ್ಮ ಅಂತಿಮ ಲಕ್ಷವಾಗಿರಬೇಕೆಂಬುದು ಅವರ ದೃಢ ಪ್ರತಿಪಾದನೆ.

॥ ಸತ್ಯಂ ಶಿವಂ ಸುಂದರಂ ॥



# ಜಸದ ಪುತ್ಥಳಿ ಜತ್ತಿ

–೧–

ಕನ್ನಡಾಂಬೆಯು ಭಾರತಾಂಬೆಗೆ
ಕೊಟ್ಟ ರತ್ನವು ಜತ್ತಿಯು
ಉನ್ನತೋನ್ನತ ಗುರಿಯ ಸಾಧನೆ
ಜತ್ತಿ ಜೀವನ ವೃತ್ತಿಯು

–೨–

ಸದುವಿನಯವು ಸದಾಶಿವನ ಕೃಪೆ
ಎಂಬ ಬಸವನ ವಾಕ್ಯವು
ಹೃದಯ ಬುದ್ಧಿಗಳೆರಡು ಅರಳಿಹ
ಜತ್ತಿ ಗುಣ ಮಾಣಿಕ್ಯವು

–೩–

ಇಲ್ಲಿ ಸಲ್ಲುವವರಲ್ಲಿ ಸಲ್ಲುವ–
ರೆಂಬ ಕಲ್ಯಾಣದ ನುಡಿ
ಎಲ್ಲ ಕಾರ್ಯಗಳಲ್ಲಿ ಧ್ವನಿಸುವ
ಜತ್ತಿ ಬಾಳಿನ ಮುನ್ನುಡಿ

–೪–

ಎಲ್ಲರೊಡನೆಯು ಬೆಲ್ಲದಚ್ಚಾ–
ಗಿರುವ ಜತ್ತಿಯ ಪಟ್ಟದು
ಎಲ್ಲಿ ಹೋದಲ್ಲೆಲ್ಲ ಜಯಮಾ–
ಲೆಯನು ಪಡೆಯುವ ಗುಟ್ಟದು

-೫-

ಜಸದ ಕಾಂತಿಯ ಭಸಿತ ಧರಿಸಿದ
ಕಿರಿಯ ಮುದ್ದಿನ ಮೂರುತಿ
ಜಸದ ಪುತ್ಥಳಿ ಎಂದು ಜತ್ತಿಯ
ಎತ್ತಿಕೊಂಡಳು ಭಾರತಿ !

● ಗಂಗಪ್ಪ ವಾಲಿ

[ ಶ್ರೀ ಗಂಗಪ್ಪ ವಾಲಿ ಅವರ ಹೆಸರು ಕನ್ನಡ ಕಾವ್ಯ ಕ್ಷೇತ್ರದಲ್ಲಿ ಬಹುದಿನಗಳಿಂದಲೂ ಬಹುಶ್ರುತವಿದೆ. ಶ್ರೀ ವಾಲಿ ಅವರು ಉತ್ತಮ ಕವಿಗಳಾಗಿದ್ದಂತೆ ಉತ್ತಮ ಗಾಯಕರೂ ಆಗಿದ್ದಾರೆ. ಸಂಗೀತ ಮತ್ತು ಸಾಹಿತ್ಯ ಒಂದೆಡೆಯೇ ಸಿಗುವುದು ದುರ್ಲಭವಾದುದಾದರೂ ಶ್ರೀ ವಾಲಿಯವರಲ್ಲಿ ಮಾತ್ರ ಪೂರ್ವ ಸುಕೃತವೆಂಬಂತೆ ಮೇಳೈಸಿದೆ. ಸಂತೆಯೊಳಗೊಂದು ಮನೆಯಮಾಡಿ ಶಬ್ದ ಜಾಲಕ್ಕೆ ನಾಚಿದಡೆ ಎಂತಯ್ಯಾ ಎಂಬಂತೆ ಶ್ರೀ ವಾಲಿ ಅವರು ಸಂತೆಯಲ್ಲಿಯೂ ಕಾವ್ಯಾರಾಧನೆ ಮುಂದುವರಿಸಿದ್ದಾರೆ; ಏಕೆಂದರೆ ಅವರು ಕಾಯಕದಿಂದ ಕಿರಾಣಿ ವ್ಯಾಪಾರಿಗಳು — ಸಂ. ]



# ನನಗೆ ಧೃವತಾರೆಯಾಗಿ ನಿಂತ ಶ್ರೀ ಜತ್ತಿ

● ಡಾ. ಎಸ್. ಎಸ್. ನರಸಣಗಿ

● [ ಡಾ. ಎಸ್. ಎಸ್. ನರಸಣಗಿ ಅವರು ಕಲಬುರ್ಗಿಯ ಸುಪ್ರಸಿದ್ಧ ಶಸ್ತ್ರ ಚಿಕಿತ್ಸೆ ತಜ್ಞರು. ವೈದ್ಯಕೀಯ ನೈಪುಣ್ಯದಲ್ಲಿ ಪ್ರಚಂಡ ಆತ್ಮವಿಶ್ವಾಸಿಗಳಾದರೂ ನಿಗರ್ವಿಗಳು ಮತ್ತು ಆ ಕಾಯಕದಲ್ಲಿ ಪಾವಿತ್ರ್ಯವನ್ನು ದರ್ಶನ ಮಾಡಿಕೊಂಡವರು. ಶ್ರೀ ಬಿ. ಡಿ. ಜತ್ತಿ ಅವರ ಬಗ್ಗೆ ಬಹಳ ಮುಂಚಿನಿಂದಲೇ ಗೌರವಾದರಗಳನ್ನು ಹೃದಯದಲ್ಲಿ ತುಂಬಿಕೊಂಡಿದ್ದಾರೆ. ಶ್ರೀ ಬಿ. ಡಿ. ಜತ್ತಿ ಅವರನ್ನು ಕಲಬುರ್ಗಿಗೆ ಬರಮಾಡಿಕೊಂಡು, ಸನ್ಮಾನಿಸಿ, ಸಂಭಾವನಾ ಗ್ರಂಥವೊಂದನ್ನು ಅರ್ಪಿಸಬೇಕೆಂಬ ಹಂಬಲ ಬಹಳ ದಿವಸಗಳಿಂದಲೂ ಮನೆ ಮಾಡಿದ್ದಿತು. ಅವರ ಹಂಬಲಕ್ಕೆ ಸನ್ಮಾನ ಸಮಿತಿಯ ಅಧ್ಯಕ್ಷರಾದ ಶ್ರೀ ವಿಶ್ವನಾಥರಡ್ಡಿ ಮುದ್ನಾಳ ಅವರ ಬೆಂಬಲವೂ ಲಭಿಸಿದುದರಿಂದ ಅವರ (ಡಾಕ್ಟರರ) ಸಂಚಾಲಕತ್ವದಲ್ಲಿಯೇ ಈ ಗ್ರಂಥವು ಹೊರ ಬರುತ್ತಿದೆ. ಡಾ. ನರಸಣಗಿ ಅವರು ಲೇಖಕರಲ್ಲ. ಲೇಖನಕ್ಕೆ ಬೇಕಾದುದು ಸಾಹಿತ್ಯಕ್ಕಿಂತ ಹೆಚ್ಚಿಗೆ ಸ್ಫೂರ್ತಿ. — ಸಂ. ]

೧೯೫೪ ರ ಅಗಷ್ಟ ತಿಂಗಳದು. ಆಗ ಮುಂಬಯಿ ಸರಕಾರದ ಮಂತ್ರಿ ಮಂಡಳದಲ್ಲಿ ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಆರೋಗ್ಯ ಖಾತೆಯ ಉಪ ಮಂತ್ರಿಗಳಾಗಿದ್ದರು. ಅದೇ ವೇಳೆಗೆ ನಾನು ಕರ್ನಾಟಕ ವಿಶ್ವವಿದ್ಯಾಲಯದಿಂದ ಮೊದಲನೇ ತರಗತಿಯಲ್ಲಿ ಇಂಟರಸಾಯನ್ಸ ಮುಗಿಸಿಕೊಂಡು ವೈದ್ಯಕೀಯ ವಿದ್ಯಾಭ್ಯಾಸ ಮಾಡಲು ಪುನಾಕ್ಕೆ ಹೋಗಿದ್ದೆ. ಆಗಲೇ ಅವರ ಹೆಸರನ್ನು ಕೇಳಿದ್ದು ಮತ್ತು ಪರಿಚಯ ಮಾಡಿಕೊಂಡದ್ದು. ಪೂನಾ ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ಅಭ್ಯಾಸ ಮಾಡುತ್ತಿರುವಾಗ ನನ್ನಂತಹ ಅನೇಕ ವಿದ್ಯಾರ್ಥಿಗಳಿದ್ದರು. ನನ್ನ ಮೇಲೆ ಶ್ರೀ ಬಿ. ಡಿ. ಜತ್ತಿಯವರ ಪ್ರೀತಿ ವಿಶ್ವಾಸ ಅಪಾರ, ಅಸದಳ. ಬಹಳ ಸಮೀಪಕ್ಕೆ ಕರೆದು ನಾನು ಕರ್ತವ್ಯಚ್ಯುತಿಯಾಗದಂತೆ ಅಭ್ಯಾಸ ಮಾಡಲು ಉಪದೇಶ

ಕೊಡುತ್ತಿದ್ದರು. ಅವರ ಸರಳ ಸಾದಾ ಜೀವನ ಕಂಡು ನಾನು ಅತ್ಯಂತ ಮಾರು ಹೋಗಿದ್ದೆ. ಹೀಗಾಗಿ ನಮ್ಮಿಬ್ಬರಲ್ಲಿ ನಾನು ವಿದ್ಯಾರ್ಥಿಯಾಗಿರುವಾಗಲೇ ಅನ್ಯೋನ್ಯ ಆತ್ಮೀಯತೆ ಬೆಳೆಯಿತು. ಒಂದು ಶುಭಪ್ರಸಂಗದಲ್ಲಿ ತಮ್ಮ ಆಶೀರ್ವಾದವಿದ್ದರೆ ನಾನು ಪ್ರಥಮ ಶ್ರೇಣಿಯಲ್ಲಿ ಬರುವದು ಏನು ದೊಡ್ಡ ಮಾತಲ್ಲ ಎಂದು ನಾನು ಉಚ್ಚರಿಸಿದಾಗ ಅವರು "ಶ್ರೇಷ್ಠದರ್ಜೆಯ ವೈದ್ಯರಾಗಿ ನಾಳಿನ ನಾಡಿನ ಪ್ರಜೆಗಳ ಯೋಗಕ್ಷೇಮ ನೋಡಿಕೊಳ್ಳುವದರಲ್ಲಿ ಮೊದಲಿಗನಾಗಬೇಕು." ಎಂದು ಹೇಳಿದರು. ಇದು ಆಜ್ಞೆಯೂ ಹೌದು; ಆಶೀರ್ವಾದವೂ ಹೌದೆನಿಸಿತು ಆಗ ನನಗೆ.

## ಹಿತವಚನ

೧೯೫೬ ರಲ್ಲಿ ಮೈಸೂರು ಪ್ರಾಂತ ರಚನೆಯಾದನಂತರ ನಾನು ಮಹಾರಾಷ್ಟ್ರ ದಲ್ಲಿ ಉಳಿದೆ; ಶ್ರೀಮಾನ್ ಜತ್ತಿಯವರನ್ನು ಬೆಂಗಳೂರಿಗೆ ಹೋಗಿ ಕಾಣುವದು ಅನೇಕ ಕಾರಣಗಳ ಮೂಲಕ ಆಗಲಿಲ್ಲ. ಅವರ ಹರಕೆಯೋ, ದೇವರ ಅನುಗ್ರ ಹವೋ ಹಂತ ಹಂತವಾಗಿ ಎಂ. ಬಿ. ಬಿ. ಎಸ್. ಪದವಿಯನ್ನು ಪೂನಾ ವಿಶ್ವ ವಿದ್ಯಾಲಯದಿಂದ ಎಂ. ಎಸ್. ಪದವಿಯನ್ನು ಮುಂಬಯಿ ವಿಶ್ವವಿದ್ಯಾಲಯದಿಂದ ಗಳಿಸಿ ಮುಂದೇನು ಮಾಡಬೇಕೆಂದು ಚಿಂತೆಯಲ್ಲಿದ್ದಾಗ ಮತ್ತೆ ಶ್ರೀ ಬಿ. ಡಿ. ಜತ್ತಿ ಯವರನ್ನು ೧೯೬೩ ರಲ್ಲಿ ಕಾಣುವ ಪ್ರಸಂಗ ಒಂದಿತು. ಆಗ ಅವರು ಮೈಸೂರ ರಾಜ್ಯದ ಅರ್ಥಮಂತ್ರಿಗಳಾಗಿದ್ದರು. ಅವರು ಥಟ್ಟನೇ ನನ್ನನ್ನು ಗುರುತಿಸಿ ಮಾತನಾಡಿಸಿದರು. "ಸರ್ ತಮ್ಮ ಆಶೀರ್ವಾದದಿಂದ ನಾನು ಈ ವಿದ್ಯಾಭ್ಯಾಸ ವನ್ನು ಒಳ್ಳೇ ರೀತಿಯಿಂದ ಮುಗಿಸಿದ್ದೇನೆ" ಎಂದಾಗ "ತಮ್ಮಾ! ಯಾವುದೇ ಒಂದು ದೊಡ್ಡ ಕೆಲಸವಾದಾಗ ಅದನ್ನು ದೇವರೇ ಮಾಡುತ್ತಾನೆ ಅಥವಾ ಅದು ದೇವರ ಪ್ರೇರಣೆಯಿಂದೇ ಆಗುತ್ತದೆ" ಎಂದು ಹಿತವಚನವನ್ನು ಹೇಳಿ ನನ್ನಲ್ಲಿ ಸೌಜನ್ಯತೆಯನ್ನು ತಂದುಕೊಟ್ಟರು. ಅವರು ತಮ್ಮ ಮಹತ್ವದ ವೇಳೆಯನ್ನು ಖರ್ಚುಮಾಡಿ ನನ್ನ ಜೊತೆಯಲ್ಲಿ ಸವಿಸ್ತಾರವಾಗಿ ಚರ್ಚೆಮಾಡಿ ನನಗೆ ಧ್ರುವ ತಾರೆಯಾಗಿ ನಿಂತು ನನ್ನ ಬಾಳಿನ ಗುರಿಯನ್ನು ಬೆರಳು ಮಾಡಿ ತೋರಿಸಿದರು.

ನಾನು ಅದೇ ರೀತಿಯಾಗಿ, ಶ್ರೀ ಶಿವಶರಣರ ತಪೋಬೀಡಾದ ಕಲಬುರ್ಗಿ ಯಲ್ಲಿ ವೈದ್ಯಕೀಯ ವೃತ್ತಿಯನ್ನು ಪ್ರಾರಂಭಿಸಿದೆ. ಅದು ಕೇವಲ ದುಡ್ಡಿಗಾಗಿ ಮತ್ತು ದುಡ್ಡಿದ್ದವರ ಸಲುವಾಗಿ ಎಂದು ನೆನೆಸಿಕೊಂಡಾಗ, ಬಡತನದ ಬಾಳಿನಲ್ಲಿ ನಾನು ಬೆಳೆದು ಬಂದದ್ದನ್ನು ನೋಡಿದಾಗ, ನಾನು ಅಂಥ ಬಡವರಿಗೆ ಯಾವ ಸೇವೆಯನ್ನು ಸಲ್ಲಿಸುತ್ತಿಲ್ಲ ಎಂಬ ವೇದನೆ ನನ್ನನ್ನು ಕೊರಗಿಸುತ್ತಿತ್ತು. ಆಗ

ಶ್ರೀಮಾನ್ ಬಿ. ಡಿ. ಜತ್ತಿಯವರು ಕಲಬುರ್ಗಿಗೆ ಬಂದಿದ್ದರು. ಇದೆಲ್ಲವನ್ನು ಬಿತ್ತರಿಸಿದೆ. ಅವರು ಮುಂದೆ ನನಗೆ ಸಹಾಯಮಾಡಿ ಸರಕಾರಿ ದವಾಖಾನೆಯಲ್ಲಿ ಗೌರವ ಸರ್ಜನನ್ನಾಗಿ ಮಾಡಿದರು. ಅವರ ಅನುಗ್ರಹದಿಂದ ನಾನು ಕಲಬುರ್ಗಿಯ ಸರಕಾರಿ ಆಸ್ಪತ್ರೆಯಲ್ಲಿ ವೈದ್ಯಕೀಯ ಸೇವಾದಾಸೋಹವನ್ನು ಮಾಡುತ್ತಲಿದ್ದೇನೆ. ಬಡವರ ಸೇವೆ ಮಾಡಿ ನನ್ನ ಮನದ ದುಗುಡ ಕಳೆದುಕೊಂಡು ಹಾಯಾಗಿರಲು ಮಾರ್ಗ ತೋರಿಸಿದ ಶ್ರೀ ಬಿ. ಡಿ. ಜತ್ತಿಯವರನ್ನು ನೆನೆಯದೆ ಇರಲಾರೆ.

ಅವರು ಆಹಾರ ಮಂತ್ರಿಗಳಾಗಿದ್ದಾಗ ಮತ್ತು ಪಾದ ಯಾತ್ರೆ ಮಾಡುತ್ತಿದ್ದಾಗ ಅವರಿಗೂ ನನಗೂ ನಿಕಟ ಸಂಬಂಧ ಬಂದಿತು. ಅದು ಅವರ ವಿಚಾರ, ನಡೆ ನುಡಿಗಳನ್ನು ಅರ್ಥಮಾಡಿಕೊಳ್ಳಲು ಒಂದು ಸುಸಮಯವಾಗಿದ್ದಿತು. ಮಂತ್ರಿಗಳಾಗಿದ್ದಾಗ ಅವರ ಮನೆಗೆ ಹೋದರೆ ತಾವೇ ಬಂದು ಬಾಗಿಲು ತೆರೆಯುವದು, ತಾವೇ ಕಪ್ಪಿನಲ್ಲಿ ಚಹಾ ತಂದು ಕೊಡುವದನ್ನು ನೋಡಿದಾಗ ಅವರು ನಡೆಯಲ್ಲಿ "ಅತಿಥಿ ದೇವೋಭವ" ಎನ್ನುವದನ್ನು ಆಚರಿಸುತ್ತಿದ್ದಾರೆ ಎಂದು ಸಂತೋಷ ಪಡುತ್ತಿದ್ದೆ; ನಾನು ಹಾಗೆ ಆಗಬೇಕೆಂದು ಗುರಿಯಿಡುತ್ತಿದ್ದೆ. ಅಂದಿನಿಂದಲೇ ಅವರ ಬಗ್ಗೆ ನನಗೆ ತುಂಬ ಆದರ, ಗೌರವ, ಪ್ರೀತಿ, ವಿಶ್ವಾಸ. ಅವರ ಸರಳ, ಸಾದಾ, ಸಾತ್ವಿಕ ಜೀವನ, ನಿರಾಡಂಬರ ವ್ಯಕ್ತಿತ್ವ ನನ್ನ ಮೇಲೆ ಅಗಾಧವಾದ ಪರಿಣಾಮ ಬೀರಿವೆ. ಭಾರತ ದೇಶದ ಪ್ರಜೆಗಳು ಶ್ರೀ ಬಿ. ಡಿ. ಜತ್ತಿಯವರಂತೆ ಸಾದಾ ಜೀವನ, ಉದಾತ್ತ ಚಿಂತನ ಮಾಡುವವರಾದರೆ ನಾವು ಆಗ ಮಾತ್ರ ದೊಡ್ಡ ದೇಶದ ದೊಡ್ಡ ಜನಾಂಗವಾಗುತ್ತೇವೆ ಎಂದು ಭಾವಿಸುವವರಲ್ಲಿ ನಾನು ಒಬ್ಬ.

## ಅವರ್ಣನೀಯ ಸೇವೆ

ಶ್ರೀ ಬಿ. ಡಿ. ಜತ್ತಿಯವರಲ್ಲಿ ಸತ್ಯ, ಶಾಂತಿ, ಪ್ರಾಮಾಣಿಕತೆ, ಸತತ ದುಡಿತ ಹುಟ್ಟಿನಿಂದಲೇ ಬೆನ್ನಟ್ಟಿ ಬಂದಿವೆ. ಅವರು ಹತ್ತಕ್ಕೆ ಹಣಿಯದವರು ಹನ್ನೊಂದಕ್ಕೆ ಮಣಿಯದವರು. ಅವರು ಏನೇ ಕೆಲಸ ಮಾಡಲಿ ಅದು ತಮ್ಮದೇ ಆದ ಹಿಡಿತದಲ್ಲಿ ಗುಟ್ಟಿನಲ್ಲಿ ನಡೆದು ಜನತೆಯ ಕಲ್ಯಾಣ ಬಯಸುವವರು. ಇಂತಹ ಸದುದ್ದೇಶ, ಸದ್ಹೇತು ಇಟ್ಟುಕೊಂಡು ಶ್ರೀ ಬಿ. ಡಿ. ಜತ್ತಿಯವರು ಮುಂಬಯಿ ಸರಕಾರದಲ್ಲಿ ಅಪಾರವಾದ, ಅವರ್ಣನೀಯವಾದ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಪುನರ್ವಿಂಗಡಣೆಯಾದ ನಂತರ ಕರ್ನಾಟಕಕ್ಕೆ ಕಾಲಿರಿಸಿ, ವಿಶಾಲ ಮೈಸೂರು ರಾಜ್ಯದ ಮುಖ್ಯ ಮಂತ್ರಿ

ಗಳಾಗಿ ಕನ್ನಡ ನಾಡಿನ ಸರ್ವತೋಮುಖ ಬೆಳವಣಿಗೆಗಾಗಿ ಅವಿಶ್ರಾಂತ ಹೋರಾಡಿದ್ದಾರೆ. ಅವರಿಗೆ ಪದವಿ ಪಟ್ಟಗಳು ಮುಖ್ಯವಲ್ಲ; ಜ ನ ತೆ ಯ ಸೇವೆ ಮುಖ್ಯವಾಗಿದೆ.

ಆಹಾರ ಮಂತ್ರಿಗಳಾಗಿದ್ದಾಗ ಅಣ್ಣ ಬಸವಣ್ಣನವರ ಅಷ್ಟ ಶತಮಾನೋತ್ಸವ ಎಲ್ಲೆಡೆಗೂ ಆಚರಿಸಬೇಕೆಂಬುವ ಬಯಕೆ, ಅವರ ಬಾಳ ಬಳ್ಳಿಗೆ ಹೂ ಮೂಡಿದಂತೆ ಮೂಡಿ ಬಂದಿತು. ಅಂದಿನಿಂದ ಇಂದಿನವರೆಗೂ ಪೂಜ್ಯ ಬಸವೇಶ್ವರರ ವಿಚಾರವಾಹಿನಿಯನ್ನು ದಶದಿಕ್ಕುಗಳಿಗೂ ತಲುಪುವಂತೆ ಕಾರ್ಯ ನಡೆಸಿದ್ದಾರೆ. ರಾಜ್ಯಮಟ್ಟದಲ್ಲಿ ಬಸವ ಸಮಿತಿ ಅಧ್ಯಕ್ಷರಾಗಿ ೧೯೬೪ ರಿಂದ ಕೆಲಸ ಮಾಡುತ್ತ ಬಂದಿದ್ದಾರೆ.

**ಶೋಭಾಯಮಾನರು**

ಉದಾತ್ತವಾದ, ಪವಿತ್ರವಾದ ಬಸವಣ್ಣನವರ ವಚನ ವಾಙ್ಮಯವನ್ನು ನೆಲದ ಮಕ್ಕಳ ನಾಲಗೆಯ ಮೇಲೆ ನಲಿದಾಡಿಸಬೇಕೆಂದು ಕಾಲು ನಡಿಗೆಯಿಂದ ಹಳ್ಳಿ ಹಳ್ಳಿಗರ ಮನೆಗೆ ಹೋಗಿ ಕಲ್ಯಾಣದ ಹಣತಿಯಲ್ಲಿ ಪ್ರಜ್ವಲಿಸುತ್ತಿರುವ ಬಸವನೆಂಬ ಜ್ಯೋತಿ ಮುಡಿಸಿ ಬಂದಿದ್ದಾರೆ ಶ್ರೀ ಜತ್ತಿಯವರು. ಶ್ರೀ ರಾನಡೆಯುವರಂತಹ ಆಧ್ಯಾತ್ಮ ಗು ರು ಗ ಳು ಶ್ರೀ ನೆಹರೂಜಿ ಮತ್ತು ಮಹಾತ್ಮ ಗಾಂಧಿಜಿಯವರಂಥ ರಾಜಕೀಯ ಗುರುಗಳ ಸನ್ನಿಧಿಯಲ್ಲಿ ಬೆಳೆದು ಬಂದ ಶ್ರೀ ಬಿ. ಡಿ. ಜತ್ತಿಯವರು ಇಂದು ಬಹ ಜನ ತಂತ್ರ ಪ್ರಜಾಪ್ರಭುತ್ವವುಳ್ಳ ಭಾರತದ ಉಪರಾಷ್ಟ್ರಪತಿಗಳಾಗಿ ಶೋಭಾಯಮಾನವಾಗಿ ಶೋಭಿಸುತ್ತಿರುವುದು ಕನ್ನಡ ನಾಡಿನವರಾದ ನಮಗೆ ಹೆಮ್ಮೆಯ ವಿಷಯವಲ್ಲವೇ ?

೧೯೫೪ ರಲ್ಲಿ ನಾನು ವೈ ದ್ಯ ಕೀ ಯ ಅ ಭ್ಯಾ ಸ ಪ್ರಾರಂಭಮಾಡಿದಾಗ ಅವರು ಹೇಗೆ ಇದ್ದರೋ ಈಗಲೂ ಅದೇ ಸರಳತೆ, ಸೌಜನ್ಯತೆ, ಸೌಹಾರ್ದತೆ– ಎಲ್ಲಿಯೂ ಬದಲಾಗಿಲ್ಲ. ಅವರ ಒಲವು,–ನಿಲುವು ಸಾ ತ್ವಿ ಕ ತಾತ್ವಿಕತೆಗಳಿಂದ ತುಂಬಿಕೊಂಡು ರಾಜಕಾರಣದಲ್ಲಿ ಚೊಕ್ಕ ಚಿನ್ನವಾಗಿ ಬೆಳೆಯುತ್ತಿರುವ, ಬೆಳಗುತ್ತಿರುವ ಶ್ರೀ ಬಿ. ಡಿ. ಜತ್ತಿಯವರು ಪಾಂಡಿಚೆರಿಯ ಮಾತೆಯ ಮಗುವಾಗಿ ಬೆಳೆದು ಬಸವ ತತ್ವವನ್ನು ಹರಡಿ 'ಇವನಾರವ ಇವನಾರವ ಇವನಾರನೆಂದೆನಿಸದಿರಯ್ಯ, ಇವನಮ್ಮ ಇವನಮ್ಮವ ಇ ವ ನ ಮ್ಮ ವನೆಂದೆನಿಸಯ್ಯ ' ಎಂದು ನಾಡಿನುದ್ದಕ್ಕೂ ನಿಂತಿರುವರು. ಎಂಥ ಕಷ್ಟಗಳು ಬಂದರೂ ಚಾಣಾಕ್ಷತೆಯಿಂದ ಪಾರಾಗಿ ತಮ್ಮದೇ ರೀತಿಯಲ್ಲಿ ಮೇಲೇರಿದವರು ನಮ್ಮ ಶ್ರೀ ಬಿ. ಡಿ. ಜತ್ತಿ

ಯವರು. ಹಾಲಾಹಲ ವಿಷವನ್ನು ಕುಡಿದರೂ ಶಿವನನ್ನು ರಕ್ಷಣೆಮಾಡಿದ್ದು ಪಾರ್ವತಿಯ ಮಾಂಗಲ್ಯವಲ್ಲವೇ ? ಎಂತಹ ಕಷ್ಟಗಳು ಬಂದರೂ ಶ್ರೀಮಾನ ಬಸಪ್ಪನವರನ್ನು ಎತ್ತಿ ಹಿಡಿದ, ಕಾಪಾಡಿದ ಪತಿವ್ರತಾ ಶಿರೋಮಣಿ ಶ್ರೀಮತಿ ಸಂಗಮ್ಮನವರನ್ನು ನಾವು ಎಂದೂ ಮರೆಯಬಾರದು.

## ಪ್ರಾರ್ಥನೆ

ಇಂದು ನಾವು ಅವರಿಗೆ ಅರ್ಪಿಸುವ ಈ ಸಂಭಾವನಾ ಗ್ರಂಥವನ್ನು ಎಂದೋ ಅರ್ಪಿಸಬೇಕಾಗಿತ್ತು. ಯಾವುದಕ್ಕೂ ಕಾಲಬೇಕು ಕಾಲಬರುವವರೆಗೂ ಕಾಯಬೇಕು ಎಂದು ಹಿರಿಯರು ಹೇಳುವದು ಸುಳ್ಳಲ್ಲ. ಇಂದು ನಮಗೆ ಒಳ್ಳೇ ಅವಕಾಶ ದೊರಕಿತು. " ನಾವು ತಮಗೊಂದು ಸಂಭಾವನಾಗ್ರಂಥ ಅರ್ಪಿಸುತ್ತೇವೆ. ಬಹುದಿನದ ನಮ್ಮ ಹಂಬಲ ಈಡೇರಿಸಿಕೊಡಬೇಕೆಂದು ಹೃದಯ ತುಂಬಿ ಕೇಳಿದಾಗ, ನಮ್ಮ ಪ್ರೀತಿ ವಾತ್ಸಲ್ಯಗಳ ಮಧುರ ಸಂಕೋಲೆಯಲ್ಲಿ ಸಿಲುಕಿಕೊಂಡ ಶ್ರೀ ಬಿ. ಡಿ. ಜತ್ತಿಯವರಿಗೆ ಇಲ್ಲ ಎನ್ನಲಿಕ್ಕಾಗಲಿಲ್ಲ. ಸಂತೋಷದಿಂದ ಒಪ್ಪಿಕೊಂಡು ' ನೀವು ಮಾಡುವ ಕೆಲಸ ನಾಡಿಗೂ ನುಡಿಗೂ ಹಿತವಾಗಲಿ, ಉಪಯೋಗವಾಗಲಿ ಎಂದು ಹೇಳಿದರು. ಇಂತಹ ಪರಮ ಆದರ್ಶವುಳ್ಳ ಶ್ರೀ ಬಿ. ಡಿ. ಜತ್ತಿಯವರು ಭಾರತದ ಉಪರಾಷ್ಟ್ರಪತಿಗಳಾಗಿ, ರಾಷ್ಟ್ರಪತಿಗಳಾಗಿ ಅಖಂಡ ಪವಿತ್ರ ಭಾರತದೇಶದ ಸೇವೆ ಅವರ್ಣನೀಯವಾಗಿ ಮಾಡಿ ಅಜರಾಮರ ಕೀರ್ತಿಗಳಿಸಿ ಸಕಲ ಭಾರತೀಯರ ಹೃದಯಾನುರಾಗಿಗಳಾಗಿ ಬಾಳಲಿ ಎಂದು ಪರಶಿವನಲ್ಲಿ ಪ್ರಾರ್ಥಿಸುವೆ.



# ಶುದ್ಧ ಭಾವನೆಯ ಅಭಿವ್ಯಕ್ತಿ ಶ್ರೀ ಜತ್ತಿ

ತೊಟ್ಟಿಲು ಕಟ್ಟಿದ ತಾಯಿಗೂ ತಿಳಿದಿರಲಿಲ್ಲ
ತನ್ನ ಹೊಟ್ಟೆಯ ಕೂಸಿಗೆ
ಜನಪದ ಸಿಂಹಾಸನದ ಪಟ್ಟ ಕಟ್ಟುವುದೆಂದು !
ಹುಟ್ಟುವಾಗ ಹತ್ತರಲಿ ಹನ್ನೊಂದು
ಬೆಟ್ಟ ಹತ್ತಿದಾಗ ಕಾಣಿಸಿದುದೊಂದೇ ಒಂದು !

ಶರಣರಂಗಣದ ಶಿಶು ಈಗ ವಿಶ್ವಪಾರ
ಒಳಗಣ್ಣಿಗಷ್ಟೇ ಗೋಚರ; ಆ ಎತ್ತರ !

ಬಾಲ್ಯದಲಿ ಮೈಯುಂಡ ತಾಯ್ನೆಲದ ಮಣ್ಣು
ಬದುಕಿನುದ್ದಕೂ ಕೈ ಹಿಡಿದ ಕಣ್ಣು

ಸೂತ್ರ ಸರಳ, ಪಾತ್ರ ವಿರಳ, ವಿಶಿಷ್ಟ
ಅಂಹಕಾರ ಆಡಂಬರ — ಹರದಾರಿ ದೂರ,

ಪಡೆದ ಪದವಿ — ಸಾಮರ್ಥ್ಯಕ್ಕೆ ಸಂದ ಸ್ಥಾನ
ಕರ್ತವ್ಯ ನಿಷ್ಠೆ, ಧರ್ಮಶ್ರದ್ಧೆಗೆ ಬಂದ ಮಾನ,

ಎತ್ತರಕೆ ಹತ್ತಿದ ಮೇಲ್ಮೆ — ಆದರೂ
ನಿಂತ ನೆಲವ ಮರೆಯದ ಜಾಣ್ಮೆ,

'ಮುಗಿದ ಕೈ, ಬಾಗಿದ ತಲೆ'ಯ ಭಕ್ತಿ;
ಶುದ್ಧ ಭಾವನೆಯ ಅಭಿವ್ಯಕ್ತಿ ಶ್ರೀ ಜತ್ತಿ !

ಕಿರಿದನೂ ಕಡೆಗಣಿಸದ ಕಾರ್ಯಶೀಲತೆ
ಬಿರುಗಾಳಿ ಬೀಸಿದರೂ
ಗೊಂದಲವ ತಂದುಕೊಳ್ಳದ ಸ್ಥಿತಪ್ರಜ್ಞತೆ !
ಅದುವೆ ಜೀವನ ರಹಸ್ಯ;
ಲೋಕ ಪರಮಾರ್ಥಗಳ ಸಾಮರಸ್ಯ !

● ಗೊ. ರು. ಚೆನ್ನಬಸವಪ್ಪ

● ] ಶ್ರೀ ಗೋ. ರು. ಚೆನ್ನಬಸವಪ್ಪ ಅವರು ಉತ್ತಮ ಕವಿಗಳು ಮತ್ತು ಪತ್ರಿಕೋದ್ಯೋಗಿಗಳು. ಪತ್ರಿಕೊದ್ಯೋಗಿಗಳಲ್ಲಿ ವಿಮರ್ಶಾ ದೃಷ್ಟಿ ಅಧಿಕವಾಗುವುದರಿಂದಲೋ ಏನೋ ಅವರಿಂದ ಕವನ ಸೃಷ್ಟಿ ಕಡಿಮೆಯಾಗುತ್ತದೆ. ಆದರೆ ಆಶ್ಚರ್ಯಕರವಾಗಿ ಶ್ರೀ ಗೊ. ರು. ಚ. ಅವರು ಪತ್ರಿಕೋದ್ಯೋಗದ ಜೊತೆಯಲ್ಲಿಯೂ ಕವಿತ್ವ ಶಕ್ತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಕಾವ್ಯಾರಾಧನೆಯಲ್ಲಿ ಅವರು ಪತ್ರಿಕೋದ್ಯೋಗವನ್ನೂ ಯಕಶ್ಚಿತವಾಗಿ ತೆಗೆದುಕೊಂಡವರಲ್ಲ. ಅವರ ಪತ್ರಿಕೋದ್ಯಮ ಪರಿಣತಿಯನ್ನು ಒಗೆಗಾಣಲು ನಾವು ಅವರ ಸಂಪಾದಕತ್ವದ 'ಕುಟುಂಬ' ನೋಡಬೇಕು. — ಸಂ. ]



# ಗಡಿನಾಡ ಕನ್ನಡಿಗರು ಮತ್ತು ಶ್ರೀ ಜತ್ತಿ

● ಡಾ. ಸಿದ್ಧನಾಥ ಬಳ್ಳಾರಿ

● [ ಡಾ. ಸಿದ್ಧನಾಥ ಬಳ್ಳಾರಿ ಅವರು ಸೊಲ್ಲಾಪುರ ವಾಸಿಗಳಾದರೂ ಉತ್ಕಟ ಕನ್ನಡಾಭಿಮಾನಿಗಳು ಮತ್ತು ಕರ್ನಾಟಕಾಭಿಮಾನಿಗಳು. ನಾವು ಕನ್ನಡಿಗರು, ತಿಳಿದುಕೊಂಡುದಕ್ಕಿಂತ ಹೆಚ್ಚಿಗೆ ಕನ್ನಡ ಸಾಹಿತ್ಯ, ಸಂಸ್ಕೃತಿ, ಚರಿತ್ರೆಗಳನ್ನು ಶ್ರೀ ಬಳ್ಳಾರಿ ಅವರು ತಿಳಿದುಕೊಂಡಿದ್ದಾರೆ. ಸೊಲ್ಲಾಪುರದಲ್ಲಿ ಮತ್ತು ಗಡಿನಾಡ ಭಾಗಗಳಲ್ಲಿ ಕನ್ನಡವನ್ನು ರಕ್ಷಿಸಲು "ಕನ್ನಡ ಕೋಟೆ"ಯನ್ನು ನಿರ್ಮಿಸಿಕೊಂಡು ಟೊಂಕಕಟ್ಟಿ ನಿಂತಿದ್ದಾರೆ. ಶ್ರೀ ಜತ್ತಿ ಅವರು ಎಲ್ಲರಿಗೂ ಬೇಕಾದಂತೆ ಗಡಿನಾಡ ಕನ್ನಡಿಗರಿಗೂ ಅಚ್ಚು ಮೆಚ್ಚಿನವರೆಂಬುದು ಈ ಲೇಖನದಿಂದ ಸ್ಪಷ್ಟವಾಗುತ್ತದೆ.

ಇಂದಿನ ಮಾನವಸಮಾಜದ ಮುನ್ನಡೆಗೆ ಸುಖಶಾಂತಿ–ನೆಮ್ಮದಿಗಳಿಗೆ ಅನಿಷ್ಟವನ್ನು ಉಚ್ಚಾಟಿಸುವ, ಕಲ್ಯಾಣಕಾರಕವಾದುದನ್ನು ಉಳಿಸಿಕೊಳ್ಳುವ ಕ್ರಾಂತಿಗಳು, ಆಂದೋಲನಗಳು, ಚಲನವಲನಗಳು ಹಿನ್ನೆಲೆಯಾಗಿ ನಿಂತಿವೆ. ಈ ಹಿಂದೆ ಹನ್ನೆರಡನೆಯ ಶತಮಾನದಲ್ಲಿ ಭಾರತದಲ್ಲಿ ಅಂತಹ ಕ್ರಾಂತಿಯೊಂದು ನಡೆದದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅದು ಧರ್ಮಸ್ವಾತಂತ್ರ್ಯಕ್ಕಾಗಿ, ಸಮಾಜ ಸ್ವಾಸ್ಥ್ಯಗಾಗಿ, ಅರ್ಥಸುವ್ಯವಸ್ಥೆಗಾಗಿ ನಡೆದಕ್ರಾಂತಿ. ಅದರ ನೇತಾರರು ಮಹಾನುಭಾವಿ ಬಸವೇಶ್ವರರು. ಅದರ ಉಗಮಸ್ಥಾನ ಕರ್ನಾಟಕದಲ್ಲಿನ ಕಲ್ಯಾಣ ನಗರ. ಎಂಟುನೂರು ವರ್ಷಗಳನಂತರ ಇದೇ ಇಪ್ಪತ್ತನೆಯ ಶತಮಾನದಲ್ಲಿ ಅಂತಹದೇ ಕ್ರಾಂತಿ ಭಾರತದಲ್ಲಿ ಘಟಿಸಿತು. ಅದುರಾಜಕೀಯ ಸ್ವಾತಂತ್ರ್ಯಕ್ಕಾಗಿ ನಡೆದ ಕ್ರಾಂತಿ. ಅದರ ನೇತಾರರು ಮಹಾತ್ಮಾ ಗಾಂಧಿಯವರು. ಇವೆರಡು ಕ್ರಾಂತಿಗಳ ನಡುವೆ ಶತಮಾನಗಳ ಅಂತರವಿದ್ದರೂ ಅವುಗಳ ಗುರಿಗಮ್ಯಗಳು, ತತ್ವಉದ್ದೇಶಗಳು ಸಮನ್ವಯವಾಗಿದ್ದವೆಂದು ಹಲವು ಅಭ್ಯಾಸಿಗಳ ಹೇಳಿಕೆಯಾಗಿದೆ.

ಇಪ್ಪತ್ತನೆಯ ಶತಮಾನದ ಕ್ರಾಂತಿಯ ನೇತಾರರಾದ ಮಹಾತ್ಮಾಗಾಂಧಿಯವರಾದರೂ. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ ಅಧಿವೇಶನ ಅಧ್ಯಕ್ಷ ಸ್ಥಾನದಿಂದ "ನಾನು ಹೊಸದಾಗಿ ಏನೂ ಹೇಳಲು ಬಂದಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಮಹಾನುಭಾವಿ ಬಸವೇಶ್ವರರು ಹೇಳಿ ಮಾಡಿದುದನ್ನೇ ಮುಂದುವರಿತ್ತಿದ್ದೇನೆ" ಎಂದು ಹೇಳಿದುದು ಅವೆರಡರ ಗುರಿ-ಗಮ್ಯಗಳ ಸಾಮ್ಯತೆಗೆ ನಿದರ್ಶನವಾಗಿದೆ.

ಇಬ್ಬರೂ ಯುಗಪುರುಷರು-ದಾರ್ಶನಿಕರು, ಮಹಾನುಭಾವಿಗಳು. ವಿಶ್ವಮಾನವ ಕಲ್ಯಾಣವೇ ಅವರ ಕ್ರಾಂತಿಯ ಕೇಂದ್ರ ಬಿಂದು. ಸತ್ಯ-ಅಹಿಂಸೆ-ಪ್ರೇಮ ಸರ್ವ-ಸಹ-ಸಮಜೀವನ ಅವರು ಅನುಸರಿಸಿದ ಕಾರ್ಯಾಚರಣೆಗೆ ಇಳಿಸಿದ ತತ್ವ ಪ್ರಣಾಲಿ. ಸರ್ವ-ಸಾಮಾನ್ಯರ ಪ್ರತಿನಿಧಿಗಳೇ ಸಮಾಜ ಆಡಳಿತ ಮುಂತಾದವುಗಳಲ್ಲಿ ಹಿರಿತನವಹಿಸಬೇಕೆಂಬುದು ಅವರ ಕಾರ್ಯಗುರಿಯಾಗಿತ್ತು.

## ಸಂಕೇತ

ಇತಿಹಾಸವು ಪುನರಾವರ್ತಿಸುವುದು (History repeats itself) ಎಂಬುವುದನ್ನು ನಂಬುವುದಾದರೆ ಬಸವಣ್ಣನವರು ನೆಟ್ಟ ಕ್ರಾಂತಿಯ ಬೀಜ ಮಹಾತ್ಮಾಗಾಂಧಿಯವರ ಆಂದೋಲನದಲ್ಲಿ ಮೊಳಕೆಯೊಡೆದು ಇಂದಿನ ಪೀಳಿಗೆಯ ನರನಾಡಿಗಳಲ್ಲಿ ಹರಿಯುತ್ತಿರುವುದು ನನ್ನವರು ಬರುತ್ತಾರೆ ಎಂದು ನುಡಿದ ಬಸವಣ್ಣನವರ ಭವಿಷ್ಯವಾಣಿಯ ಸತ್ಯತೆಗೆ ಇದಕ್ಕಿಂತಲೂ ಹೆಚ್ಚೇನು ಉಪಮೆ ಉದಾಹರಣೆ ಬೇಕು? ಇಂದಿನ ನವಜಾಗೃತಿಯ ಸಂಕೇತದಂತೆ ಬಸವತತ್ವಾನುಯಾಯಿ ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರು ಭಾರತದ ಉಪರಾಷ್ಟ್ರಪತಿ ಪದವಿಯನ್ನಲಂಕರಿಸಿದ್ದಾರೆ.

ಶ್ರೀ ಬಿ. ಡಿ. ಜತ್ತಿಯವರ ಸಾರ್ವಜನಿಕ ಜೀವನ ಅಖಂಡವಾದುದು. ಜಮಖಂಡಿಯ ಸಂಸ್ಥಾನದ ಮುಖ್ಯಮಂತ್ರಿಗಳ ಸ್ಥಾನದಿಂದ ಹಿಡಿದು ಇಂದಿನ ಉಪರಾಷ್ಟ್ರಪತಿ ಪಟ್ಟದವರೆಗೆ ಅವರು ನಡೆದು ಬಂದದ್ದು ಬಹುದೂರದ ದಾರಿ. ಈ ನಡುವೆ ಅವರು ವಿವಿಧ ಕ್ಷೇತ್ರಗಳಲ್ಲಿ ವಿವಿಧ ರಾಜ್ಯಗಳಲ್ಲಿ ಉನ್ನತ ಸ್ಥಾನಮಾನಗಳನ್ನು ಪಡೆದವರು. ಕ್ಷೇತ್ರ-ರಾಜ್ಯ-ಸ್ಥಾನಮಾನಗಳೇ ಬದಲಾಗಿವೆಯಲ್ಲದೆ ಶ್ರೀ ಜತ್ತಿಯವರು ಮಾತ್ರ ಯಾವ ಮಾತಿನಲ್ಲಿಯೂ ಬದಲಾವಣೆ ಹೊಂದಿಲ್ಲ. ಸ್ಥಿತಪ್ರಜ್ಞರಂತೆ ಅವರ ಜೀವನ ಭೂಮಿಕೆ ವೇಷ-ಭೂಷ-ನಡೆ-ನುಡಿ-ರೀತಿನೀತಿಗಳಲ್ಲಿ ಸುಸ್ಥಿರತೆ ನೆಲೆಯಾಗಿ ನಿಂತಿವೆ. ನೂರಾರು ಹೊರದನಿಗೆ ಕಿವಿಗೊಡಬಹುದಾದರೂ ಒಳದನಿಗೆ ತಿಳಿದದ್ದನ್ನೆ ಮಾಡುವವರು.

ಅವರು ಜೀವಮಾನದಲ್ಲಿ ಯಾವುದೇ ಹುದ್ದೆ–ಸ್ಥಾನಮಾನಗಳನ್ನು ಬೇಡಿ ಬೆನ್ನುಹತ್ತುವವರಲ್ಲ. ತಾವಾಗಿ ಒಲಿದು ಬಂದವುಗಳನ್ನು ಮೇಲು ಕೀಳೆಂದು ಉಪೇಕ್ಷಿಸುವರೂ ಅಲ್ಲ. ಅವು ತಮ್ಮಲ್ಲಿರುವ ಕರ್ತವ್ಯಶಕ್ತಿಗೆ ಒಂದು ಕರೆ ಎಂದು ಸ್ವೀಕರಿಸಿ ಅವುಗಳ ಕಾರ್ಯಾವಧಿ ಮುಗಿದ ಮೇಲೆ ಯಾವದೇ ವಾದ–ವಿವಾದ ಹುಯಿಲು ಎಬ್ಬಿಸದೆ ನಿರ್ಗಮಿಸುವರು.

ಮುಂಬಯಿ ರಾಜ್ಯದಲ್ಲಿ ಅತ್ಯಂತ ವಾದಗ್ರಸ್ತವೆನಿಸಿದ ಮುರಾರಜಿಯವರ ಖಾತೆಯಲ್ಲಿ ಉಪಮಂತ್ರಿಗಳೆಂದು ಇದ್ದಾಗಲೂ ಯಾವದಕ್ಕೂ ಚ್ಯುತಿಬಾರದಂತೆ ಯಶಸ್ವಿ ಆಡಳಿತಗಾರರೆನಿಸಿದರು. ಅವರ ದಿಟ್ಟ–ನಿಷ್ಠೆ–ದೂರದೃಷ್ಟಿಗಳನ್ನು ಅಳಿಯುವ ಅಳತೆಗೋಲು ಇನ್ನೂ ಹುಟ್ಟಿ ಬರಬೇಕಾಗಿದೆ.

## ಮಾರ್ಗದರ್ಶಕ

ಇಂತಹ ಸಣ್ಣ ಪುಟ್ಟ ಲೇಖಗಳಲ್ಲಿ ಶ್ರೀ ಜತ್ತಿಯವರ ವ್ಯಕ್ತಿಮತ್ತತೆಯನ್ನು ಹಿಡಿಯಲು ಪ್ರಯತ್ನಿಸುವುದೆಂದರೆ ಸೂರ್ಯನ ಪ್ರಕಾಶವನ್ನು ಮುಷ್ಟಿಯಲ್ಲಿ ಹಿಡಿದು ಅದೇ ಇದು ಹೇಳಿದಂತಾಗದಿರದು. ಆದರೂ ಇಂದು ಮುಂದಿನ ಪೀಳಿಗೆಗೆ ಉಪಯುಕ್ತ ಮಾರ್ಗದರ್ಶಕವೆನಿಸುವಂತೆ ನವ ಕರ್ನಾಟಕ ನಿರ್ಮಾಪಕರಲ್ಲೊಬ್ಬರಾದ ಶ್ರೀ ಜತ್ತಿಯವರ ಸಾರ್ವಜನಿಕ ಕ್ಷೇತ್ರದಲ್ಲಿನ ಅನುಭವಗಳನ್ನು ಗ್ರಂಥ ರೂಪದಲ್ಲಿ ತರುವುದು ಅವಶ್ಯವಾಗಿದೆ. ಈ ಮಾತನ್ನು ಅನುಲಕ್ಷಿಸಿ ನಾವು ಅವರ ಚರಿತ್ರೆಯನ್ನು ಗ್ರಂಥ ರೂಪದಲ್ಲಿ ಬೆಳಕಿಗೆ ತಾರದಿದ್ದಲ್ಲಿ ಅದು ಕನ್ನಡ ಜನಾಂಗಕ್ಕಾಗುವ ಅಪಾರ ನಷ್ಟವೆಂದು ಹೇಳಿದರೆ ತಪ್ಪಾಗದು.

ಶ್ರೀ ಜತ್ತಿಯವರ ಕೈ — ಮೈ — ಮನ ಪರುಷ ಮಣಿಯಂತೆ. ಮುಟ್ಟಿದ್ದಕ್ಕೆ ಕಳೆ — ಬೆಳಕು — ಬೆಲೆ ಕಟ್ಟಿಟ್ಟದ್ದು. ಅವರ ಪ್ರೇರಣೆಯಿಂದಾಗಿ ಹಳ್ಳಿಯಿಂದ ದಿಳ್ಳಿಯವರೆಗೆ ನಡೆದ ಮಹಾತ್ಮ ಬಸವೇಶ್ವರರ ಅಷ್ಟಶತಮಾನೋತ್ಸವ ಸಮಾರಂಭಗಳು, ಶರಣ ತತ್ವ ಪ್ರಸಾರದ ಹಂಪೆಯಿಂದ ಬಸವಕಲ್ಯಾಣದವರೆಗೆ ನಡೆದ ಪಾದಯಾತ್ರೆ, ಬೆಂಗಳೂರಿನಲ್ಲಿ ರೂಪುಗೊಂಡಿರುವ ಬಸವ ಭವನ, ಬಸವ ಸಮಿತಿಯ ಮೂಲಕ ವಿಶ್ವವ್ಯಾಪಕ ಬಸವ ತತ್ವ ಪ್ರಸಾರದ ಯೋಜನೆ, ಹೀಗೆ ಒಂದಲ್ಲದೆ ಹಲವಾರುಗಳನ್ನು ಆ ದಿಶೆಯಲ್ಲಿ ಉದಾಹರಿಸಬಹುದಾಗಿದೆ.

ಜಮುಖಂಡಿ ಒಳನಾಡ ಪ್ರದೇಶವೇನೂ ಅಲ್ಲ, ಶ್ರೀ ಜತ್ತಿ ಅವರಿಗೆ ಗಡಿನಾಡ ಕನ್ನಡಿಗರ ಕುಂದುಕೊರತೆಗಳೆಲ್ಲವೂ ಗೊತ್ತು. ನಾವು ಯಾವಾಗಲೇ

ಅವರನ್ನು ಸಂದರ್ಶಿಸಲಿ ಸೊಲ್ಲಾಪುರ ಕನ್ನಡಿಗರನ್ನು ಬಹುಮುಮತೆಯಿಂದ ಕಂಡಿದ್ದಾರೆ. ನಮ್ಮ ಪ್ರಥಮ ಭೇಟಿಯೆ ಫಲಪ್ರದವಾದುದನ್ನು ನಾ ನಿ ಲ್ಲಿ ವಿವರಿಸ ಬಯಸಿದ್ದೇನೆ.

ಯಾದಗಿರಿಯಲ್ಲಿ ಬಸವೇಶ್ವರರ ಅಷ್ಟಶತಮಾನೋತ್ಸವ ಸಂದರ್ಭ. ಶ್ರೀ ಜತ್ತಿಯವರು ಸಮಾರಂಭದ ಅಧ್ಯಕ್ಷರಾಗಿ ಬಂದಿದ್ದರು. ಆಗ ಅವರು ಪಾಂಡಿಚೇರಿ ಉಪರಾಜ್ಯಪಾಲರು. ಕನ್ನಡ ಕೋಟಿಯ ಅಧ್ಯಕ್ಷರಾದ--ಸುಪ್ರೀಂ ಕೋರ್ಟ ಅಡ್ವೊಕೇಟರೂ ಆದ ಶ್ರೀ ಎಸ್. ಡಿ. ಮೂಗಿಯವರ ನೇತೃತ್ವದಲ್ಲಿ ಸೊಲ್ಲಾಪುರದ ಒಂದು ಶಿಷ್ಟಮಂಡಳಿ ಶ್ರೀ ಜತ್ತಿಯವರ ಭೆಟ್ಟಿಗಾಗಿ ಯಾದಗಿರಿಗೆ ಪ್ರಯಾಣ ಬೆಳಸಿತು. ಆ ಭಾಗದ ಮುಂದಾಳುಗಳೂ ಸಮಾರಂಭದ ನೇತಾರರೂ ಆದ ಶ್ರೀ ವಿಶ್ವನಾಥರೆಡ್ಡಿ ಮುದ್ನಾಳರವರು ಉಪರಾಜ್ಯಪಾಲರಿಗೆ ಪರಿಚಯ ಮಾಡಿಕೊಟ್ಟು ಗಡಿ ಕನ್ನಡಿಗರ ವತಿಯಿಂದ ನಿವೇದನೆ ಸಲ್ಲಿಸಲು ಅನುವು ಮಾಡಿಕೊಟ್ಟರು. ಮಹಾರಾಷ್ಟ್ರದಲ್ಲಿನ ಕನ್ನಡಿಗರ ಗೋಳಿನ ಪಟ್ಟಿ ಸಲ್ಲಿಸಿದೆವು. ದಿ ನ ನಿ ತ್ಯ ಸಾಯುವವರಿಗೆ ಅಳುವವರು — ಯಾರು ಎಂಬ ಗಾದೆಯ ಮಾತಿನಂತೆ ನಮ್ಮ ನಿವೇದನೆ ಫೈಲುಗಳ ರಾಶಿಗೆ ಅ ಥ ವಾ ಕಸದ ಬುಟ್ಟಿಗೆ ಸೇರಿರಬೇಕೆಂದು ಆ ಮಾತು ಮರೆತು ಬಿಟ್ಟದ್ದೆವು. ಬೇರೆ ಮುಖಂಡರಿಗೆ ಅರ್ಪಿಸಿದ ನಮ್ಮ ಹಲವು ನಿವೇದನೆಗಳ ಗತಿ ಅದೇ ಆಗಿತ್ತು.

**ಟಿಪ್ಪಣಿ**

ಆದರೆ ಹಲವು ದಿವಸಗಳ ನಂ ತ ರ ಮಹಾರಾಷ್ಟ್ರ ಸರಕಾರದಿಂದ ಸುದೀರ್ಘ ಪತ್ರ ಬಂದು ತಲುಪಿ ನಮ್ಮ ಅಂದಾಜುಗಳನ್ನೆಲ್ಲಾ ಅಲ್ಲಗಳೆಯಿತು. ಆ ಪತ್ರದಲ್ಲಿ ನಮ್ಮ ಸುದೀರ್ಘ ಬೇಡಿಕೆಗಳಿಗೆ ಪ್ರತಿಯೊಂದಕ್ಕೂ ಟಿಪ್ಪಣೆಗಳನ್ನು -- ಉತ್ತರಗಳನ್ನು ಬರೆದಿತ್ತಲ್ಲದೆ ಹಲವು ಬೇಡಿಕೆಗಳ ಪೂರೈಕೆಯ ಆಶ್ವಾಸನಗಳೂ ಅದರಲ್ಲಿದ್ದವು. — ನಮ್ಮ ನಿವೇದನೆಯನ್ನು ಇದ್ದಕ್ಕಿದಂತೆ ಮಹಾರಾಷ್ಟ್ರ ಸರಕಾರಕ್ಕೆ ರವಾನೆ ಮಾಡದೆ ಶ್ರೀ ಜತ್ತಿಯವರು ನಿವೇದನೆಯಲ್ಲಿನ ಪ್ರತಿಸಮಸ್ಯೆಗೆ ತಮ್ಮದೇ ಆದ ಟಿ ಪ್ಪ ಣೆ ಬರೆದು ಕಳಿಸುವಲ್ಲಿ ಎಷ್ಟರಮಟ್ಟಿನ ಶ್ರಮ ವಹಿಸಿರಬಹುದೆಂಬುದರ ಕಲ್ಪನೆ ಮಹಾರಾಷ್ಟ್ರ ಸರಕಾರದಿಂದ ಬಂದ ಪತ್ರ ನೋಡಿದವರಿಗೆ ಬರುವಂತಿತ್ತು.

ಇನ್ನೊಂದು ಘಟನೆ, ಮೊನ್ನೆ ಮೊನ್ನಿನ ಪ್ರಕರಣ ಒಂದರಲ್ಲಿ ಮಹಾರಾಷ್ಟ್ರ ಸರಕಾರವು ತನ್ನ ಹೊಸ ಶಿಕ್ಷಣ ಪ್ರಣಾಲಿಕೆಯಲ್ಲಿ ಸಿಂಧಿ—ಹಿಂದಿ—

ಉರ್ದು—ಗುಜರಾತಿ ಭಾಷೆಗಳನ್ನು ಶಿಕ್ಷಣ ಮಾಧ್ಯಮವೆಂದು ಗ್ರಹಿಸಿ ಕನ್ನಡ ವನ್ನು ಮಾತ್ರ ಕಡೆಗಣಿಸಿತ್ತು. ಶ್ರೀ ಜತ್ತಿಯವರ ಇತ್ತೀಚಿನ ಹುಬ್ಬಳ್ಳಿಯ ಮುಕ್ಕಾಮಿನಲ್ಲಿ ಗಡಿ ಕನ್ನಡಿಗರ ಶಿಷ್ಟ ಮಂಡಳಿ ಒಂದು ಭೆಟ್ಟಿಯಾಗಿ ಆ ಬಗ್ಗೆ ನಿವೇದನೆ ಸಲ್ಲಿಸಿತು. ದೆಹಲಿಯಲ್ಲಿ ಉಪರಾಷ್ಟ್ರಪತಿ ಪದವಿಯಲ್ಲಿರುವ ನಮಗೆ ಕನ್ನಡ — ಗಿನ್ನಡದ ಗೊಡವೆ ಏಕೆ ಎಂದು ಉಪೇಕ್ಷಿಸಬಹುದಿತ್ತು. ಆದರೆ ಉಪರಾಷ್ಟ್ರಪತಿಗಳು ಮಹಾರಾಷ್ಟ್ರ ಸರಕಾರಕ್ಕೆ ಸ್ವತಃ ಬರೆದದ್ದಲ್ಲದೆ ಕೇಂದ್ರದಲ್ಲಿಯ ಹಲವು — ಪ್ರಮುಖರ ಮುಖಾಂತರವೂ ಕನ್ನಡ ಮಾಧ್ಯಮದ ಕೊಡುಗೆಗಾಗಿ ಮಹಾರಾಷ್ಟ್ರ ಸರಕಾರದ ಮೇಲೆ ಆಗ್ರಹದ ಒತ್ತಾಯ ತಂದು ದಾಗಿ ತಿಳಿದುಬಂದಿತು. ಅದರಿಂದಾಗಿ ಮಹಾರಾಷ್ಟ್ರ ಸರಕಾರವು ಕೊನೆಗೆ ಕನ್ನಡ ಮಾಧ್ಯಮಕ್ಕೆ ಒಪ್ಪಿಕೊಳ್ಳಲೇಬೇಕಾಯಿತು.

ಮತ್ತೊಂದು ಘಟನೆ ಬಹಳ ಹಿಂದಿನದು. ಸೊಲ್ಲಾಪುರ ನಗರಸಭೆಯ ಸಭಾಭವನದಲ್ಲಿ ಬಸವೇಶ್ವರ ಭಾವಚಿತ್ರ ಹಾಕಬೇಕೆಂಬ ಸೂಚನೆ ಬಂದಾಗ ಮರಾಠಿಗರು, ಕನ್ನಡಿಗರು ಒಂದಾಗಿಯೇ ಅದನ್ನು ವಿರೋಧಿಸಿದ ಒಂದು ವಿಚಿತ್ರ ಘಟನೆ ಸೊಲ್ಲಾಪುರದಲ್ಲಿ ನಡೆದುಹೋಯಿತು. ಮರಾಠಿಗರು ಅದನ್ನು ಏಕೆ ವಿರೋಧಿಸಿದರು ಎಂಬುದಕ್ಕೆ ವಿವರಣೆಬೇಕಿಲ್ಲ. ಆದರೆ ಕನ್ನಡಿಗರು ಅದನ್ನು ವಿರೋಧಿಸಿದುದು ವಿಸ್ಮಯಕಾರಕವಾದದ್ದು. ಕನ್ನಡಿಗರ ವಾದವಾದರೂ ವಿಚಿತ್ರವಾಗಿತ್ತು. ಬಸವೇಶ್ವರರು ನಮ್ಮ ಕುಲದೇವರು. ಅವರನ್ನು ನಾವು ದೇವರ ಜಗಲಿಯ ಮೇಲೆ ಇಟ್ಟು ಪೂಜಿಸುತ್ತೇವೆ. ಮುನಸಿಪಾಲಿಟಿಯಂತಹ ಕಚರಾ ಕಚೇರಿಯಲ್ಲಿ ಅವರ ಫೋಟೋ ಹಾಕೋದು ನಮಗೆ ಬೇಡ. ಇದು ಅವರ ಭಾವನಾತ್ಮಕ ವಾದ. ಈ ವಾದಕ್ಕೆ ಇಲ್ಲಿಯ ದೊಡ್ಡವರೆಂಬುವವರೇ ಬಲಿಬಿದ್ದದ್ದು ಗಮನಾರ್ಹಸಂಗತಿ. ಕೊನೆಗೆ ಅದೊಂದು ಉಗ್ರ ಚಳವಳಿಯಾಗಿಯೇ ಪರಿಣಮಿಸಿತ್ತು.

## ದೇವಮಾನವ

ಅಂತಹ ಸನ್ನಿವೇಶದಲ್ಲಿಯೇ ಬಸವಸಮಿತಿಯ ಸಭೆಯು ಸೊಲ್ಲಾಪುರದಲ್ಲಿ ಸೇರಿತು. ಶ್ರೀ — ಜತ್ತಿಯವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಮೇಲಿನ ಪ್ರಕರಣದಿಂದಾಗಿ ಸಭೆಗೆ ಜನ ಕಿಕ್ಕಿರಿದು ನೆರೆದಿದ್ದರು. ಬಸವ ಸಮಿತಿಯ ಪ್ರಾರಂಭಿಕ ಕಾರ್ಯಕಲಾಪಗಳು ಮುಗಿದ ತರುವಾಯ ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಜತ್ತಿಯವರನ್ನು ಮೇಲಿನ ಸಮಸ್ಯೆ ಕುರಿತು ಸ್ಪಷ್ಟೀಕರಣ

ಕೇಳಲಾಯಿತು. ಅದಕ್ಕೆ ಅವರು ಬಸವೇಶ್ವರರು ಮನುಷ್ಯತನದಿಂದ ದೇವತ್ವ ಪಡೆದವರು ಆದ್ದರಿಂದ ಅವರು ದೇವರ ಜಗಲಿಯಮೇಲೆ ಗುಡಿಗುಂಡಾರಗಳಲ್ಲಿ ಪೂಜಾರ್ಹರು. ಅವರು – ಅಷ್ಟೇ ಐತಿಹಾಸಿಕ ಶ್ರೇಷ್ಠ ಪುರುಷರು. ಅವರ ಭಾವಚಿತ್ರಗಳನ್ನು ಸಭಾಭವನಗಳಲ್ಲಿ –– ಪ್ರತಿಮೆಗಳನ್ನು ಉದ್ಯಾನ–ವನ– ರಸ್ತೆಗಳ ಚೌಕುಗಳಲ್ಲಿ ಸ್ಥಾಪಿಸಲು ಯಾವ ಆಕ್ಷೇಪಣೆಯೂ ಇಲ್ಲ ಎಂದು ಹೇಳಿದರು. ಬಿರುಗಾಳಿಯಂತೆ ಎದ್ದ ವಾದ ತಣ್ಣಗಾಯಿತು. ಇಡೀ ಭಾರತ ದಲ್ಲಿಯೇ ಪ್ರಪ್ರಥಮವಾಗಿಯೇ ಎನ್ನುವಂತೆ ವಿಜೃಂಭಣೆಯ ಸಮಾರಂಭದೊ ಡನೆ ಬಸವೇಶ್ವರರ ಭಾವಚಿತ್ರವನ್ನು ಸೊಲ್ಲಾಪುರ ನಗರಸಭೆಯ ಸಭಾಭವ ನದಲ್ಲಿ ಪ್ರಸ್ತಾಪಿಸಲಾಯಿತು.

## ಅಪಾರ ಜ್ಞಾಪಕ ಶಕ್ತಿ

ಶ್ರೀ ಜತ್ತಿಯವರು ಅಪಾರ ಜ್ಞಾಪಕಶಕ್ತಿ, ಹಿರಿದಾದ ಸೌಜನ್ಯತೆ ಉಳ್ಳ ವರು ಎಂಬುದು ನಮ್ಮಂತಹ ಸಾಮಾನ್ಯರಿಗೆ ಬಂದ ಅನುಭವವಾಗಿದೆ. ಅವರು ಎಷ್ಟೇ ಗಡಿಬಿಡಿ ಜನಜಂಗುಳಿಯಲ್ಲಿ ಬೆರೆತಿದ್ದರೂ ಸೊಲ್ಲಾಪುರದ ಕಾರ್ಯಕರ್ತರನ್ನು ನೋಡಿದಾಗ ಸೊಲ್ಲಾಪುರ ಏನನ್ನುತ್ತದೆ ಎಂದು ಕೇಳದೆ ಮುಂದುವರಿಯುವುದಿಲ್ಲ. ಎಲ್ಲಿದ್ದರೂ ಸೊಲ್ಲಾಪುರ ಹಾಗೂ ಅಲ್ಲಿಯ ಕಾರ್ಯ ಕರ್ತರನ್ನು ಮರೆತಿಲ್ಲವೆಂಬುದು ನಮ್ಮಂತಹ ಕಿರಿಯ ಕಾರ್ಯಕರ್ತರಿಗೂ ಆಗುವ ಅನುಭವ.

ಶ್ರೀ ಬಿ. ಡಿ. ಜತ್ತಿ ಅವರು ಉಪರಾಷ್ಟ್ರಪತಿಗಳಾಗಿರುವಾಗಲೇ ಮೈಸೂರು ಮಹಾರಾಷ್ಟ್ರ ಗಡಿವಿವಾದವು ಬಗೆ ಹರಿದು ಬಹುದಿನಗಳಿಂದಲೂ ಹೋರಾಟ ನಡೆಸುತ್ತಿರುವ ಸೋಲ್ಲಾಪುರ ಕನ್ನಡಿಗರ ಆಶೆ ಆಕಾಂಕ್ಷೆಗಳು ಈಡೇರಲಿ. ಸೊಲ್ಲಾಪುರ ಬಸವಕಲ್ಯಾಣಗಳ ಸಂಗಮ ಏರ್ಪಡಲಿ ಎಂದು ಗಡಿನಾಡ ಕನ್ನ ಡಿಗರಾದ ನಾವು ಹೃತ್ಪೂರ್ವಕ ಹಾರೈಸುತ್ತೇವೆ.



# ನಲ್ವರಕೆ

ಓ ಜತ್ತಿ !

ಭಾರತ ರಾಷ್ಟ್ರದ ಉಪರಾಷ್ಟ್ರಪತಿ ಸಿಂಹಾಸನವ ಹತ್ತಿ
ಬೀರುತಿರುವಿರಿ ನಿಮ್ಮ ರಾಷ್ಟ್ರ ಸೇವಾಸಕ್ತಿ
ತೋರುತಿರುವಿರಿ ನಿಮ್ಮ ಸತ್ ಸಾಹಸ ಶಕ್ತಿ !

ನಿಮ್ಮ ನಡುನೆತ್ತಿಯ ಮೇಲೆ ಗಾಂಧಿ ಟೊಪ್ಪಿಗೆ
ನಿಮ್ಮ ನಿಡುನೊಸಲ ನಡುವೆ ವಿಭೂತಿ ಬೆಳಗುಗೆ
ನಿಮ್ಮಲ್ಲಿವು ತಾವಿಪ್ಪುವು ರಾಷ್ಟ್ರ ಚಿಹ್ನೆ–ಧರ್ಮ ಚಿಹ್ನೆ ಮಿಗೆ !

ಬಸವಣ್ಣನ ಮಾನವೀಯ ಕ್ರಾಂತಿಯ ಮೆಚ್ಚಿ
ಬಸವ ಸಮಿತಿಯ ರಚಿಸಿದಿರಿ ಹೃದಯ ಹೆಚ್ಚಿ
ಬಸವ ಸಮಾಜವಾದವ ಕೈವಾರಿಸುವಿರಿ ಬಗೆ ಬಿಚ್ಚಿ !

ಬುದ್ಧ ತತ್ವವ ಬೆಳಗಿದನು ಅಶೋಕ ಚಕ್ರವರ್ತಿ
ಬಸವ ತತ್ವವ ಬೀರುತಿಹನು ಬಸಪ್ಪ ಜತ್ತಿ
ವಸುಧೆಯಲಿ ಹದವರಿತು ತತ್ವ ಬಿತ್ತುಗಳ ಬಿತ್ತಿ !

ನಿಮ್ಮ ಅಂತರಂಗದ ಅನುಭವ ಅಪಾರ
ನಿಮ್ಮ ಸಕ್ರಿಯ ಶೀಲತೆಯಿಂದದಕೊದಗಿದೆ ಮಾಧುರ
ಮಾತೆಂಬ ಮುತ್ತುಗಳಲಿ ಹರಡುತಿರುವಿರಿ ನಾಡೆಲ್ಲ !

ಕನ್ನಾಡಿನಲಿ ಜನಿಸಿ ಕನ್ನಾಡ ಮುಖ್ಯಮಂತ್ರಿಯೆನಿಸಿ
ಉನ್ನತ ಭಾರತ ರಾಷ್ಟ್ರೋಪಾಧ್ಯಕ್ಷರಾಗಿಂದು
ಮುನ್ನಡೆದಿರುವಿರಿ ಚೆನ್ನತನದಲಿ ಮನದಂದು !

ರಾಷ್ಟ್ರ–ಧರ್ಮಗಳೆರಡರ ಸೇವೆಯಲಿ ಸವ್ಯ ಸಾಚಿ
ವಿಶ್ವ–ಮಾನವ ಧರ್ಮಕಾಗಿ ನೀಂ ಕೈಯ ಚಾಚಿ
ಕಜ್ಜ ಮುಜ್ಜುಗಿಸಲು ನಡಕಟ್ಟಿ ನಿಂತಿರುವೆ ಹೊಂಚಿ !

ಭಕ್ತಿ ಬಲ್ಲಿದರು, ಶಕ್ತಿಸಂಪನ್ನರು ಜತ್ತಿಯವರು
ಜಗದ ಜೀವನದಲಿ ಜೋಕೆಯನರಿತವರು
ರಾಷ್ಟ್ರ ಜೀವನದಿ ಸೋಲನರಿಯದ ವೀರರು !

ಇಂತು ವೀರರಾಗಿ, ಧೀರರಾಗಿ, ಮುಂದೆ ಮುಂದೆ ಸಾಗಿರಿ
ಮುಂತು ಮುಂತು ಮಾನವ ಧರ್ಮಧ್ಯೇಯವ ಸಾಧಿಸಿರಿ
ಕಂತು ಹರನ ಕರುಣೆಯನು ಸಂತತ ಪಡೆಯಿರಿ !

● ಡಾ. ಜ. ಚ. ನಿ.

---

● [ ಡಾ. ಜ. ಚ. ನಿ. ಅವರು ಸನ್ಯಾಸಿ — ಸಾಹಿತಿಗಳು. ಅವರಷ್ಟು ಪುಸ್ತಕಗಳನ್ನು ಬರೆದವರೂ ಮತ್ತು ಪ್ರಕಟಿಸಿದವರೂ ಪ್ರವೃತ್ತಿ ಸಾಹಿತಿಗಳಲ್ಲೂ ಅಪರೂಪ. ನಿಡುಮಾಮಿಡಿ ಜಗದ್ಗುರು ಪೀಠವನ್ನಲಂಕರಿಸಿದ ಹೊಸದರಲ್ಲಿಯೇ ತಮ್ಮ ಪೀಠದ ಶಿಷ್ಯ ಮುದನೂರು ದೇವರ ದಾಸಿಮಾರ್ಯರ ಬಗ್ಗೆ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸಿ ಕನ್ನಡ ಸಾಹಿತ್ಯದಲ್ಲಿ ಕವಿ—ಪ್ರಶಸ್ತಿ ಪರಿಪಾಠ ತೀವ್ರಗೊಳಿಸಿದರು- ವಿಚಾರ ಪರಿಪ್ಲುತ ಸಾಹಿತ್ಯವನ್ನು ಹೊರತಂದಂತೆ ಸಂಶೋಧನ ಸಾಹಿತ್ಯವನ್ನೂ ಬರೆಯಬಲ್ಲರು, ವಿಮರ್ಶಾ ಸಾಹಿತ್ಯವನ್ನೂ ಬರೆಯಬಲ್ಲರು. ಇವೆಲ್ಲವುಗಳ ಜೊತೆಗೆ ಉದ್ದಾಮ ಕವಿಗಳೂ ಕೂಡ. ಪೂಜ್ಯ ಜ. ಚ. ನಿ. ಅವರ ಬಹುಮುಖ ಪ್ರತಿಭೆಯನ್ನು ಪುರಸ್ಕರಿಸಿ ಮೈಸೂರು ವಿಶ್ವ ವಿದ್ಯಾನಿಲಯವು ಗೌರವ ಡಾಕ್ಟರೇಟ ಪದವಿಯನ್ನು ನೀಡಿದೆ. — ಸಂ ]



# ನಾ ಕಂಡ ಜತ್ತಿ ಮತ್ತು ನನ್ನ ಅನುಭವಗಳು

● ವಿಶ್ವನಾಥರಡ್ಡಿ ಮುದ್ನಾಳ

● [ ಆಳುವ ಪಕ್ಷದ ನೇತಾರರಾಗಿರುವ ಶ್ರೀ ಬಿ. ಡಿ. ಜತ್ತಿ ಅವರು ಹಾಗೂ ವಿರೋಧ ಪಕ್ಷಗಳ ಧುರೀಣರಾಗಿರುವ ಶ್ರೀ ವಿಶ್ವನಾಥ ರಡ್ಡಿ ಮುದ್ನಾಳರವರು, ಉಭಯರ ನೆಚ್ಚಿನ ವ್ಯಕ್ತಿಯಾಗಿರುವ ಮಹಾನುಭಾವ ಬಸವಣ್ಣನವರ ನಿಮಿತ್ತವಾಗಿ, ಸೌಹಾರ್ದಪೂರ್ಣವಾಗಿ ಸಂಯೋಗಗೊಂಡುದು ಅಪೂರ್ವ ಯೋಗಾಯೋಗವೆಂದು ಭಾವಿಸಲಾಗುತ್ತಿದೆ. ತಮ್ಮ ಕಾರ್ಯೋತ್ಸಾಹಕ್ಕೆ ಫಲಪ್ರದ ತಿರುವು ನೀಡುವ ನಿಸ್ವಾರ್ಥ ನಿರ್ದೇಶಕರೊಬ್ಬರನ್ನು ಶ್ರೀ ವಿಶ್ವನಾಥರೆಡ್ಡಿಯವರು ಶ್ರೀ ಜತ್ತಿಯವರಲ್ಲಿ ಕಂಡುಕೊಂಡಿದ್ದರೆ, ತಮ್ಮ ಅನಿಸಿಕೆಗಳಿಗೆ ಯಶಸ್ವಿ ಮೂರ್ತ ಸ್ವರೂಪವನ್ನು ಕೊಡುವ ಪ್ರಚಂಡ ಶಿಲ್ಪಿಯೊಬ್ಬರನ್ನು ಶ್ರೀ ಬಿ. ಡಿ. ಜತ್ತಿ ಅವರು ಶ್ರೀ ವಿಶ್ವನಾಥರೆಡ್ಡಿಯವರಲ್ಲಿ ಹುಡುಕಿಕೊಂಡಿದ್ದಾರೆ. — ಸಂ. ]

ನಾನು ಮೊಟ್ಟ ಮೊದಲನೆಯದಾಗಿ ಶ್ರೀ ಬಿ. ಡಿ. ಜತ್ತಿಯವರನ್ನು ಕಂಡದ್ದು ೧೯೫೬ ರಲ್ಲಿ. ಅವರು ಹೊಸ ಮೈಸೂರು ರಾಜ್ಯದ ಭೂ ಸುಧಾರಣಾ ಸಮಿತಿಯ ಅಧ್ಯಕ್ಷರಾಗಿ ನಮ್ಮ ಭಾಗದ ಜನರ ಸಂಪರ್ಕ ಬೆಳೆಸಿ ಸಮಿತಿಗೆ ಮಾಹಿತಿಯನ್ನು ಪಡೆಯಲು ಆಗಮಿಸಿದ್ದರು. ಕಲ್ಬುರ್ಗಿಯ ಐವಾನ್‌ಶಾಹಿಯಲ್ಲಿ ನಡೆದ ಆ ಸಮಾಲೋಚನಾ ಸಭೆಯಲ್ಲಿ ನಾನು ಯಾದಗಿರಿ ವಿಭಾಗದ ರೈತ ಸಮ್ಮೇಳನದ ಅಧ್ಯಕ್ಷನಾಗಿ ಭಾಗವಹಿಸಿದ್ದೆ. ವಿಶೇಷ ಪರಿಚಯವೇನೂ ಆಗಿರಲಿಲ್ಲ.

ಆಮೇಲೆ ೧೯೫೭ ರ ಚುನಾವಣೆ ಬಂತು. ನಮ್ಮ ಪಕ್ಷವಾದ ಲೋಕ ಸೇವಕ ಸಂಘದ ಹುರಿಯಾಳಾಗಿ ಶ್ರೀ ಮಹಾದೇವಪ್ಪ ಮುರುಗೋಡ ಅವರು ಶ್ರೀ ಜತ್ತಿಯವರ ವಿರುದ್ಧ ಸ್ಪರ್ಧಿಸಿದ್ದರೂ ಶ್ರೀ ಜತ್ತಿಯವರು ಅದರಲ್ಲಿ ವಿಜೇತರಾದರು. ಸುಮಾರು ನಾಲ್ಕೈದುವರ್ಷ ಅಷ್ಟೇ ಅಲ್ಲ ೧೯೬೨ ರ ಚುನಾವಣೆಯ

ನಂತರವೂ ನಾನು ಮಾನಸಿಕವಾಗಿ ಶ್ರೀ ಜತ್ತಿಯವರ ಬಗ್ಗೆ ವಿರೋಧಾಭಾಸ ಉಳ್ಳವನೇ ಆಗಿದ್ದೆ. ೧೯೬೪ ರಲ್ಲಿ ಅವರು ಬೊಂಬಾಯಿ ಮೀಟಿಂಗ್‌ನಲ್ಲಿ ಅಷ್ಟ ಶತಮಾನೋತ್ಸವದ ಬಗ್ಗೆ ಆಲೋಚಿಸಿ, ಆಯೋಜಿಸಬೇಕಾದ ಮತ್ತು ಶತಮಾನೋತ್ಸವ ಕಾರ್ಯಕ್ರಮವನ್ನು ರೂಪಿಸಬೇಕಾದ ಸಮಿತಿಯ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಆನಂತರ ಧಾರವಾಡದಲ್ಲಿ ಬಸವ ಅಷ್ಟ ಶತಮಾನೋತ್ಸವದ ಬಗ್ಗೆ ಮುಂದುವರಿದು ಆಲೋಚಿಸಲು ಮೀಟಿಂಗೊಂದು ಕರೆಯಲಾಯಿತು. ಆಗ ಎಲ್ಲ ಸಾಮಾಜಿಕ ಕಾರ್ಯಕರ್ತರಿಗೆ ಆಮಂತ್ರಣ ಹೋದಂತೆ ನನಗೂ ಆಮಂತ್ರಣ ಬಂದಿತ್ತು. ಅನಿವಾರ್ಯ ಕಾರಣಗಳಿಂದ ನನಗೆ ಧಾರವಾಡದ ಸಭೆಗೆ ಹೋಗುವುದು ಆಗದ್ದರಿಂದ ಬಸವ ಶತಮಾನೋತ್ಸವ ಪೂರ್ವಭಾವಿಯಾಗಿ ಕೈಕೊಳ್ಳಬೇಕಾದ ಕಾರ್ಯಗಳ ಸೂಚನೆ ನೀಡಿದ್ದೆ. ಅನೇಕ ಸೂಚನೆಗಳಲ್ಲಿ ಪಾದಯಾತ್ರೆಯ ಸೂಚನೆಯೂ ಬಂದಾಗಿದ್ದು ವಿವರವಾದ ಪತ್ರವೊಂದನ್ನು ಕಳಿಸಿದ್ದೆ. ಹೊಸದಾಗಿ ಸ್ಥಾಪಿತವಾದ ಆ ಸಮಿತಿಯಿಂದ ನಿಶ್ಚಿತವಾಗಿ, ಯೋಜಿತವಾದ ಕಾರ್ಯಗಳು ನಡೆಯಬಹುದೆಂದು ನನಗೆ ಆಗ ಆಶೆ ಇರಲಿಲ್ಲ.

## " ಯಾವ ಜತ್ತಿಯವರ್ರೀ ? "

ಮುಂದೆ ೧೯೬೪ ರ ಆಗಸ್ಟ ಕೊನೆಯಲ್ಲಿ ಬಹುತೇಕ ಆಗ ಶ್ರಾವಣ ತಿಂಗಳು ಇತ್ತು. ಯಾದಗಿರಿಯ ನಮ್ಮ ಮನೆ—ಅಂಗಡಿಗೆ ಹೊಂದಿಕೊಂಡಿದ್ದ ಗೋದಾಮಿನಲ್ಲಿ ಪುರಾಣ ಶ್ರವಣ ಮಾಡುತ್ತ ಕುಳಿತಿದ್ದೆವು. ಅಂದು ಸಾಯಂಕಾಲ ಪುರಾಣ ಶ್ರವಣದ ಸಮಯಕ್ಕೆ ನಮ್ಮ ಮನುಷ್ಯ ಬಂದು ಬೆಂಗಳೂರಿನಿಂದ ಫೋನೊಂದು ಬಂದಿದೆಯೆಂದು ಹೇಳಿದನು. ಅಂಗಡಿಯಲ್ಲಿ ಹೋಗಿ ಫೋನು ಕೇಳಿದಾಗ " ನಾನು ಜತ್ತಿ ಮಾತಾಡುತ್ತಿದ್ದೇನ್ರಿ " ಎಂಬ ಮಾತು ನನ್ನ ಕಿವಿಯಲ್ಲಿ ಬಿತ್ತು. ನಾನು ' ಯಾವ ಜತ್ತಿಯವರ್ರೀ ' ಎಂದು ಕೇಳಿದೆ. ' ನಾನು ಫೈನಾನ್ಸ ಮಿನಿಸ್ಟರ್ ಜತ್ತಿ ' ಎಂದು ಉತ್ತರ ಕೊಟ್ಟರು. (ಆಗ ಅವರು ನಮ್ಮ ಮೈಸೂರು ರಾಜ್ಯದ ಅರ್ಥಮಂತ್ರಿಗಳಾಗಿದ್ದರು. )

ಬಸವ ಅಷ್ಟ ಶತಮಾನೋತ್ಸವದ ರೂಪರೇಷೆಗಳನ್ನು ಸಿದ್ಧಪಡಿಸಲು ಮತ್ತು ಆ ಬಗ್ಗೆ ಒಂದು ಸಮಿತಿಯನ್ನು ರಚಿಸಲು ಅಲ್ಲಲ್ಲಿ ಆಯೋಜಿಸಲಾಗುತ್ತಿದ್ದ ಮೀಟಿಂಗುಗಳಂತೆ ಹೈದ್ರಾಬಾದನಲ್ಲಿಯೂ ಮೀಟಿಂಗೊಂದನ್ನು ಕರೆಯಬೇಕಾದ್ದರಿಂದ ಅದರ ವ್ಯವಸ್ಥೆಯನ್ನು ಹೈದ್ರಾಬಾದನಲ್ಲಿರುವ ನಮ್ಮ ವಿ. ವಿ. ಹಾಸ್ಟೆಲಿನಲ್ಲಿ ಮಾಡುವಂತೆ ನನ್ನನ್ನು ಕೇಳಿಕೊಳ್ಳಲು ಶ್ರೀ ಜತ್ತಿ ಅವರು

ಫೋನ್ ಮಾಡಿದ್ದರು. ಅದರಂತೆ ವಿ. ವಿ. ಹಾಸ್ಟೆಲ್ಲಿನಲ್ಲಿ ಸೆಪ್ಟೆಂಬರ್ ಎರಡನೆಯ ವಾರದಲ್ಲಿ ಮೀಟಿಂಗೊಂದನ್ನು ಆಯೋಜಿಸಲಾಯಿತು. ಎಲ್ಲ ಜನರ ಸಹಕಾರದಿಂದ ಬಹು ಯಶಸ್ವಿಯಾದ ಕಾರ್ಯಕ್ರಮಗಳು ಅಲ್ಲಿ ನಡೆದವು. ಸಮೀಪದಿಂದ ಮತ್ತು ಬಹಳ ಸಮಯದವರೆಗೆ ಶ್ರೀ ಜತ್ತಿಯವರನ್ನು ಅಭ್ಯಸಿಸಲು ಈ ನನ್ನ ಎರಡನೆ ಸಂದರ್ಶನ ಬಹು ಸಹಾಯಕಾರಿಯಾಯಿತು. ಅವರ ಕಾರ್ಯದಕ್ಷತೆ ಮತ್ತು ಕಾರ್ಯ ತತ್ಪರತೆಯನ್ನು ಮತ್ತು ಶಿಸ್ತಿನಿಂದ ಸೂಚಿಸಲಾದ ಸಮಯದೊಳಗೆ ಬಹು ಯಶಸ್ವಿಯಾಗಿ ಕೆಲಸವನ್ನು ಮುಗಿಸುವ ರೀತಿಯನ್ನು ನೋಡಿ ಬೆರಗಾದೆ. ಬಸವ ಸಮಿತಿ ಎಂಬ ಹೆಸರನ್ನು ಮತ್ತು ಘಟನೆಯ ರೂಪರೇಷೆಯನ್ನು ಹೈದರಾಬಾದಿನ ಸಭೆಯಲ್ಲಿ ಚರ್ಚಿಸಲಾಯಿತು. ಅವರು ಬಸವ ಸಮಿತಿಯ ಬಗ್ಗೆ ಇಟ್ಟುಕೊಂಡಂಥ ದೃಷ್ಟಿ ( Vision ) ಮತ್ತು ವಿಚಾರಗಳನ್ನು ( Ideas ) ನೋಡಿ ಅವರ ವ್ಯಕ್ತಿತ್ವದ ಬಗ್ಗೆ ನನ್ನಲ್ಲಿ ಮೊದಲಿನಿಂದಲೂ ಇದ್ದ ವಿರೋಧಾಭಾಸ ಬಹು ಭಾಗ ಕಡಿಮೆಯಾಯಿತು. ಮುಂದೆ ಸೊಲ್ಲಾಪುರ ಮತ್ತು ಮದ್ರಾಸ್‌ನಲ್ಲಿ ಕರೆಯಲಾದ ಬಸವ ಸಮಿತಿಯ ರಚನೆಯ ಪೂರ್ವಭಾವೀ ಮೀಟಿಂಗುಗಳಿಗೆ ನಾನು ತಪ್ಪದೆ ಹೋದೆ. ಬಸವ ಸಮಿತಿಯನ್ನು ಬೆಳೆಯಿಸುತ್ತಿರುವ ಅವರ ಕಾರ್ಯವಿಧಾನದ ಬಗ್ಗೆ ನನ್ನ ಅಭಿಮಾನವು ದಿನೇ ದಿನೇ ಹೆಚ್ಚುಹತ್ತಿತು.

## ಬುದ್ಧನ ಹಾಗೆ

ಮದ್ರಾಸಿನಲ್ಲಿ ಇಂಥದೇ ಸಭೆಯನ್ನು ಪೆಣಂಬೂರಿನ ರೇಲ್ವೆ ಇನ್ಸಟಿಟ್ಯೂಟ್‌ನಲ್ಲಿ ಆಯೋಜಿಸಲಾಗಿತ್ತು. ಮೀಟಿಂಗ್ ನಂತರ ಮಧ್ಯಾಹ್ನದ ಊಟವಾದ ಮೇಲೆ ಯಾದಗಿರಿಯಿಂದ ಹೋದ ನಾವು ಕೆಲವು ಮಿತ್ರರು ರೇಲ್ವೆ ಇನ್ಸಟಿಟ್ಯೂಟ್‌ನ ಅಂಗಳದ ಆಲದ ಮರದ ಕೆಳಗೆ ತಂಪಾದ ನೆರಳಿನಲ್ಲಿ ಕುಳಿತಿದ್ದೆವು. ಆಗ ಜತ್ತಿಯವರು ನಮ್ಮ ಸಮೀಪದಿಂದಲೇ ಹಾದು ಹೋಗುತ್ತಿದ್ದಾಗ ನನ್ನನ್ನು ನೋಡಿ "ಏನು ಬುದ್ಧನ ಹಾಗೆ ಆಲದ ಮರದ ಕೆಳಗೆ ಕುಳಿತ್ತಿದ್ದೀರಲ್ಲ!" ಎಂದು ನುಡಿದರು. ( ಆಗ ನಾನೂ ಯಾವಾಗಲೂ ತಲೆಗೆ ಬಟ್ಟೆ ಕಟ್ಟುತ್ತಿದ್ದೆ. ) "ಪಾದ ಯಾತ್ರೆ ಮಾಡಬೇಕೆಂದಿದ್ದೇವೆ. ಅದರ ಬಗ್ಗೆ ಆಲೋಚಿಸುತ್ತಿದ್ದೇವೆ" — ಎಂದು ಹೇಳಿದೆ. ಇದನ್ನು ಕೇಳಿದ ಕೂಡಲೇ ತಟ್ಟನೆ ನಮ್ಮ ಜೊತೆಗೆ ನೆಲದ ಮೇಲೆ ಕುಳಿತುಕೊಂಡರು. ನಾನು ಮತ್ತು ನನ್ನ ಮಿತ್ರರು ಅವರಿಗೆ ಬೇರೆ ಕಡೆಗೆ ಕುಳಿತುಕೊಳ್ಳೋಣ, ಅಥವಾ ಕೂಡಲಿಕ್ಕೆ ಹಾಸಿಗೆಯನ್ನು ತರುತ್ತೇವೆ ಎಂದು ಸೂಚಿಸಿದೆವು. "ಬೇಡ ನೀವು

ಕೊಟ್ಟಂತೆ ನಾನೂ ಕೊಡುತ್ತೇನೆ. ಮೊದಲು ಪಾದಯಾತ್ರೆ ಬಗ್ಗೆ ಮಾತಾಡೋಣ" ಎಂದು ಹೇಳಿದರು. ಅನಂತರ ಚರ್ಚೆಯಾಯಿತು. ಪುನಃ ಇದರ ಎಳೆಯನ್ನು ಮಾನ್ಯ ಜತ್ತಿಯವರಿಗೆ ಬಸವ ಸಮಿತಿಯ ಕಾರ್ಯದಲ್ಲಿ ಪ್ರೋತ್ಸಾಹಿಸಬೇಕು; ಮತ್ತು ಅವರಿಗೆ ನಮ್ಮೆಲ್ಲರ ಬೆಂಬಲದ ಭಾವನೆಯ ಸಂಕೇತವಾಗಿ ಏಕ ಸಮಯದಲ್ಲಿ ಬಸವ ಸಮಿತಿಗೆ ೧೧೧ ಜನರ ಅಜೀವ ಸದಸ್ಯತ್ವದ ೧೧,೧೧೧ ರೂಪಾಯಿ ನಿಧಿಯನ್ನು ಅರ್ಪಿಸಲು ಯಾದಗಿರಿಯಲ್ಲಿ ೧೯೭೫ರಲ್ಲಿ ಕರೆದ ಬೃಹತ್ ಸಭೆಯ ಸಮಯದಲ್ಲಿ ಜೋಡಿಸಲಾಯಿತು. ಆಗ ಸೂಚಿಸಿದ ಪಾದ ಯಾತ್ರೆಯ ರೂಪ ರೇಷೆಯನ್ನು ಆಯೋಜಿಸಲು ಮತ್ತು ಕಾರ್ಯಪ್ರವೃತ್ತನಾಗಲು ಅವರಿಂದ ಬಹು ಉತ್ಸಾಹೀ ಬೆಂಬಲ ಸಿಕ್ಕಿತು. ಬಸವ ಸಮಿತಿಯ ಪ್ರಚಾರಕ್ಕಾಗಿ ಸೂಕ್ತ ಸಾಧನ ಇದು ಎಂದು ಅವರ ಸೂಕ್ಷ್ಮ ದೃಷ್ಟಿ ಕಂಡುಹಿಡಿಯಿತು. ಆದುದರಿಂದಲೇ ಐತಿಹಾಸಿಕವಾದ ಬಸವ ಸಮಿತಿಯ ಪಾದಯಾತ್ರೆ, ಬಸವ ತತ್ವ ಪ್ರಚಾರದ ಮತ್ತು ಬಸವ ಸಮಿತಿಯ ಬೃಹತ್ ಬೆಳವಣಿಗೆಗೆ ಕಾರಣವಾಯಿತು.

## ಹಾಜರಿದ್ದೇನೆ

ಪಾದಯಾತ್ರೆಯಲ್ಲಿ ನಾನು ಸಂಚಾಲಕನಾಗಿದ್ದೆ. ಪ್ರಾರಂಭದಲ್ಲಿ ಮೊದಲನೆಯ ದಿನ ಆನೆಗುಂದಿಯಲ್ಲಿ ವಸತಿಯಾಯಿತು. ರಾತ್ರಿ ಮಲಗುವದಕ್ಕಿಂತ ಮೊದಲು ಆಹಾರ ಮಂತ್ರಿಗಳೂ ಬಸವ ಸಮಿತಿಯ ಅಧ್ಯಕ್ಷರೂ ಆಗಿದ್ದು ಪಾದಯಾತ್ರೆಯಲ್ಲಿ ಭಾಗವಹಿಸಿದ್ದ ಶ್ರೀ ಜತ್ತಿಯವರನ್ನು ಕಂಡು ನಾನು ಒಂದು ಮಾತನ್ನು ನಿವೇದಿಸಿಕೊಂಡೆ— "ಪಾದಯಾತ್ರೆಯನ್ನು ಬಹಳ ಶಿಸ್ತಿನಿಂದ ಸಂಘಟನೆಯಿಂದ ಒಯ್ಯಬೇಕೆಂದಿದ್ದೇನೆ. ಈ ಶಿಸ್ತಿಗೆ ಯಾರೂ ಹೊರಗಾಗಬಾರದು — ಎಂಬುದು ನನ್ನ ಇಚ್ಛೆ" ಎಂದು ಹೇಳಿದೆ "ಅದಕ್ಕೆ ನಾನೇನು ಮಾಡಬೇಕು ಹೇಳಿ" ಎಂದು ಅವರು ಕೇಳಿದರು. ನಾನು ಹೇಳಿದೆ "ಬೆಳಿಗ್ಗೆ ಸರಿಯಾಗಿ ಐದುವರೆ ಗಂಟೆಗೆ ಪಾದಯಾತ್ರೆ ಪ್ರಾರಂಭವಾಗುವದು. ಮೊದಲು ಎರಡು ಸೂಚನಾ ಗಂಟೆ (ಬೆಲ್) ಗಳು ಆಗುವವು. ಮೂರನೇ ಸೂಚನಾ ಗಂಟೆಗೆ ಸರಿಯಾಗಿ ಐದುವರೆ ಗಂಟೆಗೆ ಪಾದಯಾತ್ರೆ ಹೊರಡುವದು. ಅದಕ್ಕೆ ಬಸವ ಸಮಿತಿಯ ಅಧ್ಯಕ್ಷರೂ ಮತ್ತು ಮಾನ್ಯ ಮಂತ್ರಿಗಳೂ ಆದ ತಮ್ಮಿಂದ ತಡವಾಗಬಾರದೆಂದು ನನ್ನ ಅಪೇಕ್ಷೆ" ಎಂದು ತಿಳಿಸಿದೆ. ಬೆಳಿಗ್ಗೆ ಎರಡನೆ ಸೂಚನಾ ಗಂಟೆಯಾದ ಕೂಡಲೆ "ನೋಡ್ರಿ ರಡ್ಡಿಯವರೆ, ನಾನು ಹಾಜರಿದ್ದೇನೆ" ಎಂದು ನನ್ನ ಮುಂದೆ ಬಂದು

ನಿಂತರು. ಈ ಮಾತು ಬಹು ಪರಿಣಾಮಕಾರಿಯಾಯಿತು. ಮತ್ತು ನಮ್ಮೆಲ್ಲರಿಗೂ ಚೇತನದಾಯಕವೂ, ಸ್ಫೂರ್ತಿಕೊಡುವಂಥಾದ್ದು ಆಗಿತ್ತು. ಇದರ ಪರಿಣಾಮವಾಗಿಯೇ ಪಾದಯಾತ್ರೆಯು ಶಿಸ್ತು ಮತ್ತು ನಿಯಮಿತತನದ ಬಗ್ಗೆ ಬಹು ಪ್ರಸಿದ್ಧಿ ಪಡೆಯಿತು. ಈಗಲೂ ಅದರಲ್ಲಿ ಭಾಗವಹಿಸಿದವರಾಗಲಿ, ಭಾಗವಹಿಸದೆ ಅದನ್ನು ಸಂದರ್ಶಿಸಿದವರಾಗಲೀ, ಈ ಶಿಸ್ತು ನಿಯಮಿತತನವನ್ನು ಬಹುವಾಗಿ ನೆನೆಯುತ್ತಾರೆ.

## ದೂರ ದೃಷ್ಟಿ

೧೯೭೦ ರಲ್ಲಿ ಯಾದಗಿರಿಯಲ್ಲಿ ಬಸವ ಅಷ್ಟ ಶತಮಾನೋತ್ಸವದ ಎರಡು ದಿನಗಳ ಕಾರ್ಯಕ್ರಮ ಇಟ್ಟುಕೊಂಡಾಗ (ಆಗ ಶ್ರೀ ಜತ್ತಿಯವರು ಪಾಂಡಿಚೇರಿಯ ಉಪರಾಜ್ಯಪಾಲರಾಗಿದ್ದರು) ಅಲ್ಲಿ ಬಸವ ಸಮಿತಿಯ ಕಾರ್ಯಕಾರಿ ಸಮಿತಿಯ ಸಭೆಯನ್ನು ಕರೆಯಬೇಕೆಂದು ನಾನು ಸೂಚಿಸಿದೆ. "ಕಾರ್ಯಕಾರಿ ಸಮಿತಿಯಲ್ಲಿ ಒಹು ಜನರು ಬೆಂಗಳೂರು ಬಿಟ್ಟು ಈ ದೂರದ ಪ್ರದೇಶಕ್ಕೆ ಹೋಗಿ ತೊಂದರೆ ಪಡಬೇಕಾಗುವದು. ಕಾರ್ಯಕಾರಿ ಸಮಿತಿಯ ಸಭೆ ಅಲ್ಲಿ ಇಡುವದು ಬೇಡ"—ಎಂದು ವಾದಿಸಿದರು. "ಕಾರ್ಯ ನಡೆದಲ್ಲಿ, ಕಾರ್ಯಕರ್ತರು ಉತ್ಸಾಹದಿಂದ, ಅಭಿಮಾನದಿಂದ ಕೆಲಸ ಮಾಡುತ್ತಿದ್ದಲ್ಲಿ ನಾವು ಹೋಗದಿದ್ದರೆ ಬಸವ ಸಮಿತಿಯು ಬೆಂಗಳೂರಿನಲ್ಲಿ ಕುಳಿತು ಬೆಳೆಯುವದು ಹೇಗೆ ಸಾಧ್ಯ"? — ಎಂದು ಶ್ರೀ ಜತ್ತಿಯವರು ತಿಳಿಸಿದರು. ಕಾರ್ಯಗಳನ್ನು ನಡೆಸುವ ಮತ್ತು ಕಾರ್ಯತತ್ಪರರಾದ ಕಾರ್ಯಕರ್ತರನ್ನು ಉತ್ಸಾಹಭರಿತರನ್ನಾಗಿ ಮಾಡುವ ಅವರ ಈ ದೂರದೃಷ್ಟಿಯೇ ಬಸವ ಸಮಿತಿಯ ಬೆಳವಣಿಗೆಗೆ ಮುಖ್ಯ ಕಾರಣವಾಗಿದೆಯೆಂದು ಹೇಳಬಹುದು.

ಕಲಬುರ್ಗಿ ಮತ್ತು ಸೇಡಂನಲ್ಲಿ ಉತ್ಸಾಹೀ ಕಾರ್ಯಕರ್ತರು ತಮ್ಮ ತಮ್ಮ ಸ್ಥಳದಲ್ಲಿ ಬಸವ ಅಷ್ಟಶತಮಾನೋತ್ಸವವನ್ನು ದೊಡ್ಡ ಪ್ರಮಾಣದಲ್ಲಿ ಮಾಡಬೇಕೆಂದು ಯೋಜಿಸಿದಾಗ ತರುಣಕಾರ್ಯಕರ್ತರ ಉತ್ಸಾಹವನ್ನು ನಾನು ಅರಿಕೆ ಮಾಡಿಕೊಂಡ ಕೂಡಲೇ ಯಾವ ಪ್ರಮುಖ ಜನರೂ ಆ ಕಾರ್ಯಕ್ರಮಗಳ ಆಯೋಜನೆಯಲ್ಲಿ ಕಣ್ಣಿಗೆ ಕಾಣಿಸದಿದ್ದರೂ ನಿಜವಾದ ಕಳಕಳಿಯ ಕಾರ್ಯಕರ್ತರು ಇವರು — ಎಂದು ಅವರಿಗೆ ಖಚಿತವಾದ ಕೂಡಲೆ ಅವರನ್ನು ನಿರುತ್ಸಾಹಿಸಬಾರದೆಂಬ ಭಾವನೆಯಿಂದ ಪಾಂಡಿಚೇರಿಯಿಂದ ಈ ಎರಡೂ

ಕಾಯಕ್ರಮಗಳಿಗೆ ದಯಮಾಡಿಸಿದರು. ಈ ಎರಡೂ ಕಾರ್ಯಕ್ರಮಗಳು ಬಹು ದೊಡ್ಡ ಪ್ರಮಾಣದಲ್ಲಿ ಜರುಗಿದವು. ಕಾರ್ಯಕರ್ತರ ಕರ್ತೃತ್ವ ಶಕ್ತಿಯನ್ನು ಕಾಣುವ ಈ ದೃಷ್ಟಿಯೇ ಬಸವ ಸಮಿತಿಯ ಬೆಳವಣಿಗೆಗೆ ಮುಖ್ಯ ಕಾರಣವಾಗಿದೆ. ಕಾರ್ಯಕರ್ತರ ಪ್ರೋತ್ಸಾಹವೇ ಕಾರ್ಯಕರ್ತರಲ್ಲಿ ಬಹು ದೊಡ್ಡ ಅಭಿಮಾನವನ್ನು, ಉತ್ಸಾಹವನ್ನು ತುಂಬಿ ಬಸವ ಸಮಿತಿಗೆ ಬಹು ದೊಡ್ಡ ಬೆಂಬಲವಾಗಿ ನಿಲ್ಲುವಂತೆ ಮಾಡಿದೆ. ಜತ್ತಿಯವರ ಸೂಕ್ಷ್ಮ–ಗುಣ ಗ್ರಾಹಿತ್ವ, ಶಿಸ್ತಿನ ನಡವಳಿಕೆ, ಕಾರ್ಯಕರ್ತರಲ್ಲಿಯ ದಕ್ಷತೆಯನ್ನು ಕಂಡು ಹಿಡಿದು ಪ್ರೋತ್ಸಾಹಿಸುವ ರೀತಿ, ಬಸವ ಸಮಿತಿಯನ್ನು ಬೆಳೆಸುವ ಸಮಗ್ರ ದೃಷ್ಟಿ – ಇಂದು ಬಸವ ಸಮಿತಿಯನ್ನು ಹೆಮ್ಮರವನ್ನಾಗಿ ಮಾಡಿವೆ.

## ಆದರ್ಶಪ್ರಾಯ

ರಾಜಕೀಯದಲ್ಲಿ ಭಿನ್ನಾಭಿಪ್ರಾಯವಿದ್ದರೂ ಸಾಮಾಜಿಕ ಕಾರ್ಯಗಳಲ್ಲಿ ಅವರು ಹಮ್ಮಿಕೊಂಡ ಯೋಜನೆಗಳಲ್ಲಿ ರಾಜಕೀಯ ವಿರೋಧಾಭಾಸ ಇದ್ದವರನ್ನೂ ಸೇರಿಸಿಕೊಂಡು ಬಹು ದಕ್ಷತೆಯಿಂದ ಅವರು ಕಾರ್ಯಗಳನ್ನು ನಿರ್ವಹಿಸುವರು ರಾಜಕೀಯವಾದ ಈ ಭಿನ್ನಾಭಿಪ್ರಾಯಗಳು ಅಡ್ಡಿಯಾಗದೆ, ಸಾಮಾಜಿಕ ಕಾರ್ಯಗಳ, ವಿಶೇಷವಾಗಿ ಬಸವ ಸಮಿತಿಯನ್ನು, ಬೆಳೆಸುವಲ್ಲಿ ಅವರು ಪಡೆಯುತ್ತಿರುವ ಸಹಕಾರ ಕಾರ್ಯಕರ್ತರಿಗೆ ಒಂದು ಆದರ್ಶಪ್ರಾಯವಾಗಿದೆ. ರಾಜಕೀಯ ಕ್ಷೇತ್ರವೇ ಬೇರೆ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳೇ ಬೇರೆ. ದೇಶವನ್ನು ಕಟ್ಟಲು, ಸಮಾಜವನ್ನು ಸದೃಢ ಮಾಡಲು ತಮ್ಮ ರಾಜಕೀಯ ವಿರೋಧಗಳನ್ನು ಬಿಟ್ಟು ಮುನ್ನಡೆದಲ್ಲಿ ದೇಶದ ಮತ್ತು ಸಮಾಜದ ಕಾರ್ಯಗಳು ಕುಂಠಿತವಾಗಲಾರವು. ಹೊಸ ಸಮಾಜ ನಿರ್ಮಾಣಕ್ಕಾಗಿ ದೇಶವನ್ನು ಬಲಾಢ್ಯವನ್ನಾಗಿ ಮಾಡುವುದಕ್ಕಾಗಿ ಎಲ್ಲರನ್ನು ಕಟ್ಟಿಕೊಂಡು ಹೋಗುವ ದೃಷ್ಟಿ ಇಂದು ಬಹಳ ಅವಶ್ಯವಾಗಿದೆ. ಆ ಒಂದು ಭಾವನೆಯನ್ನು ನಮ್ಮ ರಾಷ್ಟ್ರದ ಜನರಲ್ಲಿ ಬೆಳೆಸಿದಾಗಲೇ ದೇಶದ ಸಮಗ್ರ ಸಮೃದ್ಧಿ ಆಗಬಹುದು. ವೈಯಕ್ತಿಕ ಮತ್ತು ರಾಜಕೀಯ ಭಿನ್ನಾಭಿಪ್ರಾಯವನ್ನು ಆಆ ಸ್ಥಾನಕ್ಕೇ ಬಿಟ್ಟು ಸಮಾಜ ರಚನೆಯ ಮತ್ತು ದೇಶ ಕಟ್ಟುವ ಕಾರ್ಯದಲ್ಲಿ ಎಲ್ಲರ ಸಹಕಾರ ಪಡೆಯುವ ದೃಷ್ಟಿ ಬೆಳೆದಾಗಲೇ ಸರ್ವ ರೀತಿಯ ಪ್ರಗತಿ ಸಾಧ್ಯ — ಎಂಬ ಅವರ ರೀತಿ – ನೀತಿಯನ್ನು ನಮ್ಮ ರಾಜಕೀಯ ಕಾರ್ಯಕರ್ತರು ತಿಳಿದುಕೊಳ್ಳುವದು ಇಂದು ಬಹಳ ಅವಶ್ಯವಾಗಿದೆ.

ಜೊಕ್ಕ ರಾಜಕಾರಣಿ, ದಕ್ಷ ಆಡಳಿತಗಾರರಾದ ಶ್ರೀ ಜತ್ತಿಯವರನ್ನು ನಾನು ಕಂಡದ್ದು ಒಳ್ಳೆಯ ಆದರ್ಶಪ್ರಾಯವಾದ ಸಾಮಾಜಿಕ ಕಾರ್ಯ ಕರ್ತನ ರೂಪದಲ್ಲಿ. ಸಾಮಾಜಿಕ ಕಾರ್ಯಕರ್ತನಾದ ನನಗೆ, ಅವರಲ್ಲಿ ನಾ ಕಂಡ ಸಾಮಾಜಿಕ ಕಾರ್ಯಕರ್ತನ ರೂಪ ಬಹು ಮೆಚ್ಚಿಗೆಯಾಗಿದೆ. ಆ ಮೆಚ್ಚುಗೆಯೇ ನನ್ನನ್ನು ಅವರಿಗೆ, ಅವರೆಲ್ಲ ಸಾಮಾಜಿಕ ಕಾರ್ಯಗಳಲ್ಲಿ ಸಾಧ್ಯವಿದ್ದ ನನ್ನ ಸಹಕಾರ ನೀಡಲು ಪ್ರೇರೇಪಿಸುತ್ತಿದೆ.



## ಅಹಂಕಾರದ ಮದಗಜ

ಆನೆಯನೇರಿಕೊಂಡು ಹೋದಿರೆ ನೀವು,
ಕುದುರೆಯನೇರಿಕೊಂಡು ಹೋದಿರೆ ನೀವು;
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ !
ಸತ್ಯದ ನಿಲವನರಿಯದೆ ಹೋದಿರಲ್ಲಾ !
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ
ಅಹಂಕಾರವೆಂಬಸದ ಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲ ಸಂಗನನರಿಯದೆ ನರಕಕ್ಕೆ ಭಾಜನವಾದಿರಲ್ಲಾ !

— ಬಸವಣ್ಣನವರು

# ಕೃತಜ್ಞತೆಗಳು

ಶ್ರೀ ಬಿ. ಡಿ. ಜತ್ತಿಯವರಿಗೆ ಅರ್ಪಿಸಲಿರುವ ಸಂಭಾವನಾ ಗ್ರಂಥಕ್ಕೆ
ಆಶೀರ್ವಚನಗಳನ್ನು ಕಳಿಸಿ, ಪಾವಿತ್ರ್ಯ ತಂದಿತ್ತ
ಸಮಸ್ತ ಪೂಜ್ಯ ಸ್ವಾಮಿಗಳವರಿಗೆ,

ವಿಚಾರ ಪರಿಪ್ಲುತ ಲೇಖನಗಳನ್ನು ಕಳುಹಿಸಿ ಗ್ರಂಥದ ಮಟ್ಟ ಎತ್ತರಿಸಿದ
ಸಮಸ್ತ ಲೇಖಕರಿಗೆ,

ಶ್ರೀ ಜತ್ತಿಯವರನ್ನು ಕುರಿತು ಭಾವಗೀತೆಗಳನ್ನು ಕಳಿಸಿ
ಗ್ರಂಥಕ್ಕೆ ಸೌಂದರ್ಯ ತಂದಿತ್ತ
ಪ್ರತಿಭಾನ್ವಿತ ಕವಿಪುಂಗವರಿಗೆ,

ಶ್ರೀ ಜತ್ತಿ ಅವರಿಗೆ ಸಂಬಂಧಿಸಿದ ಭಾವ ಚಿತ್ರಗಳನ್ನು ಕಳಿಸಿ
ಗ್ರಂಥದ ಶೋಭೆಯನ್ನು ಹೆಚ್ಚಿಸಿದ ಮಹನೀಯರಿಗೆ,
ಮುಖ್ಯವಾಗಿ ಶ್ರೀ ವೈ. ಕೆ. ಹೆಬ್ಬಳಿ ಅವರಿಗೆ,

ಗ್ರಂಥ ಸಂಪಾದನೆಯಲ್ಲಿ ಸೂಕ್ತ ಸಲಹೆ ಸಹಕಾರಗಳನ್ನಿತ್ತು
ಗ್ರಂಥವನ್ನು ಸುಪ್ರೌಢಗೊಳಿಸಿದ
ಸಲಹಾ ಮಂಡಳಿಗೆ,

ಸಕಾಲಕ್ಕೆ ಮುದ್ರಿಸಿಕೊಟ್ಟು ಸಮಸ್ತ ಸಹಕಾರವನ್ನು
ಸಾರ್ಥಕ್ಯಗೊಳಿಸಿದ
" ವಿಶ್ವಕಲ್ಯಾಣ " ಮುದ್ರಣಾಲಯದ ಒಡೆಯರು ಮತ್ತು ಸಿಬ್ಬಂದಿಯವರಿಗೆ,

ಕಲಾಪೂರ್ಣವಾಗಿ ಮುಖಪುಟದ ವಿನ್ಯಾಸ ರಚಿಸಿ
ಗ್ರಂಥದ ಕಳೆಯನ್ನು ದ್ವಿಗುಣಗೊಳಿಸಿದ
ಐಡಿಯಲ್ ಫೈನ್ ಆರ್ಟ ಸಂಸ್ಥೆಯ ಪ್ರಿನ್ಸಿಪಾಲ ವಿ. ಜಿ. ಅಂದಾನಿ ಅವರಿಗೆ,

ಮುಖಪುಟವನ್ನು ಮತ್ತು ಇತರ ಬ್ಲಾಕಗಳನ್ನು ಅಂದವಾಗಿ
ಮುದ್ರಿಸಿಕೊಟ್ಟ ಗ್ರಿನೋಬಲ್ಸ್ ಪ್ರೈ. ಲಿ. ರವರಿಗೆ,

ಪರೋಕ್ಷವಾಗಿ ಮತ್ತು ಅಪರೋಕ್ಷವಾಗಿ ಸಹಾಯ
ಸಲ್ಲಿಸಿದ ಎಲ್ಲ ಮಹನೀಯರಿಗೆ,
ನಮ್ಮ ಹಾರ್ದಿಕ ಕೃತಜ್ಞತೆಗಳು.

— ಸಂಪಾದಕ.

